ಶ್ರೀ ಕುಲಶೇಖರಾಳ್ವಾರ್ರವರ

# ಪೆರುಮಾಳ್ ತಿರುಮೊಳಿ




ಕನ್ನಡ ಅನುವಾದ ಮತ್ತು ವಿವರಣೆ:

ವೇದಭೂಷಣ, ದೇಶಿಕದರ್ಶನಚೂಡಾಮಣಿ, ವೇದರತ್ನಂ,

**ಸ್ವಚ್ಛಂದಂ ಎ. ಅನಂತನರಸಿಂಹಾಚಾರ್, ಎಂ.ಎ.,**

ಶ್ರೀಕಾರ್ಯಂ, ಶ್ರೀಮದಾಂಡವನ್ ಪೌಂಡರೀಕಪುರಂ ಸ್ವಾಮಿ

ಆಶ್ರಮಮ್, ಶ್ರೀರಂಗಮ್

ಸಂಸ್ಕೃತ ವಿಭಾಗದ ಮುಖ್ಯಸ್ಥರು, ಎ.ಪಿ.ಎಸ್. ವಾಣಿಜ್ಯ ಕಾಲೇಜು

ಬೆಂಗಳೂರು - 560 019.



ಪ್ರಕಾಶಕರು:

**ಅನಂತ ಪ್ರಕಾಶನ**

ನಂ. 33, 2ನೇ ಕ್ರಾಸ್, ಸಮೀರಪುರ,

ಬೆಂಗಳೂರು - 560 018

*PERUMAL TIRUMOZI—Original Text in Kannada Script : Kannada Translation & Kannada Commentary on it by Sri A. Ananthanarasimhachar.*

Pages : 4 + 26 + 156 = 186

First Edition : 1995

Copies : 1000

*Price :* **Rs. 25-00**

*Printed at :* Sri Lakshmi Printing Works, Bangalore-4.
&
Sri Jayadevi Printers, Bangalore-18.

*Published by :*

ANANTHA PRAKASHANA
33, 2nd Cross, Sameerpuram
Bangalore-560 018

श्रीरस्तु

।। श्रीमते श्रीनिवासमहादेशिकाय नमः ।।

    

[श्रीमद्वेदमार्गप्रतिष्ठापनाचार्याणां सर्वतन्त्रस्वतन्त्रोभयवेदान्ताचार्याणां श्रीरामनुजसिद्धान्तनिर्धारणसार्वभौमानां श्रीमन्नाथमुनि श्रीमद्यामुनमुनि-श्रीमद्रामानुज मुनि-मुनिरुप-मुनित्रयसिद्धान्त्र स्थापनाचार्याणां श्रीमतां श्री श्रीनिवासमहादेशिक सार्वभौमकठाक्षलब्धसार्वज्ञानां श्रीरङ्गस्थित श्रीमदाण्डवन्-पौण्डरीकपुरस्वामि-आश्रमे आचार्यपीवमलंकृतानां श्रीमतां श्रीगोपादेशिकमहादेशिकानां अनुग्रहलेखनम् ।]

## श्रीनिवासं परं ब्रह्म तन्नाम्नश्च गुरुत्तमान् ।
## नारायणं रंगनाथौ प्रणम्येदं विलिख्यते ।।

सर्वेषामेव अस्माकं श्रियः पतिः नारायणः पिता माता च भवति । तथाचोक्तं महाभारते वनपर्वणि मार्कण्डेयमहर्षिणा :

"सर्वेषामेव लोकानां पिता माता च माधवः ।
गच्छध्वमेनं शरणं शरण्यं पुरुषर्षभाः ।।" – इति

माता पुत्रस्य बहूनि शुभानि कर्माणि आरभते । पितां तं सन्मार्गे प्रवर्तयति । कुमार्गगमने तु शिक्षयति । उभावपि पुत्राणां अस्मांक श्रेयः प्रापणे बद्धदीक्षौ । श्रेयश्च अस्माकं अन्ते परमपदप्राप्तिरेव । श्रीवैकुण्ठमेव अस्माकं गृहाः । स्वगृहागमनं पितरौ, स्वगृहगमनं च पुत्राः अभिलषन्ति । तथाऽपि बहवो विघ्नाः स्वगृहगमने अस्माकम् । विघ्नानां कारणानि अस्मत्पापानि । तेषां निवृत्तये हिततमौ उपयौ भक्ति-प्रपत्ती । एतयोः अनुष्ठानाय अवश्यापेक्षितं आस्तिक्यज्ञानम् । एतादृशज्ञानप्रदानायैव भगवान् स्ययं बहुधा अवतरति । स्वयं हम्स मत्स्य हयग्रीवादिमुखेन वेदान् उपादिशत् । दाशरथित्वेन रामो भूत्वा स्वानुष्ठानमुखेन वेदोकत धर्मान् प्रचारयामास, कृष्णावतारे गीतामुखेन कर्म-ज्ञान-भक्ति-प्रपत्तिरूपाणां यागानां स्वरुपं उपदिदेश । परन्तु परस्य पुंसः सर्वे प्रयत्नाः विफलाः अभूवन् । तथाऽपि पुत्रवात्सल्यात् प्रकारान्तरेण प्रायतिष्ठ ।

भगवान् स्वयं साक्षात् अनवतीर्य मर्त्यवेषेण अवतितीर्षत् । मर्त्यसजातीयतया तेषु अन्यतमो भूत्वा वेदार्थप्रचाराय उद्दिदेश । सर्वः सगन्धेषु विश्वसितिकिल । तथाचोच्यते "साक्षान्नारायणो देवः कृत्वा मर्त्यमयीं तनूम् । मग्नानुद्धरते लोकान् कारुण्यात् शास्त्रपाणिना"-इति । अतः स्वस्य चिकीर्षितं साधयितुं शस्त्रपाणिः भगवान् शास्त्रपाणिः आळ्वार् रूपेण दशधा अवततार । मर्त्यभाषासु अन्यतमया भाषया द्रविड़या श्लोकान् (पाशुरङ्गळ्) अगायत् । गीता गानापेक्षया द्राविड़गाथागानं मर्त्यान् वशीचकार । भाषागानेन वशीकृतान्तःकरणाः बहवो जनाः दिव्यप्रबन्धगीतार्थान् मनसि ध्यायंध्यायं भगवल्लीलासु सौलभ्य सौशील्य परत्वादीन् अनुसन्धाय मोक्षमार्गं प्रावर्तन्त । विषयमिमं मनसि कुर्वन्तः निगमान्तार्याःस्वीये द्राविड़प्रबन्धे एवमन्वगृण्हन् । :-

"पोय्गैमुनि भूतत्तार् पेयाळ्वार् तण्पोरुनल् वरु कुरुकेशन् विष्णुचित्तन् तुय्य कुलशेखरन् नम्पाणनाथन् तोण्डरडिप्पोडि मळिशै वन्द शोदि वैयमेलां मरै विळङ्ग वाळ् वेलेन्दुं मङ्गैयर्कोन् एन्रु इवर्कळ् मकिळ्न्दु पाडुं शेय्य तमिळ् मालैकळ् नाम् तेळिय ओदि तेळियाद मरै निलङ्गळ् तेळिकिन्रोमे ॥" - इति ॥

एते श्रीमतो नारायणस्य अभिनव दशावतारभूताः । एषु अन्यतमत्वेन अवतीर्णाः कुलशेखर आळ्वार् ।

कुम्भे पुनर्वसुभवं केरले चोळपट्टणे ।
कौस्तुभांशं धराधीशं कुलशेखरमाश्रये ॥ – इति

स्वकीये दिव्यसूरि स्तोत्रे ब्रम्हतन्त्र स्वतन्त्र स्वामिनः ॥ कुलशेखराः एते केरलदेशीय कोल्लिनामके नगरे कौस्तुभांशत्वेन पराभव कुम्भ शुक्ल द्वादशी पुनर्वसुयुते दृढव्रतस्य राज्ञः पुत्रतया अवातरन् । बाल्य एव संस्कृते द्राविड्यां, धनुर्वेदे च निपुणाः आसन् । आबाल्यात्प्राप्तः सत्संगः एतान् इतिहास, पुराण, दिव्यदेश माहात्म्यादि श्रवणे न्ययुङ्क्त, पश्चात् क्रमेण परमभागवतान् अचीकरत् । एकदा श्रीमद्रामायणकथां शृण्वन्तः आसत । तदा प्रवक्ता महता उत्साहेन खरदूषण त्रिशिरा नेतृकैः चतुर्दशसहस्रसंख्याकराक्षससैनिकैः सह रामेण एकाकिना क्रियमाणं युद्धं अवर्णयत् । तदा झटिति ततो निर्गत्य राजशासनं प्रचारयामास- "सर्वैरपि सैनिकैः सायुधैः जनस्थाने युद्धाय सन्नद्धैः भवितव्यमिति" । शासनाद्भीतेन मन्त्रिमण्डलेन प्रचोदितः प्रवक्ता "तं दृष्टवा शत्रुहन्तारं महर्षीणां सुखावहं । वभूव

हृष्टा वैदेही भर्तारं परिषस्वजे" इति श्लोकं उच्चैः उद्धृष्य, विजयिनं रामं सीता सत्वरमागत्य हर्षोत्फुल्लगात्रा दृढतरं आलिलिंग। महर्षयः "श्रीराम जय राम जय जय राम" इत्यस्तुवन्निति वदन् उपन्यासमपूरयत्। तच्छुत्वा प्रतिनिवृत्ताः युद्धसंरम्भात्। केवलं कथायां श्रुतं उदन्तं तात्विकं अमन्यन्त। कुतः ?। तेषां भुवनाभिरामे सर्वगुणारामे रामे अहो कीदृशी अचंचला सुदृढा भक्तिः। परम भावुकाः एते। एषां अपरमात्मनि सुतीव्रं वैराग्यं, भगवदनुभवरसमग्नतां च एतत्कृतिषु सम्पश्यामः। परमनास्तिकोऽपि मुकुन्दमालां पठन् भगवति परमभक्तः परिवर्तेत। पेरुमाळ् तिरुमोळिप्रबन्धे श्रीरंगादि क्षेत्राधीशभगवद्विषये, विभवावतारयोः रामकृष्णयोश्च विषये स्तुतानां श्रीसूक्तीनां भावाः अनुसन्धानमात्रेण मनांसि द्रवीकुर्वन्ति।

एषां भगवद्भक्तिरिव भागवतभक्तिरपि अतिशयिता आसीत्। अतः राजगृहे तदा तदा भागवताः अगच्छन्त एव अवर्तन्त। अन्येषां तत्रापि भागवतानां आगमनं अमात्याः नैच्छन्। अतः तन्निरोधाय राज्ञः आराध्यभूतायाः अर्चामूर्तेः स्वर्णाभरणानि अन्यत्र अपनाय्य तानि भागवता एव अमूमुषन् इति महाराजे व्यजिज्ञपन्। तदा कुलशेखराः सर्पयुतं घटमानाय्य "भागवताः न मुष्णीयुः, यदि ते भगवद्भूषणापहर्तारः स्युः तदा एते सर्पाः मां दशन्तु" इति वदन्तः स्वहस्तं घटस्यान्तः प्रवेशयामासुः। सर्पाः एतान् न ददशुः अपितु हस्तं अचुम्बन्। एतत् दृष्टवा सर्वे विस्मयं आप्नुवन्।

भगवति भागवतेषु च एषां भक्तिः दृष्टवा जनाः मन्त्रिणश्च एतान् 'पेरुमाळ्' 'कुलशेखर पेरुमाळ' इति नाम्ना व्याजह्रुः। एतदीयां द्रविडगाथां "पेरुमाळतिरुमोळि" इत्येव वदन्ति। अत्र प्रबन्धे एकैकस्मिन्नपि पाशुरे भक्तिरसः विजृम्भते। भावाः अतिविचित्राः। पठितॄणां श्रोतॄणां च मनांसि समाकर्षन्ति। रञ्जयन्ति च। नेत्रेषु आनन्दबाष्पं स्रावयन्ति।

इदं भक्तभागवतकुलशेखरस्य पञ्चोत्तरशतसंख्याकगाथात्मकं पेरुमाळ्-तिरुमोळिनामकं प्रबन्धं अर्थानुसन्धानपूर्वकं ये पारायणं कुर्वन्ति तेषां निरवधिका भगवद्भागवत भक्तिः वर्धेत। ततस्ते परमं श्रेयश्च प्राप्नुयुः।

अतः कर्णाटकवासिनां उपचिकीर्षया अस्मत् प्रियशिष्याः अस्मदाश्रमीय श्रीकार्यधुरं वहन्तः, वेदभूषणाः देशिकदर्शनचूडामणयः स्वच्छन्दं अनन्तनरसिंहाचार्याः M. A. द्राविडभाषात्मकं इमं प्रबन्धं सुललितया सर्वविबोधार्हया शैल्या कन्नडभाषायां व्याख्याच सर्वमङ्गळप्रदे पवित्रतमे श्रीरामनवमी महोत्सवसमये प्रकाशयन्तीति श्रुत्वा महान्तं आनन्दं अनुभवामः ।

प्रकाशकाः एते अरोगदृढगात्रा दीर्घायुष्मन्तः सर्वसम्पत्समृद्धिमन्तः भूयासुः तथा साम्प्रदायिकार्थप्रकारेण अतिपरिश्रमिणः भवेयुः । एवं साम्प्रदायिक ग्रन्थ प्रकाशने धनेन, प्रोत्साहनेन, साहयकरणेन, मुद्रितप्रबन्ध स्वीकरेण च उपकुर्वन्तोऽपि सर्वाभीष्टसिद्धिमन्तः भूयासुरिति पूर्वाचार्यसन्ततिं, श्रीरंगदिव्यदम्पती च सम्प्रार्थ्य नारायणस्मरण पूर्वकशुभानि मंगलानि आशास्महे ॥

नारायण नारायण

***

श्रीमते श्रीगोपालदेशिकमहादेशिकाय नमः

अस्मत्प्रार्थनां अङ्गीकृत्य एतत्ग्रन्थस्य रक्षाकवचमिव अनुग्रहलेखनं अनुगृहीतृभ्यः श्रीमद्भ्यः श्रीगोपालदेशीकमहादेशिकेभ्यः अस्मद्गुरुभ्यः वयं चिरऋणिनः ।

इति
आचार्यपादाङ्घ्रिरेणुः
अनन्तनरसिंहदासः

# ಮುನ್ನುಡಿ

**ಶ್ರೀಮತೇ ಶ್ರೀನಿವಾಸಮಹಾದೇಶಿಕಾಯ ನಮಃ**
**ಶ್ರೀಕುಲಶೇಖರಾಳ್ವಾರ್ ತಿರುವಡಿಗಳೇ ಶರಣಮ್**
**ಕುಂಭೇ ಪುನರ್ವಸೌ ಜಾತಂ ಕೇರಲೇ ಚೋಲಪಟ್ಟಣೇ |**
**ಕೌಸ್ತುಭಾಂಶಂ ಧರಾಧೀಶಂ ಕುಲಶೇಖರಮಾಶ್ರಯೇ ||**

**"ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭರತ | ಅಭ್ಯುತ್ಥಾನ-ಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ ||"**—ಎಂದು ಭಗವದ್ಗೀತೆಯಲ್ಲಿ ತನ್ನ ಅವತಾರ ರಹಸ್ಯವನ್ನು ತಿಳಿಸುವ ಸಮಯದಲ್ಲಿ, ಧರ್ಮಕ್ಕೆ ಗ್ಲಾನಿಯುಂಟಾಗಿ, ಅಧರ್ಮವು ತಲೆದೋರಿದಾಗ, ಧರ್ಮವನ್ನು ಸ್ಥಾಪಿಸಿ, ಸಾಧುಗಳಾದ ತಮ್ಮ ಭಕ್ತರ ಪರಿರಕ್ಷಣೆಯನ್ನು ಮಾಡುತ್ತೇನೆಂದು ಶ್ರೀ ಕೃಷ್ಣನು ಅರ್ಜುನನಿಗೆ ಹೇಳಿದನು. ಕೆಲವು ವೇಳೆಯಲ್ಲಿ ಈ ಮೇಲೆ ಹೇಳಿದ ಕೆಲಸ ಮಾಡಲು ತಾನು ನೇರವಾಗಿ ಬರದೆ, ಶ್ರೀವೈಕುಂಠದಲ್ಲಿ ತನ್ನೊಡನೆಯೇ ಇದ್ದು, ಅವನ ನಿರಂತರ ಕೈಂಕರ್ಯಮಾಡುತ್ತಿರುವ ಕೆಲ ನಿತ್ಯಸೂರಿಗಳನ್ನು ಭೂಲೋಕದಲ್ಲಿ ಅವತರಿಸುವಂತೆ ಮಾಡಿ, ಅವರ ಮುಖಾಂತರ ತನ್ನ ಅವತಾರಕೃತ್ಯಗಳನ್ನು ಸಾಧಿಸುತ್ತಾನೆ. ಆ ರೀತಿಯಾಗಿ ಅವತರಿಸಿದ ನಿತ್ಯಸೂರಿಗಳೇ ನಮ್ಮ ಆಳ್ವಾರಾಚಾರ್ಯರೆಲ್ಲರೂ. ಅವರ ಮಧ್ಯದಲ್ಲಿ ಕುಲಶೇಖರಾಳ್ವಾರ್ರವರು, ಭಗವಂತನ ವಕ್ಷಸ್ಥಲದಲ್ಲಿ ನಿತ್ಯವಾಸ-ಮಾಡುವ ಕೌಸ್ತುಭಾಂಶರಾಗಿ ಅವತರಿಸಿದ್ದರು.

ಚೇರಮಂಡಲದಲ್ಲಿನ 'ಕುಕ್ಕುಟಕ್ಕೋಡು'—ಎಂಬ ರಾಜಧಾನಿಯಲ್ಲಿ, ದೃಢವ್ರತನೆಂಬ ಅರಸನು ರಾಜ್ಯಭಾರಮಾಡುತ್ತಿದ್ದನು. ಅವನು ಬಹಳ ವರ್ಷಗಳ ಕಾಲ ಸಂತಾನವಿಲ್ಲದುದರಿಂದ ದುಃಖಿತನಾಗಿರಲು, ಒಮ್ಮೆ ಕೆಲಮಹಾತ್ಮರು ಅವನನ್ನು ಕುರಿತು, ಶ್ರೀಮನ್ನಾರಾಯಣನನ್ನು ವಿಶೇಷವಾಗಿ ಆರಾಧಿಸಿ ಪ್ರಾರ್ಥಿಸಿದರೆ ಖಂಡಿತವಾಗಿಯೂ ಸಂತಾನಪ್ರಾಪ್ತಿಯಾಗುತ್ತದೆ—ಎಂದು ಹೇಳಿದರು. ಅವರ ಮಾತಿಗೆ ಓಗಟ್ಟು, ಅರಸನು ಧರ್ಮಪತ್ನೀಸಹಿತನಾಗಿ ಶ್ರೀಮನ್ನಾರಾಯಣನನ್ನು ಭಕ್ತಿಪುರಸ್ಸರವಾಗಿ ಅನೇಕ ಕಾಲ ಆರಾಧಿಸಿದನು. ಅದರ ಫಲವಾಗಿ ಆತನ ಪತ್ನಿಯೂ ಗರ್ಭವತಿಯಾದಳು. ಬಳಿಕ ಒಂಬತ್ತು ತಿಂಗಳು ಕಳೆಯಲಾಗಿ, ಆಕೆಯು ಕಲ್ಯಬ್ದ ೨೮ನೇ ವರ್ಷ ಪರಾಭವನಾಮಸಂವತ್ಸರದ ಕುಂಭಮಾಸ ಶುಕ್ಲದ್ವಾದಶಿ, ಗುರುವಾರ ಪುನರ್ವಸು ನಕ್ಷತ್ರ ಕೂಡಿದ ಶುಭದಿನದಂದು, 'ತಿರುವಂಜಿಕ್ಕಳಂ'—ಎಂಬ ದಿವ್ಯಕ್ಷೇತ್ರದಲ್ಲಿ ಪುತ್ರರತ್ನವನ್ನು ಹಡೆದಳು. ಅರಸ-

ನಾದರೋ ಅತ್ಯಧಿಕವಾದ ಆನಂದದಿಂದಕೂಡಿ, ಹನ್ನೊಂದನೆಯ (ಮಂಗಳ ಸ್ನಾನದ) ದಿನದಂದು, ಅನೇಕಮಹಾತ್ಮರನ್ನು ಕರೆಯಿಸಿ ಇವನ ಸಾಮುದ್ರಿಕಾ-ಲಕ್ಷಣಗಳಿಗನುಗುಣವಾಗಿ ಇವನಿಗೆ ನಾಮಕರಣ ಮಾಡಬೇಕೆಂದು, ಅವರಲ್ಲಿ ವಿಜ್ಞಾಪಿಸಿದಾಗ, ಆ ಮಹಾತ್ಮರು, ಆಶಿಶುವಿನ ಲಕ್ಷಣಗಳನ್ನು ಕಂಡು, ಇವನು ದೃಢವ್ರತಮಹಾರಾಜನ ವಂಶದಲ್ಲಿಯೇ ಅಪ್ರತಿಮವಾದ ಕೀರ್ತಿಯನ್ನು ಪಡೆದು-ಎಂದೆಂದೂ ಇವನ ಹೆಸರು ಮತ್ತು ವಂಶ ಪ್ರಕಾಶಕವಾಗಿರುತ್ತದೆ—ಎಂದು ಹೇಳಿದುದರಿಂದ, ಸಂತುಷ್ಟಾಂತರಂಗವುಳ್ಳ ಮಹಾರಾಜನು-ತನ್ನ ಕುಲದಲ್ಲಿಯೇ ಶ್ರೇಷ್ಠನಾದವನೆಂದು ಅರ್ಥಬರುವ 'ಕುಲಶೇಖರ' — ಎಂದು ಆ ಶಿಶುವಿಗೆ ನಾಮಕರಣಮಾಡಿದನು.

ಕುಲಶೇಖರನು ದಿನದಿನವೂ ಶುಕ್ಲಪಕ್ಷದ ಚಂದ್ರನಂತೆ ಅಭಿವೃದ್ಧಿಹೊಂದು-ತ್ತಿದ್ದನು. ಇವನ ತಂದೆಯು ಇವನಿಗೆ ಆಯಾ ಕಾಲದಲ್ಲಿ ಮಾಡಬೇಕಾದ, ಅನ್ನಪ್ರಾಶನ, ಚೌಲ, ಉಪನಯನಾದಿ ಸಂಸ್ಕಾರಗಳನ್ನು ಮಾಡಿದನು. ಬಳಿಕ ಕುಲಶೇಖರನು, ಸಾಂಗೋಪಾಂಗವಾಗಿ ವೇದಾಧ್ಯಯನವನ್ನೂ ತನ್ನ ವರ್ಣಕ್ಕೆ ಪ್ರಧಾನವಾದ ನೀತಿಶಾಸ್ತ್ರ, ರಥಗಜತುರಗಾದಿ ಶಾಸ್ತ್ರಗಳನ್ನೂ ಕೆಲವೇ ಕಾಲದಲ್ಲಿ ಪರಿಪೂರ್ಣವಾಗಿ ಅಧ್ಯಯನ ಮಾಡಿ, ಅವುಗಳಲ್ಲಿ ಅನುಪಮವಾದ ನೈಪುಣ್ಯವನ್ನೂ ಪಡೆದನು. ಇವನ ವಿದ್ಯಾಚಾತುರ್ಯವನ್ನು ಕಂಡ ದೃಢವ್ರತನು ಸಂತುಷ್ಟನಾಗಿ, ಇವನಿಗೆ ಯೌವರಾಜ್ಯಾಭಿಷೇಕವನ್ನೂ ಮಾಡಿದನು.

ಬಳಿಕ ಚತುರಂಗ ಬಲ ಸಹಿತನಾಗಿ ದಿಗ್ವಿಜಯ ಯಾತ್ರೆಯನ್ನೂ ಹೊರಟು ಕುಲಶೇಖರನು, ಚೋಳ, ಪಾಂಡ್ಯಾದಿ ದೇಶಗಳ ಅರಸರನ್ನು ಜಯಿಸಿ ಅವರ ರಾಜ್ಯಗಳನ್ನೂ, ತನ್ನ ವಶಮಾಡಿಕೊಂಡು, 'ಚೇರಚೋಳಪಾಂಡ್ಯದೇಶಗಳ ಪ್ರಭು-ಶ್ರೇಷ್ಠ'—ಇತ್ಯಾದಿಯಾದ ಬಿರುದಾವಳಿಗಳಿಂದ ಅಲಂಕೃತನಾಗಿ ಎಲ್ಲೆಡೆಯಲ್ಲಿಯೂ ಪ್ರಸರಿಸಲ್ಪಟ್ಟ ಕೀರ್ತಿಯುಳ್ಳವನಾಗಿ ಪ್ರಕಾಶಿಸಿದನು. ಬಳಿಕ ದೃಢವ್ರತ-ಮಹಾರಾಜನಾದರೋ 'ವಾರ್ಧಕ್ಯೇ ಮುನಿವೃತ್ತೀನಾಂ'—ಎಂದು ಹೇಳುವಂತೆ, ತಪಸ್ಸನ್ನಾಚರಿಸಲು ಇಚ್ಛುಕನಾಗಿ, ತನ್ನ ಮಗನಾದ ಕುಲಶೇಖರನಿಗೆ ರಾಜ್ಯದಲ್ಲಿ ಪಟ್ಟಾಭಿಷೇಕ ಮಾಡಿ, ರಾಜ್ಯಭಾರದ ಹೊಣೆಯನ್ನು ಅವನಿಗೆ ವಹಿಸಿ, ತಾನು ತಪೋವನವನ್ನು ಸೇರಿದನು.

ಕುಲಶೇಖರನಾದರೋ, ತನ್ನ ತಂದೆಯ ಆಜ್ಞೆಯಮೇರೆಗೆ, ಚಾಚೂ-ತಪ್ಪದೆ ನೀತಿಮಾರ್ಗವುಳ್ಳವನಾಗಿ, ರಾಮಚಂದ್ರನ ಅಪರಾವತಾರವೋ ಎಂದು ಪ್ರಜೆಗಳು ಕೊಂಡಾಡುವಂತೆ, ಧರ್ಮದಿಂದ ರಾಜ್ಯಭಾರಮಾಡುತ್ತಾ ಪರಿಪೂರ್ಣ-

ವಾದ ಪ್ರಜಾನುರಾಗವನ್ನು ಹೊಂದಿದವನಾಗಿ, ಸಕಲಸಂಪತ್ ಸಮೃದ್ಧಿಯಿಂದ ಕೂಡಿದವನಾಗಿದ್ದನು. ಹೀಗೆ ಕೆಲ ಕಾಲ ಕಳೆಯಲಾಗಿ ಹಿರಿಯರ ನಿರ್ದೇಶದಂತೆ, ಗೃಹಸ್ಥಾಶ್ರಮವನ್ನು ಸ್ವೀಕರಿಸಿ ಪುತ್ರಿ ಸಂತಾನವೊಂದನ್ನು ಮತ್ತು ಪುತ್ರ ಸಂತಾನವೊಂದನ್ನೂ ಪಡೆದನು. ಸ್ತ್ರೀಶಿಶುವಿಗೆ 'ಇಳಾ' ಎಂದೂ, ಪುಂಶಿಶುವಿಗೆ ತನ್ನ ತಂದೆಯ ಹೆಸರನ್ನೇ ಇಟ್ಟು 'ದೃಢವ್ರತ'—ಎಂದೂ ನಾಮಕರಣ ಮಾಡಿದನು. ಹೀಗೆ ನಾನಾ ರೀತಿಯಾದ ಐಹಿಕ ಸುಖ ಸಮೃದ್ಧಿಗಳಿಂದ ಸಂತುಷ್ಟಾಂತರಂಗನಾದ ಕುಲಶೇಖರನಿಗೆ, ಆಮುಷ್ಮಿಕವಿಷಯಗಳಲ್ಲಿ ಜಿಜ್ಞಾಸೆಯುಂಟಾಯಿತು. ಬಳಿಕ ವಿದ್ವದ್ವರೇಣ್ಯರೂ ನಿಷ್ಠಾವಂತರೂ ಆದ ಅನೇಕ ಮಹಾತ್ಮರ ಸಂಸರ್ಗದಿಂದ ಶ್ರುತಿಸ್ಮೃತೀತಿಹಾಸ ಪುರಾಣಗಳನ್ನು ಅಧ್ಯಯನ ಮಾಡಿದ ಕುಲಶೇಖರನಿಗೆ ಶ್ರೀಮನ್ನಾರಾಯಣನೇ ಪರತತ್ತ್ವವೆಂದೂ, ಕರ್ಮಬಂಧದಿಂದ ಅನುಸ್ಯೂತವಾಗಿ ಒಂದಾದ ನಂತರ ಮತ್ತೊಂದು ಕ್ರಮವಾಗಿ ಬರುತ್ತಿರುವ ಜನ್ಮಮರಣ ಚಕ್ರದಿಂದ ಬಿಡುಗಡೆ ಹೊಂದಬೇಕಾದರೆ ಪರಮಾತ್ಮನಲ್ಲಿ ಶರಣು ಹೋಗದೆ ಬೇರೆ ಮಾರ್ಗವಿಲ್ಲವೆಂದೂ —'ಪ್ರಪನ್ನಾದನ್ಯೇಷಾಂ ನ ದಿಶತಿ ಮುಕುಂದೋ ನಿಜಪದಮ್', ಅವನಲ್ಲಿ ಪ್ರೀತ್ಯತಿಶಯರೂಪವಾದ ಭಕ್ತಿಯಿಂದಿರುವಿಕೆಯೇ ನಮ್ಮ ಸ್ವರೂಪವೆಂದೂ ಅವನ ಕಲ್ಯಾಣ ಗುಣಗಳನ್ನೂ ಲೀಲಾಚೇಷ್ಟಿತಗಳನ್ನೂ ಅನುಸಂಧಾನ ಮಾಡುವುದೇ ನಮಗೆ ಸ್ವರೂಪವೆಂದೂ ನಿಶ್ಚಯಾತ್ಮಕಜ್ಞಾನವುಂಟಾಯಿತು. ಬಳಿಕ ಕುಲಶೇಖರನಿಗೆ ಭಗವಂತನ ವಿಭವಸ್ವರೂಪಗಳಲ್ಲಿ ರಾಮಾವತಾರದ ಸ್ವರೂಪದಲ್ಲಿಯೂ, ಅರ್ಚಾಮೂರ್ತಿ ಸ್ವರೂಪಗಳಲ್ಲಿ ಶ್ರೀರಂಗನಾಥನ ಸ್ವರೂಪದಲ್ಲಿಯೂ ವಿಶೇಷವಾದ ಭಕ್ತಿಯುಂಟಾಗಿ ನಿರಂತರವಾಗಿ ಶ್ರೀಮದ್ರಾಮಾಯಣ ಪಾರಾಯಣವನ್ನು ತಾನು ಮಾಡುವುದು ಮತ್ತಿತರರಿಂದ ಮಾಡಿಸುವುದು, ಕಥಾಕಾಲಕ್ಷೇಪ ಹೇಳುವುದು ಹೇಳಿಸುವುದು ಮತ್ತು ಭಗವದ್ಭಕ್ತರ ಆರಾಧನೆಯನ್ನು ಮಾಡುವುದರಲ್ಲಿಯೂ ವಿಶೇಷವಾದ ಆದರವೂ ಉಂಟಾಯಿತು. ತಮ್ಮ ಮನೆಯಲ್ಲಿ ಆರಾಧನೆ ಮಾಡಲು ಸುಂದರವಾದ ಶ್ರೀರಾಮಚಂದ್ರನ ಮತ್ತು ರಾಜಗೋಪಾಲನ ವಿಗ್ರಹಗಳನ್ನು ಪ್ರತಿಷ್ಠಾಪಿಸಿಕೊಂಡು ಆ ಪರಮಾತ್ಮನ ದಿವ್ಯಮಂಗಳ ವಿಗ್ರಹಗಳಿಗೆ ನಿತ್ಯೋತ್ಸವ ಪಕ್ಷೋತ್ಸವ ಮಾಸೋತ್ಸವ ಸಂವತ್ಸರೋತ್ಸವಗಳನ್ನು ವಿಶೇಷವಾಗಿ ಮಾಡುತ್ತಾ ಅನ್ಯಾದೃಶವಾದ ಭಗವದ್ಭಾಗವತ ಭಕ್ತಿ ಸಂಪದ್ಭರಿತರಾಗಿ ಕುಲಶೇಖರರು ಭಾಗವತ ಶ್ರೇಷ್ಠರಾಗಿ ಬೆಳಗಿದರು.

ಶ್ರೀಮದ್ರಾಮಾಯಣದ ಕಥಾಕಾಲಕ್ಷೇಪವನ್ನು ಕೇಳುತ್ತಿದ್ದ ಕುಲಶೇಖರರಿಗೆ, ಒಮ್ಮೆ ಭಾಗವತರು ಅರಣ್ಯಕಾಂಡದ ಪ್ರಸ್ತಾಪವನ್ನು ಹೇಳುತ್ತಾ—'ಜನಸ್ಥಾನದಲ್ಲಿ ಭಯಂಕರವಾದ ಕೃತ್ಯಗಳುಳ್ಳ ಹದಿನಾಲ್ಕುಸಾವಿರರಾಕ್ಷಸರಿಗೂ ಧರ್ಮಾತ್ಮನಾದ

ಒಬ್ಬಂಟಿಗನಾದ ರಾಮನಿಗೂ ಹೇಗೆ ತಾನೇ ಯುದ್ಧವಾಗುತ್ತದೋ'—'ಚತುರ್ದಶ ಸಹಸ್ರಾಣಿ ರಕ್ಷಸಾಂ ಭೀಮಕರ್ಮಣಾಂ। ಏಕಶ್ಚರಾಮೋ ಧರ್ಮಾತ್ಮಾ ಕಥಂ ಯುದ್ಧಂ ಭವಿಷ್ಯತಿ॥'—ಎಂಬ ವಾಲ್ಮೀಕಿಯ ಮಾತನ್ನು ಹೇಳಿದರು. ಈ ಮಾತನ್ನು ಕೇಳಿ ರಾಮನಲ್ಲಿ ವಿಶೇಷವಾದ ಭಕ್ತಿಯಿಂದ ಕೂಡಿದ ಕುಲಶೇಖರರು ಕಾಲಾಂತರದಲ್ಲಿಯೂ ದೇಶಾಂತರದಲ್ಲಿಯೂ ಆದ ಯುದ್ಧವು ತತ್‌ಕ್ಷಣದಲ್ಲಿ ನಡೆಯುತ್ತಿರುವಂತೆ ಭಾವಿಸಿ, 'ಇದೇನಿದು ಭಗವಂತನಾದ ರಾಮಚಂದ್ರನೊಬ್ಬಂಟಿಗನಾಗಿ ಯುದ್ಧ ಮಾಡುತ್ತಿರುವಲ್ಲಿ ಚತುರಂಗ ಬಲಸಹಿತವಾದ ನಾವು ಸುಮ್ಮನಿರುವುದೇ ? ಇದೋ ಈಗಲೇ ಸೇನಾಸಹಿತರಾಗಿ ನಾವೆಲ್ಲರೂ ಪಂಚವಟಿಯನ್ನು ಸೇರಿ ಶ್ರೀರಾಮನಿಗೆ ಸಹಾಯಮಾಡಿ ರಾಮಚಂದ್ರನ ಜಯ- ವನ್ನು ಕಾಣುವ'—ಎಂದು ಹೇಳುತ್ತಾ ಸೇನೆಯನ್ನು ಸಿದ್ಧಪಡಿಸಲು ಘಟ್ಟಿಯಾಗಿ ಕೂಗಾಡುತ್ತ ಆಜ್ಞೆಮಾಡಿದನು. ಈ ರೀತಿ ಭಾವಾವೇಷದಿಂದ ಕೂಗಾಡುತ್ತಿದ್ದ ರಾಜನನ್ನು ಕಂಡು ಚತುರನಾದ ಪೌರಾಣಿಕನು — (ಶತ್ರುಗಳೆಲ್ಲರನ್ನೂ ಸಂಹರಿಸಿ ಮಹರ್ಷಿಗಳಿಗೆ ಸುಖವನ್ನುಂಟುಮಾಡಿದ ತನ್ನ ಪತಿಯಾದ ಆ ಶ್ರೀರಾಮಚಂದ್ರನನ್ನು ಕಂಡು ಸಂತುಷ್ಟಳಾದ ಸೀತಾದೇವಿಯು ಆತನನ್ನು ಗಾಢವಾಗಿ ಆಲಿಂಗನಮಾಡಿಕೊಂಡಳು)–"ತಂ ದೃಷ್ಟ್ವಾ ಶತ್ರುಹಂತಾರಂ ಮಹರ್ಷೀಣಾಂ ಸುಖಾವಹಂ। ಬಭೂವ ಹೃಷ್ಟಾ ವೈದೇಹೀ ಭರ್ತಾರಂ ಪರಿಷಸ್ವಜೇ ॥"— ಎಂಬ ಶ್ಲೋಕವನ್ನು ಹೇಳಿದರು. ಅದನ್ನು ಕೇಳಿದ ರಾಜನಿಗೆ, ತನ್ನ ಸ್ವಾಮಿಯಾದ ಶ್ರೀರಾಮಚಂದ್ರನ ಅಸಹಾಯಶೂರತ್ವ, ಯಾವ ತೊಂದರೆಗೂ ಒಳಗಾಗದ ಸಾಹಸ, ರಾಕ್ಷಸರ ಸಮೂಹವನ್ನು ಉನ್ಮೂಲನಮಾಡುವ ಸಾಮರ್ಥ್ಯಾದಿಗಳು ತಿಳಿದು ಬಂದು, ಮನಸ್ಸಿನ ಆತಂಕವೆಲ್ಲವೂ ದೂರವಾಯಿತು. ಅಂದಿನಿಂದ ಪೌರಾಣಿಕರು ಶ್ರೀರಾಮನ ಸಾಹಸಾದಿಗಳ ವಿವರಣ ಪ್ರಸ್ತಾಪಗಳನ್ನು ಮಾತ್ರ ವಿಸ್ತಾರವಾಗಿ ವಿವರಿಸಿ, ಅವನ ಕ್ಲೇಶಸಂಭವವಿಷಯಗಳನ್ನು ಸಂಕ್ಷೇಪವಾಗಿ ಹೇಳಿ, ಕೂಡಲೇ ಅವನ ವಿಜಯವಾರ್ತಾಪ್ರಸ್ತಾಪವನ್ನು ಮಾಡಿ ಕಥಾಕಾಲಕ್ಷೇಪಮುಗಿಸುತ್ತಿದ್ದರು.

ಒಮ್ಮೆ ಪುರಾಣಿಕರು, ಕಾರ್ಯಾಂತರ ವ್ಯಾಪೃತರಾದುದರಿಂದ, ತನ್ನ ಮಗನನ್ನು ಪುರಾಣ ಪ್ರವಚನ ಮಾಡಲು ರಾಜನಲ್ಲಿಗೆ ಕಳುಹಿಸಿದ್ದರು. ರಾಜನ ಮನೋಭಾವವನ್ನರಿಯದ ಆತನು ಸೀತಾಪಹರಣ ವೃತ್ತಾಂತವನ್ನು ವಿಸ್ತಾರವಾಗಿ ವರ್ಣಿಸಿದನು. ಅದನ್ನು ಕೇಳಿದ ರಾಜನು, ಕೂಡಲೆ ದೂಯಮಾನಮನಸ್ಕನಾಗಿ, ಭಾವಾವೇಷದಿಂದ ಕೂಡಿ, — 'ಇದೋ ಈಗಲೇ ಸಮುದ್ರವನ್ನು ದಾಟಿ, ನಮ್ಮ ತಾಯಿಯಾದ ಸೀತಾದೇವಿಯನ್ನು ತಂದು, ಶ್ರೀರಾಮ-

ಚಂದ್ರನ ಪಾದಮೂಲದಲ್ಲಿ ಸಮರ್ಪಿಸುತ್ತೇನೆ'—ಎಂದು ಕೂಗುತ್ತಾ ಆಯುಧ-ಗಳನ್ನು ಧರಿಸಿಕೊಂಡು ಸೈನ್ಯವನ್ನು ಸಿದ್ಧಪಡಿಸಿಕೊಂಡು ಲಂಕಾಭಿಮುಖನಾಗಿ ಹೊರಟೇ ಬಿಟ್ಟನು. ಇವನ ಪ್ರಯಾಣವೇಗವನ್ನು ಕಂಡ ಸಭಾಸದರೂ, ಮೇಲೇ ನಾಗುವುದೋ ಎಂದು ಅರಿಯದೇ, ಅವನನ್ನೇ ಹಿಂಬಾಲಿಸಿದರು. ಕುಲಶೇಖರನು ಕಾಲಿನಿಂದ ನಡೆಯುತ್ತಲೇ ಸಮುದ್ರವನ್ನು ಹಾದು ದಾಟಿಹೋಗುತ್ತೇನೆಂದು ಹೇಳುತ್ತಾ, ಕುತ್ತಿಗೆಯವರೆಗೂ ಇದ್ದನೀರಿನಲ್ಲಿ ಇಳಿದು ಹೋಗುತ್ತಿರಲು, ಇವನ ಭಕ್ತಿಗೆ ಮೆಚ್ಚಿದ ಶ್ರೀರಾಮಚಂದ್ರನು, ಕುಲಶೇಖರನನ್ನು ಹಿಂತಿರುಗಿಸಲು ಇನ್ನಾವ ಉಪಾಯವನ್ನೂ ಕಾಣದೇ, ತಾನೇ ಸ್ವತಃ ಸೀತಾಲಕ್ಷ್ಮಣರ ಸಮೇತನಾಗಿ ಅವನಿಗೆ ಕಾಣಿಸಿಕೊಂಡು ತಾನು ರಾವಣನೇ ಮೊದಲಾದ ರಾಕ್ಷಸರ ಸಮೂಹವನ್ನು ಸದೆಬಡಿದು ಸೀತೆಯನ್ನು ಕರೆತಂದ ಬಗೆಯನ್ನು ವಿವರಿಸುತ್ತಾ.—'ಎಲೈ ! ಕುಲಶೇಖರ ಮಹಾರಾಜನೇ ! ಬಾ ನಮ್ಮ ರಾಜ್ಯಕ್ಕೆ ಹೋಗುವ' — ಎಂದು ಹೇಳುತ್ತಾ, ಸೈನ್ಯ ಸಮೇತನಾಗಿ ರಾಜನನ್ನು ಅವನ ರಾಜ್ಯಕ್ಕೆ ಕರೆತಂದು ಅಂತರ್ಧಾನನಾದನು. ಈ ರೀತಿಯಾಗಿ ಕುಲಶೇಖರರು ತನ್ನ ಭಕ್ತಿಪಾಶದಿಂದ ಭಗವಂತನನ್ನೇ ಕಟ್ಟಿಹಾಕಿ ತಮಗೆ ವಶಮಾಡಿಕೊಂಡು ಆಳಿದುದರಿಂದ, ಅಂದಿನಿಂದ "ಆಳ್ವಾರ್"— ಎಂಬ ಬಿರುದಾಂಕಿತರಾಗಿ ಕುಲಶೇಖರಾಳ್ವಾರಾದರು. ಅಂದಿನಿಂದ ಭಗವತ್ಕಥಾಶ್ರವಣದಲ್ಲಿ ಆಳ್ವಾರರಿಗೆ ಅಭಿನಿವೇಶವು ದಿನೇದಿನೇ ಅಭಿ-ವೃದ್ಧಿಯಾಗುತ್ತಿತ್ತು.

ಪೌರಾಣಿಕರಿಂದ ಶ್ರೀರಂಗಕ್ಷೇತ್ರ ಮಾಹಾತ್ಮ್ಯವನ್ನು ಕೇಳಿದ ರಾಜನಿಗೆ "ಕದಾಹಂ ಕಾವೇರೀತಟಪರಿಸರೇ ರಂಗನಗರೇ ಶಯಾನಂ ಭೋಗೀಂದ್ರೇಶತಮುಖಮಣಿ ಶ್ಯಾಮಲರುಚಿಮ್ । ಉಪಾಸೀನಃ ಕ್ರೋಶನ್ ಮಧುಮಥನ । ನಾರಾಯಣ ! ಹರೇ ! ಮುರಾರೇ ! ಗೋವಿಂದೇತ್ಯನಿಶಮುಪನೇಷ್ಯಾಮಿ ದಿವಸಾನ್ ॥—ಎಂದು ಹೇಳುವಂತೆ. ತಾನು ಎಂದು ಶ್ರೀರಂಗಕ್ಷೇತ್ರಕ್ಕೆ ಹೋಗಿ, ಕಾವೇರಿಯಿಂದ ಸುತ್ತುವರಿಯಲ್ಪಟ್ಟ ಶ್ರೀರಂಗಕ್ಷೇತ್ರದಲ್ಲಿ, ಶೇಷಶಯನದಲ್ಲಿ ಇಂದು ನೀಲಮಣಿ ಯಂತೆ ಕಾಂತಿಯುಕ್ತನಾಗಿ ಮಲಗಿರುವ ರಂಗನಾಥನನ್ನು ಹತ್ತಿರದಲ್ಲಿಯೇ ನಿಂತು ದರ್ಶನಮಾಡಿ, ಆತನನ್ನು ಸಂಬೋಧಿಸಿ, ಮಧುಸೂಧನ ! ನಾರಾಯಣ ! ಹರೇ ! ಮುರಾರೇ ! ಗೋವಿಂದಾ !'—ಎಂದು ಉಚ್ಚಕಂಠದಿಂದ ನಿರಂತರ ಕೂಗುತ್ತಾ ಕಳೆಯುವಂತಹ ದಿನ ತನಗೆ ಎಂದು ಬರುತ್ತದೋ—ಎಂದು ಹಾತೊರೆಯುತ್ತಿರುವ ಮನಸ್ಸುಳ್ಳವನಾಗಿ, ತನ್ನ ಪರಿಜನಸಹಿತರಾಗಿ ಶ್ರೀರಂಗಕ್ಷೇತ್ರಕ್ಕೆ ಹೋಗುವ ಇಚ್ಛೆ-ಯುಳ್ಳವನಾದನು. ಮಂತ್ರಿಗಳಾದರೋ — 'ಮಹಾರಾಜನು ಶ್ರೀರಂಗಕ್ಕೆಹೋಗಿ ರಂಗನಾಥನನ್ನು ದರ್ಶನಮಾಡಿದರೆ, ಅಲ್ಲಿಯೇ ಸದಾಕಾಲದಲ್ಲಿಯೂ ವಾಸಿಸಬೇಕೆಂಬ

ಇಚ್ಛೆಯುಳ್ಳವನಾಗಿ ಮತ್ತೆ ರಾಜ್ಯಕ್ಕೆ ಖಂಡಿತ ಹಿಂತಿರುಗುವುದಿಲ್ಲ'––ಎಂದು ಭಾವಿಸಿ, ರಾಜನು ಯಾತ್ರೆಹೊರಡಲಾಗದಂತೆ ಉಪಾಯವೊಂದನ್ನು ಹೂಡಿದರು. ರಾಜನು ಯಾವಾಗ ಯಾತ್ರೆ ಹೊರಟರೂ, ಆ ಸಮಯಕ್ಕೆ ಸರಿಯಾಗಿ, ಶ್ರೀವೈಷ್ಣವ ಭಾಗವತರೊಬ್ಬರನ್ನು ಆರಾಧಿಸುವ ಸಲುವಾಗಿ ರಾಜನಲ್ಲಿಗೆ ಕರೆತರುತ್ತಿದ್ದರು, **"ಷಷ್ಟಿರ್ವರ್ಷಸಹಸ್ರಾಣಿ ವಿಷ್ಣೋರಾರಾಧನಂ ಫಲಂ । ಸಕೃದ್ವೈಷ್ಣವ-ಪೂಜಾಯಾಃ ಫಲೇನ ನ ಸಮಂ ಭವೇತ್ ॥"**––'ಅರವತ್ತು ಸಾವಿರವರ್ಷಗಳು ನಿರಂತರವಾಗಿ ಮಾಡಿದ ವಿಷ್ಣುವಿನ ಪೂಜಾಫಲವೂ, ಒಮ್ಮೆ ವಿಷ್ಣುಭಕ್ತರ ಪೂಜೆ ಮಾಡಿದುದರಿಂದ ಉಂಟಾಗುವ ಫಲಕ್ಕೆ ಸಮನಾಗುವುದಿಲ್ಲ'–ಎಂಬ ಶಾಸ್ತ್ರಾರ್ಥವನ್ನ-ರಿತ ರಾಜನು, ತನ್ನ ಯಾತ್ರೆಯನ್ನು ಮುಂದೂಡಿ ತನ್ನಲ್ಲಿಗೆ ಬಂದಿರುವ ವಿಷ್ಣುಭಕ್ತರ ಸೇವೆಯಲ್ಲಿಯೇ ನಿರತನಾಗುತ್ತಿದ್ದನು. ಹೀಗೆಯೇ––ಪ್ರತಿನಿತ್ಯವೂ ವಾಙ್ಮಾತ್ರದಿಂದ ಶ್ರೀರಂಗಯಾತ್ರೆಮಾಡುತ್ತಿದ್ದನು. ಆದುದರಿಂದಲೇ ಈಗಲೂ ಇವರ ವಿಷಯದಲ್ಲಿ ––**"ಘುಷ್ಯತೇ ಯಸ್ಯ ನಗರೇ ರಂಗಯಾತ್ರಾ ದಿನೇದಿನೇ । ತಮಹಂ ಶಿರಸಾ ವಂದೇ ರಾಜಾನಂ ಕುಲಶೇಖರಮ್ ॥"**––ಎಂದು ಹೇಳುತ್ತಾರೆ. ಈ ಭಾವ ದಿಂದಲೇ ಶ್ರೀರಂಗನಾಥನನ್ನು ಕಾಣುವ ದಿನ ತನಗೆಂದು ಲಭಿಸುವುದೋ––ಎಂದು ಹಾತೊರೆಯುವ ಮನಸ್ಸಿನಿಂದಲೇ ಮುಂದಿನ ಪೆರುಮಾಳ್ ತಿರುಮೊಳಿಯ ಮೊದಲಿನ ಹತ್ತು ಪದ್ಯಗಳನ್ನು ಹಾಡಿದ್ದಾರೆ.

ಕುಲಶೇಖರರು ಭಾಗವತರ ಮೇಲಿನ ಭಕ್ತಿಯಿಂದ ಅವರಿಗಿತ್ತಿದ್ದ ಸ್ಥಾನ, ಅದರಿಂದ ಇತರ ಮಂತ್ರಿವರ್ಗದವರ ಅಸೂಯಾಪರತೆ ಮತ್ತು ಕುಲಶೇಖರರಿಗೆ ಭಾಗವತರ ವಿಷಯದಲ್ಲಿದ್ದ ಪರಾಕಾಷ್ಠೆಯನ್ನೂ, ಮುಂದಿನ ಅವರ ಸ್ತೋತ್ರರೂಪ-ವಾದ ತನಿಯನ್ ಪದ್ಯದ ವಿವರಣೆಯಲ್ಲಿ ಕಾಣಬಹುದು.

ಕುಲಶೇಖರರು ತಮ್ಮ ಭಗವದ್ಭಾಗವತ ಕೈಂಕರ್ಯಕ್ಕೆ ನಾನಾ ರೀತಿಯಾದ ವಿಘ್ನವನ್ನೊಡ್ಡುವ ರಾಜ್ಯಭಾರವನ್ನು ವಹಿಸಲು ಇಷ್ಟಪಡದೆ, ತನ್ನ ಪುತ್ರನಿಗೆ ಪಟ್ಟಾಭಿಷೇಕಮಾಡಿ, ಶ್ರೀರಂಗನಾಥನನ್ನೇ ವಿವಾಹವಾಗಬೇಕೆಂಬ ಆಸೆಯಿಂದ ಕೂಡಿದ 'ಇಳಾ'––ಎಂಬ ತನ್ನ ಮಗಳನ್ನೂ ಕರೆದುಕೊಂಡು ಶ್ರೀರಂಗಕ್ಷೇತ್ರಕ್ಕೆ ಹೋಗಿ, ಭಗವದ್ಭಾಗವತ ಕೈಂಕರ್ಯದಲ್ಲಿಯೇ ನಿರತರಾಗಿ ಕೆಲಕಾಲವನ್ನು ಕಳೆದರು. ಬಳಿಕ ವೇಂಕಟಾಚಲ, ಅಯೋಧ್ಯಾ ಮೊದಲಾದ ದಿವ್ಯದೇಶಗಳಿಗೆ ಹೋಗಿ, ಅಲ್ಲಿ ಬಿಜಯ ಮಾಡಿಸಿರುವ ಪರಮಾತ್ಮನ ಅರ್ಚಾಮೂರ್ತಿಗೆ ಮಂಗಳಾಶಾಸನವನ್ನು ಮಾಡಿ ಸ್ವಾನುಭವಪರೀವಾಹರೂಪವಾದ, ಭವಭಯಭೇಷಜಾತ್ಮಕವಾದ "ಪೆರುಮಾಳ್ ತಿರುಮೊಳಿ"––ಎಂಬ ತಮಿಳು ಪದ್ಯಮಾಲಿಕೆಯನ್ನು ಪಾಡಿಕೊಟ್ಟು ತಮ್ಮ ಅರವತ್ತೇಳನೆಯ (೬೭) ವರ್ಷದಲ್ಲಿ ಪರಂಧಾಮವನ್ನೈದಿದರು.

ಅವರು ತಮ್ಮ ಪ್ರಬಂಧದಲ್ಲಿ ಶ್ರೀನಿವಾಸನಲ್ಲಿ ಮೊರೆಯಿಡುವಾಗ "ಪಡಿಯಾಯ್ ಕಿಡಂದು ಉನ್ ಪವಳವಾಯ್ ಕಾಣ್ಬೇನೇ" (ನಿನ್ನಗರ್ಭಗೃಹದ ಮುಂದಿರುವ ಹೊಸಲಾಗಿದ್ದು, ನಿನ್ನ ಹವಳದಂತಿರುವ ತುಟಿಗಳನ್ನು ಕಾಣುವಂತಾಗಬೇಕು) —ಎಂದು ಪ್ರಾರ್ಥಿಸಿರುವುದರಿಂದ, ಆ ಭಗವಂತನ ಅನುಗ್ರಹದಿಂದ ಇಂದೂ ಎಲ್ಲ ವಿಷ್ಣು ದೇವಾಲಯಗಳಲ್ಲಿಯೂ ಗರ್ಭಗೃಹದ ಹೊಸಲಿನ ರೂಪದಲ್ಲಿದ್ದು ಪರಮಾತ್ಮನ ಅರ್ಚಾಮೂರ್ತಿಯ ದರ್ಶನವನ್ನು ಮಾಡುತ್ತಿರುವರೆಂದೇ—ಹಿರಿಯರ ಅಭಿಪ್ರಾಯವಾಗಿರುತ್ತದೆ.

ಕುಲಶೇಖರಾಳ್ವಾರ್ರವರು 'ಪೆರುಮಾಳ್ ತಿರುಮೊಳಿ'—ಎಂಬ ಏಕೈಕ ದಿವ್ಯ ಪ್ರಬಂಧವನ್ನು ಹಾಡಿಕೊಟ್ಟಿದ್ದಾರೆ. ಇದರಲ್ಲಿ ಒಟ್ಟು ೧೦೫ ಪದ್ಯಗಳಿವೆ. ಇವನ್ನು ೧೦ 'ತಿರುಮೊಳಿ' (ದಶಕ) ಯಾಗಿ ವಿಭಜಿಸಿದ್ದಾರೆ. ಒಂದೊಂದು 'ತಿರುಮೊಳಿ' ಯಲ್ಲಿಯೂ ಹತ್ತಕ್ಕಿಂತ ಸ್ವಲ್ಪಹೆಚ್ಚಾಗಿಯೋ ಕಡಿಮೆಯಾಗಿಯೋ ಪದ್ಯಗಳಿರುತ್ತವೆ. ಒಂದೊಂದು ದಶಕವೂ ಒಂದೊಂದು ವಿಷಯವನ್ನಾಧರಿಸಿ ರಚಿಸಲ್ಪಟ್ಟಿದೆ. ಅವುಗಳಲ್ಲಿ ಪ್ರಥಮ ದಶಕದಲ್ಲಿ, ಆಳ್ವಾರವರು ಶ್ರೀರಂಗಕ್ಷೇತ್ರದಲ್ಲಿ ಬಿಜಯ ಮಾಡಿಸಿರುವ ಭಗವಂತನ ಅರ್ಚಾಮೂರ್ತಿ ಸ್ವರೂಪನಾದ ಶ್ರೀರಂಗನಾಥನ ಸ್ವರೂಪ ರೂಪಗುಣ ವಿಭವೈಶ್ವರ್ಯಗಳನ್ನು ಪರಿಪರಿಯಾಗಿ ಬಣ್ಣಿಸಿ, ತಾನು ಶ್ರೀರಂಗಕ್ಷೇತ್ರಕ್ಕೆ ಹೋಗಿ, ಶ್ರೀರಂಗನಾಥನನ್ನು ದರ್ಶನಮಾಡುವ ಭಾಗ್ಯವು ತನಗೆಂದು ಲಭಿಸುವುದೋ-ಎಂದು ತನ್ನ ಆಸೆಯನ್ನು ಬಿಚ್ಚುಮನಸ್ಸಿನಿಂದ ಹಾಡಿದ್ದಾರೆ. ದ್ವಿತೀಯ ದಶಕದಲ್ಲಿ ಆಕ್ಷೇತ್ರದಲ್ಲಿ ವಾಸಿಸುತ್ತಿರುವ ಪರಮ ಭಾಗವತರ ಮಹಿಮೆ ಅಪಾರವಾದುದೆಂದು ಬಣ್ಣಿಸಿದ್ದಾರೆ, ತೃತೀಯ ದಶಕದಲ್ಲಿ ಭಾವನಾಪ್ರಕರ್ಷದಿಂದ ತಾವು ಆ ಭಾಗವತರಲ್ಲಿ ಒಬ್ಬರಾದ ರೀತಿಯನ್ನು ವರ್ಣಿಸಿದ್ದಾರೆ, ಚತುರ್ಥದಶಕದಲ್ಲಿ ತಾವು ಬಾಳಬೇಕಾದರೆ ತಿರುಮಲೆಯಲ್ಲಿ ಯಾವುದಾದರೊಂದು ಜನ್ಮವನ್ನು ಪಡೆಯಬೇಕೆಂದು ತಮ್ಮ ಆಸೆಯನ್ನು ವ್ಯಕ್ತಪಡಿಸಿದ್ದಾರೆ. ಪಂಚಮ ದಶಕದಲ್ಲಿ 'ತಿರುವಿತ್ತುವಕ್ಕೋಟ್ಟು'— ಎಂಬ ಕ್ಷೇತ್ರದಲ್ಲಿ ಬಿಜಯಮಾಡಿಸಿರುವ ಪರಮಾತ್ಮನಲ್ಲಿ ಶರಣಾಗತಿಗೆ ಅವಶ್ಯಕವಾದ ತನ್ನ ಅನನ್ಯಗತಿತ್ವವನ್ನು ವಿಜ್ಞಾಪಿಸಿಕೊಂಡಿದ್ದಾರೆ. ಷಷ್ಠದಶಕದಲ್ಲಿ, ಗೋಪಿಕೆಯರ ಭಾವವನ್ನುತಾಳಿ, ಅವರು ಪರಮಾತ್ಮನ ವಿರಹವ್ಯಥೆಯಲ್ಲಿ ತೊಳಲುತ್ತಿದ್ದಾಗ ಅನುಭವಿಸಿದ ದುಃಖವನ್ನು ತೋಡಿಕೊಂಡ ಬಗೆಯನ್ನೂ; ಸಪ್ತಮದಶಕದಲ್ಲಿ, ದೇವಕಿ ದೇವಿಯು ಕೃಷ್ಣನನ್ನು ಹಡೆದರೂ, ಅವನ ಯಾವೊಂದು ಬಾಲ್ಯಲೀಲಾರಸಗಳನ್ನೂ ಅನುಭವಿಸಲಾರದುದರಿಂದುಂಟಾದ ದುಃಖವನ್ನುತೋಡಿಕೊಂಡಬಗೆಯನ್ನೂ, ಅಷ್ಟಮದಶಕದಲ್ಲಿ ಕೌಸಲ್ಯೆಯು, ಶ್ರೀರಾಮಚಂದ್ರನನ್ನು ತೊಟ್ಟಿಲಲ್ಲಿಟ್ಟು ಜೋಗುಳ ಹಾಡಿದ ರೀತಿಯನ್ನೂ; ನವಮದಶಕದಲ್ಲಿ ದಶರಥನು, ತನ್ನ ಮಗನು

ವನವಾಸಕ್ಕೆ ಹೋದುದರಿಂದ ತನಗಾದ ದುಃಖವನ್ನು ತೋಡಿಕೊಂಡ ಬಗೆಯನ್ನೂ ಪರಿಪರಿಯಾಗಿ ಬಣ್ಣಿಸಿ; ಅಂತಿಮವಾದ ದಶಮದಶಕದಲ್ಲಿ ಶ್ರೀಮದ್ರಾಮಾಯಣದ ಸಪ್ತಕಾಂಡಗಳ ಕಥೆಯನ್ನೂ ಸಂಕ್ಷೇಪವಾಗಿ ಹಾಡಿ ಕೊಟ್ಟಿದ್ದಾರೆ.

ಈ ಕೃತಿಯ ಪ್ರಕಟಣೆಗೆ ಆರ್ಥಿಕನೆರವನ್ನಿತ್ತು ಸಹಾಯಮಾಡಿರುವ ತಿರುಮಲೆ ತಿರುಪತಿ ದೇವಸ್ಥಾನದವರಿಗೆ ದಾಸನು ಅತ್ಯಂತ ಕೃತಜ್ಞನಾಗಿದ್ದಾನೆ. ತಿರುಪತಿ ತಿರುಮಲಾದೇವಸ್ಥಾನದ ಮುಖ್ಯ ನಿರ್ವಹಣಾಧಿಕಾರಿಗಳಿಗೂ ಮತ್ತು ಸಂಪಾದಕರಿಗೂ ದಾಸನ ಅನಂತವಂದನೆಗಳು.

ಈ ಗ್ರಂಥವನ್ನು ಪ್ರಕಾಶಪಡಿಸಲು ಅನುಗ್ರಹಲೇಖವೊಂದನ್ನು ಅನುಗ್ರಹಿಸ ಬೇಕೆಂದು, ದಾಸನು ಶ್ರೀರಂಗಕ್ಷೇತ್ರದಲ್ಲಿ ಪೌಂಡರೀಕಪುರಂ ಆಂಡವನ್ ಆಶ್ರಮದಲ್ಲಿ ಬಿಜಯಮಾಡಿಸಿರುವ ದಾಸನ ಗುರುಗಳಾದ ಪರಮಹಂಸೇತ್ಯಾದಿ ಬಿರುದಾಂಕಿತ-ರಾದ (ಪರವಾಕ್ಕೋಟ್ಟೈ ಆಂಡವನ್) ಶ್ರೀ ಶ್ರೀ ಶ್ರೀ ಗೋಪಾಲದೇಶಿಕ ಮಹಾದೇಶಿಕನ್ ಸ್ವಾಮಿಗಳ ಸನ್ನಿಧಾನದಲ್ಲಿ ಪ್ರಾರ್ಥಿಸಿದ ಕೂಡಲೆ, ಸಂತುಷ್ಟಾಂತ-ರಂಗರಾಗಿ, ದಾಸನ ಮೇಲೆ ಕೃಪೆಮಾಡಿ ಈ ಕೃತಿಗೆ ರಕ್ಷಾಕವಚದಂತೆ, ಅನುಗ್ರಹ ಲೇಖನವನ್ನು ಸಂಸ್ಕೃತ ಭಾಷೆಯಲ್ಲಿ ಬರೆದುಕೊಟ್ಟು ಅನುಗ್ರಹಿಸಿರುವ ಶ್ರೀ ಶ್ರೀ ಶ್ರೀ ಸ್ವಾಮಿಗಳಿಗೆ ದಾಸನು ಚಿರಋಣಿಯಾಗಿದ್ದಾನೆ.

ಆದಷ್ಟು ಜಾಗ್ರತೆ ಮುದ್ರಿಸಿ ಪ್ರಕಾಶಿಸಬೇಕೆಂಬ ಸದುದ್ದೇಶ್ಯದಿಂದ ಈ ಗ್ರಂಥವು ಎರಡು ಮುದ್ರಣಾಲಯಗಳಲ್ಲಿ ಮುದ್ರಿತವಾಯಿತು. ಈ ಉದ್ದೇಶ್ಯವನ್ನು ಪೂರ್ಣಗೊಳಿಸಲು, ಆದಷ್ಟು ಜಾಗ್ರತೆ, ಸುಂದರವಾಗಿ ಈ ಗ್ರಂಥವನ್ನು ಮುದ್ರಿಸಿ ಕೊಟ್ಟಿರುವ ದಾಸನ ಸ್ನೇಹಿತರಾದ, ಲಕ್ಷ್ಮೀ ಪ್ರಿಂಟಿಂಗ್ ವರ್ಕ್ಸ್‌ನ ಶ್ರೀಮಾನ್ ಶೇಷಾದ್ರಿಯವರಿಗೂ, ಜಯದೇವ ಪ್ರಿಂಟರ್ಸ್‌ನ ಶ್ರೀಮಾನ್ ಶಿವಾನಂದಯ್ಯ-ನವರಿಗೂ ಮತ್ತು ಅವರ ಸಹೋದ್ಯೋಗಿಗಳಿಗೂ ದಾಸನು ಆಭಾರಿಯಾಗಿದ್ದಾನೆ. ಕನ್ನಡ ಜನತೆಯೂ ಈ ಗ್ರಂಥವನ್ನು ಕೊಂಡು, ಓದಿ ಭಗವಂತನ ಕೃಪೆಗೆ ಪಾತ್ರರಾದರೆ, ದಾಸನ ಶ್ರಮವು ಸಾರ್ಥಕವಾಗುತ್ತದೆ,

ಇತಿ ಭಕ್ತಜನವಿಧೇಯ,

**ಸ್ವಚ್ಛಂದಂ ಅನಂತನರಸಿಂಹಾಚಾರ್**

ಇತಿ ಶಮ್

# ಸಮರ್ಪಣೆ

ಶ್ರೀವಾಸದೇಶಿಕರವರಸ್ಯ ಪದಾನುಕಂಪಾತ್
ಸಂಪಾದಿತಾಮತಿಲತಾ ಹೃದಯಾಲವಾಲೇ ।
ಗೋಪಾಲಸಂಯಮಿ ಪದಾಂಬುಜ ಭಕ್ತಿಸಾರ-
ಸಂವರ್ಧಿತಾ ವಿಜಯತೇ ಗುರುವೈಭವೇನ ॥

ಧರ್ಮ ಸಂಸ್ಥಾಪನೆಮಾಡಿ, ಚೇತನರಿಗೆ ಮುಕ್ತಿ ಮಾರ್ಗವನ್ನು ತೋರಿ, ಚೇತನೋದ್ಧಾರಮಾಡುವ ಸಲುವಾಗಿಯೇ ಪರಮ ಕಾರುಣಿಕನಾದ ಪರಮಾತ್ಮನು ಪ್ರತಿಯುಗದಲ್ಲಿಯೂ ಅವತರಿಸುತ್ತಾನೆ. ಕೆಲಸಮಯದಲ್ಲಿ ತಾನೇ ನೇರವಾಗಿ ಅವತರಿಸದೆ, ನಿತ್ಯವಿಭೂತಿಯಲ್ಲಿ ನಿರಂತರವಾಗಿ ತನ್ನ ಸೇವೆ ಮಾಡುತ್ತಿರುವ ಕೆಲ ನಿತ್ಯಾತ್ಮರನ್ನು ಪ್ರಕೃತಿಮಂಡಲದಲ್ಲಿ ಅವತರಿಸುವಂತೆ ಮಾಡಿ, ಅವರ ಮುಖಾಂತರ ಧರ್ಮ ಸಂಸ್ಥಾಪನೆ ಮಾಡಿಸಿ, ಚೇತನೋದ್ಧಾರ ಮಾಡಿಸುತ್ತಾನೆ. ಆ ರೀತಿಯಾಗಿ ಅವತರಿಸಿದ ನಿತ್ಯಾತ್ಮರೇ ನಮ್ಮ ಆಳ್ವಾರಾಚಾರ್ಯರೆಲ್ಲರೂ. ಈ ಮಹಾತ್ಮರು ಇಲ್ಲಿ ಅವತರಿಸುವಾಗ, ನಮ್ಮಂತೆಯೇ ಮನುಷ್ಯದೇಹವನ್ನು ಪಡೆದು ಕೊಂಡಿದ್ದರೂ, ಭಗವಂತನ ಅವತಾರ ಕಾಲದ ಅವನ ಗುಣವಿಭ-ವೈಶ್ವರ್ಯ ಸ್ವಭಾವಾದಿಗಳಿಗೆ ಕುಂದಿಲ್ಲದಂತಿರುವ ದೇಹದಂತೆಯೇ, "ಪ್ರಕೃತಿಂ ಸ್ವಾಂ ಅಧಿಷ್ಠಾಯ ಸಂಭವಾಮ್ಯಾತ್ಮಮಾಯಯಾ" — ಎಂದು ಹೇಳಿರುವಂತೆಯೇ ತಮ್ಮದೇ ಆದನಿತ್ಯಾತ್ಮರ ಗುಣವಿಭವೈಶ್ವರ್ಯಸ್ವಭಾವಾದಿಗಳನ್ನು ಬಿಡದಂತೆಯೇ, (ಆತ್ಮಮಾಯಯಾ) ತಮಗೂ ಅಂತರ್ಯಾಮಿಯಾಗಿರುವ ಪರಮಾತ್ಮನ ಸಂಕಲ್ಪಾಧೀನರಾಗಿ ಅವತರಿಸುತ್ತಾರೆ. ಆದರೆ ಪ್ರಕೃತಿಯ ಮಾಯೆಯಿಂದ ಮರೆ-ಮಾಚಲ್ಪಟ್ಟ ಬುದ್ಧಿಯುಳ್ಳವರು, ಭಗವಂತನ ಅವತಾರ ಕಾಲದ ಸ್ವರೂಪವನ್ನೂ ಆಳ್ವಾರಾಚಾರ್ಯರ ಅವತಾರಕಾಲದ ಸ್ವರೂಪವನ್ನೂ ಕೇವಲ ಬದ್ಧ ಚೇತನರ ಕರ್ಮಗತವಾದ ದೇಹದಂತೆಯೇ, ಕರ್ಮಗತವಾದುದೆಂದು ಭಾವಿಸಿ ಅವರನ್ನೂ ತಿರಸ್ಕರಿಸುತ್ತಾರೆ. ಇದನ್ನೇ ಗೀತಾಚಾರ್ಯನೂ — "ಅವಜಾನಂತಿ ಮಾಂ ಮೂಢಾಃ ಮಾಯಯಾಪಹೃತಚೇತಸಃ" — ಎಂದು ಹೇಳಿದ್ದಾನೆ.

ಶ್ರಿಯಃಪತಿಯಾದ-ಶ್ರೀಮನ್ನಾರಾಯಣನು ಆದಿಶೇಷಾವತಾರರಾದ ಭಗವದ್ರಾಮಾನುಜರ ಮುಖಾಂತರ, ವಿಶಿಷ್ಟಾದ್ವೈತದರ್ಶನವನ್ನು ಸ್ಥಾಪನೆಮಾಡಿದನು.

ಭಗವದ್ರಾಮಾನುಜರಿಂದ, ಬದ್ಧ ಚೇತನರು ಕರ್ಮಬಂಧವನ್ನು ನೀಗಿಪರಮಾತ್ಮ-ನನ್ನು ಪಡೆಯಲು ತೋರಿರುವ ಉಪಾಯಗಳೆರಡು. ಒಂದು ಕರ್ಮ ಯೋಗ ಜ್ಞಾನಯೋಗಸಹಕೃತವಾದ ಭಕ್ತಿಯೋಗ. ಮತ್ತೊಂದು ಶರಣಾಗತಿ. ಇವೆರಡರಲ್ಲಿ ಯಾವುದಾದರೊಂದು ಉಪಾಯವನ್ನನುಷ್ಠಿಸಿದರೂ ಮುಕ್ತಿಯನ್ನು ಪಡೆಯಬಹುದು.

ಎರಡೂ ರೀತಿಯ ಉಪಾಯಾನುಷ್ಠಾನಮಾಡುವವರೂ ಭಗವಂತನ ಆಜ್ಞಾ ಅನುಜ್ಞಾ ಕೈಂಕರ್ಯರೂಪವಾದ ಶ್ರುತಿಸ್ಮೃತಿ ಚೋದಿತವಾದ ನಿತ್ಯನೈಮಿತ್ತಿಕ ಕರ್ಮಾನುಷ್ಠಾನವನ್ನು ಮಾಡಿಯೇ ತೀರಬೇಕು. ವರ್ಣಾಶ್ರಮಧರ್ಮವನ್ನು ಪರಿಪಾಲಿಸಿಯೇ ತೀರಬೇಕು. ಅವುಗಳಲ್ಲಿ ಪ್ರಧಾನವಾಗಿ ವೇದಾಧ್ಯಯನವನ್ನು ತ್ರೈವರ್ಣಿಕರೂ ಅತ್ಯವಶ್ಯವಾಗಿ ಮಾಡಿಯೇ ತೀರಬೇಕು. ಈ ಎಲ್ಲ ವಿಷಯಗಳು ಭಗವದ್ರಾಮಾನುಜರಿಂದ ಶ್ರೀ ಭಾಷ್ಯಾದಿ ಗ್ರಂಥಗಳಲ್ಲಿ ಸ್ಪಷ್ಟವಾಗಿ ತಿಳಿಸಿದ್ದರೂ ಕಲಿಯ ಪ್ರಭಾವದಿಂದ ಭಗವದ್ರಾಮಾನುಜರ ಗ್ರಂಥವನ್ನು ಅಧ್ಯಯನ ಮಾಡಿರುವವರೂ, ಅನೇಕರು ವೇದಾಧ್ಯಯನಾದಿಗಳನ್ನು ತಾವೂ ಮಾಡದೆ, ಇತರರಿಗೂ ಮಾಡಿಯೇ ತೀರಬೇಕೆಂದು ತಿಳಿಸದೆ, ಚೇತನರ ಅವನತಿಗೆ ಕಾರಣರಾದುದರಿಂದ ಚೇತನೋದ್ಧಾರ ಮಾಡಬೇಕೆಂಬ ಹೆಬ್ಬಯಕೆಯುಳ್ಳ ಭಗವಂತನು ತನ್ನ ನಿಶ್ವಾಸರೂಪವಾದ ವೇದಗಳ ಮೂರ್ತಸ್ವರೂಪನಾದ ಗರುಡನನ್ನೇ ಇಲ್ಲಿ "ವೆಣ್ಣಾತ್ತಂಕರೈ ಆಂಡವನ್ ಶ್ರೀನಿವಾಸ ಮಹಾದೇಶಿಕನ್" ರೂಪದಲ್ಲಿ ಅವತರಿಸುವಂತೆ ಮಾಡಿ, ಅವರ ಮುಖಾಂತರ ಭಗವದ್ರಾಮಾನುಜರು ಉಪದೇಶಿಸಿದ ನಿತ್ಯ ನೈಮಿತ್ತಿಕ ಕರ್ಮಾನುಷ್ಠಾನ, ವೇದಾಧ್ಯಯನಾದಿ ಧರ್ಮಗಳನ್ನೂ ಪುನಃ ಸ್ಥಾಪಿಸಿ, ಚೇತನೋದ್ಧಾರ ಮಾಡಿದನು.

ವೆಣ್ಣಾತ್ತಂಕರೈ ಆಂಡವನ್ ಶ್ರೀನಿವಾಸ ಮಹಾದೇಶಿಕನ್ ಸ್ವಾಮಿವರ್ಯರು ದಿನಾಂಕ : ೧೯–೩–೧೮೮೩, ಖರನಾಮ ಸಂವತ್ಸರದ ಮೀನಮಾಸ ಅನುರಾಧಾ ನಕ್ಷತ್ರದಂದು 'ವೆಣ್ಣಾತ್ತಂಕರೈ'......ಎಂಬ ದಿವ್ಯಕ್ಷೇತ್ರದಲ್ಲಿ, ಸಾಕ್ಷಾತ್ ವೇದಾತ್ಮಾ ವಿಹಗೇಶ್ವರನ ಅವತಾರ ಸ್ವರೂಪರಾಗಿ, ಶ್ರೀ ಉ. ವೇ. ವೇಲಾಮೂರು ವರದಕೃಷ್ಣಮಾಚಾರ್ಯ ಮತ್ತು ಶ್ರೀಮತಿ ಅಲರ್‌ಮೇಲ್‌ಮಂಗೈಯವರ ಸುಪುತ್ರರಾಗಿ ಅವತರಿಸಿ ಶೇಷಾದ್ರಿ ಎಂಬ ನಾಮಂಕಿತರಾಗಿ ಮೂರೂ ವೇದ-ಗಳನ್ನೂ ಷಡಂಗಸಹಿತವಾಗಿ ಸಲಕ್ಷಣವಾಗಿ ಅಧ್ಯಯನಮಾಡಿ, ಅವುಗಳಿಗೆ ಸಂಬಂಧಪಟ್ಟ ಶ್ರೌತ, ಕಲ್ಪ, ಗೃಹ್ಯ, ಅಪರ ಸೂತ್ರಾದಿಗಳನ್ನೂ ಸ್ಮೃತಿಗ್ರಂಥ-ಗಳನ್ನೂ ವ್ಯಾಖ್ಯಾನಸಹಿತವಾಗಿ ಕರತಲಾಮಲಕವಾಗಿ ಅಧಿಕರಿಸಿ, ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ ಮತ್ತು ಸಂನ್ಯಾಸವೆಂಬ ನಾಲ್ಕೂ ಆಶ್ರಮಗಳಲ್ಲಿಯೂ

ಇದ್ದು, ತಮ್ಮ ಅನುಷ್ಠಾನಗಳಿಂದಲೂ ಮತ್ತು ಉಪದೇಶಗಳಿಂದಲೂ ಧರ್ಮ ಸಂಸ್ಥಾಪನೆಮಾಡಿ, ಅನೇಕ ಚೇತನರು ತಮ್ಮ ತಮ್ಮ ನಿತ್ಯನೈಮಿತ್ತಿಕ ಕರ್ಮಾನು–ಷ್ಠಾನದಲ್ಲಿ ತೊಡಗುವಂತೆ ಮಾಡಿದರು. ವಿಶೇಷವಾಗಿ ತಮ್ಮ ಗೃಹಸ್ಥಾಶ್ರಮದಲ್ಲಿ, ಮೂರೂ ವೇದಗಳಿಗೆ ಸಂಬಂಧಪಟ್ಟ (ಶೌನಕ), ಆಶ್ವಲಾಯನ, ಬೋಧಾಯನ ಆಪಸ್ತಂಬ, ಭಾರದ್ವಾಜ, ದ್ರಾಹ್ಯಾಯಣ, (ಖಾದಿರ) ಕಾತ್ಯಾಯನ ಸೂತ್ರ-ಗಳಲ್ಲಿ ಹೇಳಿರುವ ಯಜ್ಞಯಾಗಾದಿ ಶ್ರೌತಕರ್ಮಗಳನ್ನೂ, (ಜಾತಕರ್ಮ–ನಾಮಕರಣಾದಿ,) ಸ್ಮೃತ್ಯುಕ್ತವಾದ ಸ್ಮಾರ್ತ ಕರ್ಮಗಳನ್ನೂ, ತಾವು ಅನುಷ್ಠಾನ–ಮಾಡಿ ತೋರುವುದರೊಡನೆ, ಆಯಾಯಾ ಸೂತ್ರ ಪರಂಪರೆಗೆ ಸೇರಿದವರಿಗೆ ಆಯಾಯಾ ಸೂತ್ರಗಳಲ್ಲಿಯೇ, ತಾವು ಪುರೋಹಿತರೂ ಋತ್ವಿಜರೂ ಆಗಿ ಅನೇಕ ಚೇತನರ ಮುಖಾಂತರ ಅನುಷ್ಠಾನಮಾಡಿಸಿ ಧರ್ಮಸಂಸ್ಥಾಪನೆ ಮಾಡಿದರು.

"ಪೂಸಂಜ್ಞೇ ತು ಪುರೇ ತಸ್ಮಿನ್ ಶಯನಾತ್ ಪುರುಷೋ ಹರಿಃ I" —'ಪೂ'— ಎಂಬ ಹೆಸರಿನ ಎಲ್ಲ ವಿಧವಾದ ವ್ಯಷ್ಟಿಶರೀರಗಳಲ್ಲಿಯೂ, ಸರ್ವ-ವಿಧವಾದ ಚೇತನಾಚೇತನಗಳಲ್ಲಿಯೂ ಯಾರು ವಾಸಿಸುತ್ತಾನೆಯೋ ಅವನೇ ಪುರುಷ. ಮತ್ತು 'ಸಃ ಯತ್ಪೂರ್ವಃ ಅಸ್ಮಾತ್ ಸರ್ವಸ್ಮಾತ್, ಸರ್ವಾನ್ ಪಾಪ್ಮನಃ ಔಷತ್ ತಸ್ಮಾತ್ ಪುರುಷಃ।' —ಇತಿ, ತತ್ರ ಸರ್ವ ಪೂರ್ವ–ವರ್ತಿತ್ವ ಸರ್ವಪಾಪ್ಮಪ್ರದಾಹಕತ್ವರೂಪ ಕಾರಣತ್ವ, ಮೋಕ್ಷಪ್ರದತ್ವಶಕ್ತಿತಯಾ ಚ ಪುರುಷತ್ವಂ ತಸ್ಯ ಶ್ರೀಯಃ ಪತೇರೇವ ॥" — ಎಲ್ಲ ಚೇತನಾ ಚೇತನ–ಗಳಿಗೂ ಪೂರ್ವದಿಂದಲೂ ಇದ್ದು, ಚೇತನರ ಸರ್ವವಿಧ ಪಾಪಗಳನ್ನೂ ಸುಟ್ಟು–ಹಾಕಲು ಕಾರಣನಾದ, ಮೋಕ್ಷವನ್ನು ಅನುಗ್ರಹಿಸಲು ಶಕ್ತನೂ ಅವನೇ ಪುರುಷ –ಎಂದು ಹೇಳಿರುವುದರಿಂದ 'ಪುರುಷ'—ಶಬ್ದವು ಶ್ರೀಯಃ ಪತಿಯಾದ ಶ್ರೀಮನ್ನಾರಾಯಣನಿಗೆ ಮಾತ್ರವೇ ಅನ್ವಯಿಸುತ್ತದೆ. ಇತರ ಎಲ್ಲ ಚೇತನರೂ ಸ್ತ್ರೀಪ್ರಾಯರೇ ಆಗಿರುತ್ತಾರೆ. ಲೋಕದಲ್ಲಿ ಪುರುಷರು ತಮಗೆ ಇಷ್ಟರಾದ ಸ್ತ್ರೀಯರನ್ನು ವಿವಾಹವಾಗಿ ಅವರನ್ನು ಕನ್ಯಾಸೆರೆಯಿಂದ ಬಿಡಿಸಿ ಅವರೊಡನೆ ರಮಿಸಿ, ಅವರಿಗೆ ಸಂತೋಷದಾಯಕರಾಗಿ ತಾವೂ ಸಂತೋಷ ಪಡುವಂತೆಯೇ ಭಗವಂತನೂ ಸ್ತ್ರೀಪ್ರಾಯರಾದ ಚೇತನರನ್ನು ವಿವಾಹವಾಗಿ ಅವರನ್ನು ಕರ್ಮ-ಬಂಧದಿಂದ ಬಿಡಿಸಿ ಅವರೊಡನೆ ರಮಿಸಿ, ಅವರಿಗೆ ನಿರಂತರವಾದ ಆನಂದ-ವನ್ನುಂಟುಮಾಡಿ, ತಾನೂ ಸುಖಿಸುತ್ತಾನೆ.

ಜೀವಾತ್ಮನು ಭಗವಂತನ ಅಡಿದಾವರೆಯಲ್ಲಿ ಮಾಡುವ ಶರಣಾಗತಿಯೇ ಜೀವಾತ್ಮ ಪರಮಾತ್ಮರ ವಿವಾಹ. ಲೌಕಿಕ ವಿವಾಹದಂತೆಯೇ, ಇಲ್ಲಿಯೂ ವರನಾದ ಪರಮಾತ್ಮನು, ತನ್ನ ಮಿತ್ರಭೂತರಾದ ನಿತ್ಯಾತ್ಮರನ್ನು ಲೀಲಾವಿಭೂತಿಗೆ

ಆಚಾರ್ಯರ ರೂಪದಲ್ಲಿ ಕಳುಹಿಸಿ, ತನ್ನ ವಿಷಯದಲ್ಲಿ ಭಕ್ತಿಯುತರಾಗಿ, ತನ್ನನ್ನೇ ಸೇರಬೇಕೆಂದಿರುವ ಚೇತನರನ್ನು ತನಗೆ ವಿವಾಹ ಮಾಡಿಸಬೇಕೆಂದು ಆಜ್ಞೆಯಿತ್ತು ಕಳುಹಿಸಿದ್ದಾನೆ. ಆ ಆಚಾರ್ಯರಾದರೋ ಎಲ್ಲ ಚೇತನರಿಂದಲೂ ವರಿಸಲು ಯೋಗ್ಯನಾದ ವರನಾದ ಶ್ರಿಃಯಃ ಪತಿಯಾದ ಶ್ರೀಮನ್ನಾರಾಯಣನ ಸ್ವರೂಪ ರೂಪ ಗುಣವಿಭವೈಶ್ವರ್ಯಾದಿಗಳೆಲ್ಲವನ್ನೂ ಸ್ತ್ರೀಪ್ರಾಯರಾದ ಚೇತನರ ಮಧ್ಯದಲ್ಲಿ ಅಲ್ಲಲ್ಲಿಯೇ ಆಗಾಗ್ಗೆ ವರ್ಣಿಸುತ್ತಿರುತ್ತಾರೆ. ಅಂತೆಯೇ ಯಾವಚೇತನರು ಆ ಪರಮಾತ್ಮನನ್ನೇ ವರಿಸಿ ಅವನಲ್ಲಿಯೇ ತನ್ನ ರಕ್ಷಾಭರವನ್ನು ಅರ್ಪಿಸಿ, ಶರಣಾಗತಿ–ಎಂಬ ಕರ್ಮದ ಮುಖಾಂತರ ಆತನನ್ನು ವಿವಾಹವಾಗಿ, ಅನ್ಯದೇವತಾಭಜನಾದಿಗಳನ್ನು ಮಾಡದೆ, ಪಾತಿವ್ರತ್ಯಧರ್ಮದಿಂದ ಆತನಲ್ಲಿಯೇ ಪ್ರೀತ್ಯತಿಶಯರೂಪವಾದ ಭಕ್ತಿಯಿಂದ ಕೂಡಿ, ಅವನ ಆಜ್ಞಾನುಜ್ಞಾ ಕೈಂಕರ್ಯ ಮಾಡುತ್ತಾ, ಅವನ ಪ್ರೀತಿ ಪೂರ್ವಕವಾದ ಅನುಗ್ರಹಕ್ಕೆ ಪಾತ್ರರಾಗುತ್ತಾರೆಯೋ ಅವರು ಸರ್ವವಿಧವಾದ ದುಃಖಗಳಿಂದಲೂ ದೂರರಾಗಿ ನಿರಂತರವಾದ ಬ್ರಹ್ಮಾನಂದವನ್ನು ಅನುಭವಿಸು–ತ್ತಾರೆ—ಎಂದೂ ಆಚಾರ್ಯರು ಆಗಾಗ್ಗೆ ವರ್ಣಿಸುತ್ತಿರುತ್ತಾರೆ.

ಈ ರೀತಿಯಾದ, ಆಚಾರ್ಯರ ಉಪದೇಶವನ್ನು ಕೇಳಿದ ಚೇತನರ ಮನಸ್ಸಿನಲ್ಲಿ ಆ ಪರಮಾತ್ಮನನ್ನೇ ವಿವಾಹವಾಗಬೇಕೆಂಬ ಆಸೆಯುದಿಸುತ್ತದೆ. ಆಗ ಆ ಚೇತನರು ಆಚಾರ್ಯರ ಸನ್ನಿಧಾನದಲ್ಲಿ ಹೋಗಿ ಪರಮಾತ್ಮನಲ್ಲಿ ತನ್ನ ರಕ್ಷಾಭರಸಮರ್ಪಣಾರೂಪವಾದ ಶರಣಾಗತಿಯನ್ನು ಅನುಷ್ಠಿಸಬೇಕಾಗಿ ಪ್ರಾರ್ಥಿಸುತ್ತಾರೆ. ಆಗ ಆಚಾರ್ಯರು ಶ್ರದ್ಧಾ, ಭಕ್ತಿಯೇ ಮೊದಲಾದ ಗುಣ-ಗಳಿಂದಕೂಡಿದ ತನ್ನನ್ನು ಆಶ್ರಯಿಸಿದ ಚೇತನರ ವಿಷಯವನ್ನು ಪರಮಾತ್ಮನಲ್ಲಿ ಅರುಹಿ, ಆ ಪರಮಾತ್ಮನೇ ಆ ಚೇತನರ ರಕ್ಷಾಭರವನ್ನು ವಹಿಸಿಕೊಳ್ಳ–ಬೇಕೆಂದು ಪ್ರಾರ್ಥಿಸಿ, ಅವನನ್ನು ಒಪ್ಪಿಸಿ, ಜೀವಾತ್ಮ ಪರಮಾತ್ಮರ ವಿವಾಹ ರೂಪವಾದ ಶರಣಾಗತಿಯನ್ನು ಅನುಷ್ಠಿಸುತ್ತಾರೆ. ಈ ವಿವಾಹದಲ್ಲಿ ಆಚಾರ್ಯರು ಪರಮಾತ್ಮನಿಗೆ ಮಿತ್ರನಂತಿದ್ದು, ಕನ್ಯಾದಾತೃವೂ ಆಗಿದ್ದಾರೆ. ಜೀವಾತ್ಮನೇ – ಮದುವಣಗಿತ್ತಿ. ಪರಮಾತ್ಮನೇ—ವರ. ವಿವಾಹದಲ್ಲಿ ಪರಮಾತ್ಮನು ಚೇತನನಿಗೆ —ಯಾವಜ್ಜೀವವೂ ನಿರಂತರವಾದ ನಿರಪರಾಧವಾದ ಭಗವದ್ಭಾಗವತ ಕೈಂಕರ್ಯ–ರೂಪವಾದ ಮಾಂಗಲ್ಯ ಸೂತ್ರವನ್ನು ಕಟ್ಟುತ್ತಾನೆ. ಈ ವಿಷಯವನ್ನು ವೇದಾಂತ ದೇಶಿಕರು ತಮ್ಮ 'ಶರಣಾಗತಿ ದೀಪಿಕಾ'—ಎಂಬ ಸ್ತೋತ್ರ ಗ್ರಂಥದಲ್ಲಿ "ದತ್ತಾಃ ಪ್ರಜಾಃ ಜನಕವತ್ತ್ವದೇಶಿಕೇಂದ್ರೈಃ ಪತ್ಯಾಭಿನಂದ್ಯಭವತಾಪರಿಣೀಯಮಾನಾಃ। ಮಧ್ಯೇ ಸತಾಂ ಮಹಿತಭೋಗವಿಶೇಷಸಿದ್ಧ್ಯೈ ಮಾಂಗಲ್ಯ ಸೂತ್ರಮಿವ ಬಿಭ್ರತಿ ಕಿಂಕರತ್ವಂ॥"—ಎಂಬ ಶ್ಲೋಕದಲ್ಲಿ ತಿಳಿಸಿದ್ದಾರೆ. ಈ ರೀತಿಯಾದ ವಿವಾಹದಿಂದ,

"ಮಣಿವರ ಇವ ಶೌರೇಃ ನಿತ್ಯ ಹೃದ್ಯೋಪಿ ಜೀವಃ"––ಎಂದು ಹೇಳುವಂತೆ-ತನಗೆ ಹೃದ್ಯನಾದ ಚೇತನನನ್ನು ಪಡೆದು ಪರಮಾತ್ಮನೂ ಅತಿಶಯವಾದ ಆನಂದವನ್ನು ಅನುಭವಿಸುತ್ತಾನೆ. ಚೇತನರಾದರೋ ಅನಾದಿಯಾದ ಕರ್ಮಬಂಧವನ್ನು ಕಳೆದುಕೊಂಡು ಪರಬ್ರಹ್ಮನೊಡನೆ ನಿರಂತರವಾಗಿ ಪರಿಪೂರ್ಣ ಬ್ರಹ್ಮಾನಂದವನ್ನು ಅನುಭವಿಸುತ್ತಾರೆ. ಹೀಗೆ ಜೀವಾತ್ಮಪರಮಾತ್ಮರಿಬ್ಬರಿಗೂ ನಿರಂತರವಾದ ಆನಂದಕ್ಕೆ ಕಾರಣಭೂತರು ಆಚಾರ್ಯರೇ ಆಗಿರುತ್ತಾರೆ.

ಆಂಡಾಳ್ ಅಥವಾ ಗೋದಾದೇವಿಯ ಅವತಾರಕಾಲದಲ್ಲಿ, ಆಕೆಯೊಬ್ಬಳನ್ನು ತನಗೆ ಧಾರೆಯೆರೆದು ಕೊಟ್ಟುದದರಿಂದಲೇ ಪರಿಪೂರ್ಣವಾಗಿ ಸಂತುಷ್ಟನಾದ ರಂಗನಾಥನು, ಆ ಕನ್ಯಾದಾತಾರರಾದ (ಪೆರಿಯಾಳ್ವಾರ್) ವಿಷ್ಣುಚಿತ್ತರನ್ನು, ಎಲ್ಲ ದೇವತೆಗಳ ಸಮ್ಮುಖದಲ್ಲಿ ತಾನು ನಮಸ್ಕರಿಸಿ, ಎಲ್ಲ ದೇವತೆಗಳಿಂದಲೂ ಅವರು ಅಭಿವಂದನೀಯರೆಂದೂ ಉದ್ಘೋಷಿಸಿ, ಎಲ್ಲರೂ ಅವರನ್ನು ನಮಸ್ಕರಿಸುವಂತೆ ಮಾಡಿದನು. ಆದುದರಿಂದಲೇ ವಿಷ್ಣುಚಿತ್ತರ ತನಿಯನ್ ಶ್ಲೋಕದಲ್ಲಿ–– "ಶ್ವಶುರಮಮರವಂದ್ಯಂ ರಂಗನಾಥಸ್ಯ ಸಾಕ್ಷಾತ್ ದ್ವಿಜಕುಲತಿಲಕಂ ತಂ ವಿಷ್ಣು-ಚಿತ್ತಂ ನಮಾಮಿ ।"––ಎಂದು ಅವರನ್ನು ಕೊಂಡಾಡುತ್ತಾರೆ. ಒಬ್ಬ ಕನ್ನಿಕೆಯನ್ನು ಪರಮಾತ್ಮನಿಗೆ ಧಾರೆಯೆರೆದು ಕೊಟ್ಟುದದರಿಂದಲೇ ವಿಷ್ಣುಚಿತ್ತರಿಗೆ–ಈ ರೀತಿಯಾದ ಮಹಿಮೆಯುಂಟಾದುದಾದರೇ, ಅಸಂಖ್ಯಾತರಾದ ಚೇತನರನ್ನು ಪರಮಾತ್ಮನಿಗೆ ಧಾರೆಯೆರೆದುಕೊಟ್ಟ ನಮ್ಮ ಆಚಾರ್ಯರ ಮಹಿಮೆಯಾದರೋ ವರ್ಣಿಸಲಸದಳವಾದುದಲ್ಲವೇ ? ನಮ್ಮ ಆಚಾರ್ಯರು ಸರ್ವವಿಧವಾದ ಚೇತನಾಚೇತನರಿಂದಲೂ, ಪರಮಾತ್ಮನಿಂದಲೂ ಅಭಿನಂದನೀಯರು––ಎಂದು ನಿಸ್ಸಂದೇಹವಾಗಿ ಹೇಳಬಹುದು. ಆದುದರಿಂದಲೇ "ಭಗವಂತಂ ಅತಿಶೇತೇ ಆಚಾರ್ಯಃ"––"ಆಚಾರ್ಯರು ಮಹಿಮೆಯಲ್ಲಿ ಭಗವಂತನನ್ನೂ ಮೀರಿರುವರು" ––ಎಂದು ಹೇಳಿದರೆ ತಪ್ಪಾಗದು.

ಸ್ವಾಮಿವರ್ಯರು ಸಂನ್ಯಾಸಾಶ್ರಮವನ್ನು ಸ್ವೀಕರಿಸಿ ಮೇಲೆ ಹೇಳಿದಂತೆ ಭಗವಂತನನ್ನು ಸೇರಲು ಯೋಗ್ಯರಾದ ಅನೇಕ ಚೇತನರನ್ನು ಪ್ರಪತ್ತಿ ಅಥವಾ ಶರಣಾಗತ್ಯನುಷ್ಠಾನವೆಂಬ ವಿವಾಹದಲ್ಲಿ ಪರಮಾತ್ಮನಿಗೆ ಕನ್ಯಕಾದಾನ ಮಾಡಿಕೊಟ್ಟು (ಚೇತನೋದ್ಧಾರ ಮಾಡಿ) ಭಗವಂತನಿಗೆ ಮಾವನಾಗಿ, ಭಗವಂತನಿಂದಲೂ, ದೇವತೆಗಳೇ ಮೊದಲಾದ ಎಲ್ಲ ಚೇತನರಿಂದಲೂ ವಂದಿಸಲು ಅರ್ಹರಾಗಿ ಶ್ರೀರಂಗದಲ್ಲಿರುವ ಪೌಂಡರೀಕಪುರಂ ಶ್ರೀಮದಾಂಡವನ್ ಸ್ವಾಮಿಗಳ ಆಶ್ರಮ-ದಲ್ಲಿ ಸುಮಾರು ೨೩ ವರ್ಷಗಳ ಕಾಲ ಆಚಾರ್ಯಪೀಠವನ್ನಲಂಕರಿಸಿ, ಅನೇಕ ಚೇತನೋದ್ಧಾರಮಾಡಿ, ವಿಶೇಷವಾಗಿ ದಾಸನಿಗೆ ಪಂಚಸಂಸ್ಕಾರಮಾಡಿ ದಾಸನ

ರಕ್ಷಾಭರವನ್ನು ಪರಮಾತ್ಮನಲ್ಲರ್ಪಿಸಿ ದಾಸನಿಗೆ ಮಂತ್ರ ಮಂತ್ರಾರ್ಥಗಳನ್ನುಪದೇಶಿಸಿ ವಸ್ತುತ್ವವನ್ನುಂಟುಮಾಡಿ, ಸಿದ್ಧಾರ್ಥಿವರುಷ ಮೀನಮಾಸದ ೨೭ನೆಯ ತೇದಿ, ಕೃಷ್ಣಪಕ್ಷ ನವಮಿಯಂದು (ದಿನಾಂಕ : ೯-೪-೧೯೮೦) ಮಧ್ಯಾಹ್ನ : ೨ ಘಂಟೆಯ ವೇಳೆಯಲ್ಲಿ ಪರಮಪದವನ್ನು ಸೇರಿ, ಈಗ ಶ್ರೀವೈಕುಂಠಲೋಕದಲ್ಲಿ ನಿರಂತರ ಭಗವಂತನ ಕೈಂಕರ್ಯವನ್ನೆಸಗುತ್ತಿದ್ದಾರೆ. ಈ ರೀತಿ ಮಹಿಮಾನ್ವಿತರಾದ ದಾಸನ ಆಚಾರ್ಯರಾದ **ವೆಣ್ಣಾತ್ತಂಕರೈಆಂಡವನ್ ಶ್ರೀನಿವಾಸಮಹಾದೇಶಿಕನ್ ಸ್ವಾಮಿಗಳವರ** ಕರತಲದಲ್ಲಿ ಈ ಪೆರುಮಾಳ್ ತಿರುಮೊಳಿ - ಕನ್ನಡ ಪ್ರತಿಪದಾರ್ಥ ಮತ್ತು ವಿವರಣಾತ್ಮಕ ಗ್ರಂಥವು ಅವರ ಅವತಾರ ಶತಾಬ್ದ್ಯುತ್ಸವದ ಸವಿನೆನಪಾಗಿ ದಾಸನಿಂದ ಅರ್ಪಿಸಲ್ಪಡುತ್ತಿದೆ.

**ಗೋಪಾಲಸೂರಿಗುರುವರ್ಯಕೃಪೋಪಲಬ್ಧ-**
**ವಾಗ್ದೇವತಾಮನುಗತಾರ್ಥವಿಶೇಷಚಿಂತಾ ।**
**ಸಂಪ್ರಾಪ್ತಧೀಃ ಗುರುವರಸ್ಯ ಕರದ್ವಯೇಽಸ್ಮಿನ್**
**ಮಾಲಾಮಿಮಾಮರ್ಪಯತಿ ಭಕ್ತಿರಸಃ ಪ್ರವಾಹಾತ್ ॥**

**ಹಯವದನ ಸದನ ಹೃದಯಂ**
**ಕಮಲಾಕ್ಷತೋರಣಾಲಂಕೃತಂ ಮಧುರಮ್ ।**
**ಗುರುವರಮುಪಾಸಿತಂ ವಿವರಂ**
**ಚಕಾಸ್ತು ಪರಶ್ಶತಾಬ್ದಂ ಸದಯಂ ॥**

— ಇತಿ ಆಚಾರ್ಯಪಾದಾಂಘ್ರಿರೇಣುಃ —

ಸ್ವಚ್ಛಂದಂ ಅನಂತನರಸಿಂಹದಾಸಃ

ಶ್ರೀ ಶ್ರೀ ಶ್ರೀ ಶ್ರೀನಿವಾಸಮಹಾದೇಶಿಕನ್
(ವೆಣ್ಣಾತ್ತಂಕರೈ ಆಂಡವನ್ ಸ್ವಾಮಿಗಳು)



ನಾರಾಯಣಾಖ್ಯಯತಿರಾಜಪದಾಬ್ಜ ಭೃಂಗ-
ಶ್ರೀವಾಸಯೋಗಿಗುರುಣಾರ್ಪಿತಭಾರಮೀಶೇ ।
ಭಕ್ತ್ಯಾದಿಪೂರ್ಣವರದಾರ್ಯಕೃಪಾತ್ತಚಿಹ್ನಂ
ಶ್ರೀಶ್ರೀನಿವಾಸಮುನಿವರ್ಯಮಹಂ ಪ್ರಪದ್ಯೇ ॥

(ಶ್ರೀರಾಮಚಂದ್ರಪಟ್ಟಾಭಿಷೇಕಮಹೋತ್ಸವದ ಚಿತ್ರ)

ಶ್ರೀಸೀತಾಲಕ್ಷ್ಮಣಭರತಶತ್ರುಘ್ನಹನೂಮತ್ಸಮೇತಶ್ರೀರಾಮಚಂದ್ರಪರಬ್ರಹ್ಮಣೇ ನಮಃ



ವಾಮೇ ಭೂಮಿಸುತಾ ಪುರಸ್ತು ಹನುಮಾನ್ ಪಶ್ಚಾತ್ ಸುಮಿತ್ರಾಸುತಃ !
ಶತ್ರುಘ್ನೋ ಭರತಶ್ಚ ಪಾರ್ಶ್ವದಳಯೋರ್ವಾಯ್ವಾದಿಕೋಣೇಷು ಚ |
ಸುಗ್ರೀವಸ್ಯ ವಿಭೀಷಣಶ್ಚ ಯುವರಾಟ್ ತಾರಾಸುತೋ ಜಾಂಬವಾನ್
ಮಧ್ಯೇ ನೀಲಸರೋಜಕೋಮಲರುಚಂ ರಾಮಂ ಭಜೇ ಶ್ಯಾಮಲಮ್ ||

ಆಸಾದ್ಯನಗರೀಂ ದಿವ್ಯಾಂ ಅಭಿಷಿಕ್ತಾಯ ಸೀತಯಾ |
ರಾಜಾಧಿರಾಜರಾಜಾಯ ರಾಮಭದ್ರಾಯ ಮಂಗಳಮ್ ||

**ಶ್ರೀಮತೇ ಶ್ರೀನಿವಾಸಮಹಾದೇಶಿಕಾಯ ನಮಃ**
**ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ**

**ಶ್ರೀಮತೇ ರಾಮಾನುಜಾಯ ನಮಃ**
**ಶ್ರೀಕುಲಶೇಖರಾಳ್ವಾರ್ ತಿರುವಡಿಕಳೇ ಶರಣಂ**

ಶ್ರೀಕುಲಶೇಖರಾಳ್ವಾರ್ ವಿಷಯಕವಾದ (ತನಿಯನ್) ಬಿಡಿಪದ್ಯಗಳೆರಡು. ಅವುಗಳಲ್ಲಿ ಮೊದಲನೆಯದು :

**ಇನ್ನಮುದ ಮೂಟ್ಟುಹೇನ್ ಇಂಗೇ ವಾ ಪೈಂಗಿಳಿಯೇ !**
**ತೆನ್ನರಂಗರ್ ಪಾಡವಲ್ಲ ಶೀರ್‌ಪೆರುಮಾಳ್–ಪೊನ್ನಂ**
**ಶಿಲೈಶೇರ್ ನುದಲಿಯರ್‌ವೇಳ್ ಶೇರಲರ್ಕೋನ್–**
**ಎಂಗಳ್ ಕುಲಶೇಖರನ್–ಎನ್ರೇಕೂರು** || ೧ ||

**ಪೈಂಗಿಳಿಯೇ**=ಮನೋಹರವಾದ ಮರಿಗಿಳಿಯೇ ! ನಿನಗೆ, **ಇನ್**= ಪರಮ ಭೋಗ್ಯವಾದ, **ಅಮುದಂ**=ಅಮೃತವನ್ನು, **ಊಟ್ಟುಹೇನ್**= ಪ್ರಾಶನಮಾಡಿಸುತ್ತೇನೆ, **ಇಂಗೇವಾ**=ಇಲ್ಲಿಗೆ ಬಾ, — **ತೆನ್ನರಂಗ**=ದಕ್ಷಿಣದಲ್ಲಿನ ಶ್ರೀರಂಗಕ್ಷೇತ್ರದ ಹಿರಿಮೆಯನ್ನು, **ಪಾಡವಲ್ಲ**=ಹಾಡುವುದರಲ್ಲೇ ನಿರತರಾದ, **ಶೀರ್**=ಶುಭಗುಣಶಾಲಿಯಾದ, **ಪೆರುಮಾಳ್**=ಮಹಾನುಭಾವರಾದ, **ಪೊನ್ನಂ–ಶಿಲೈಶೇರ್**=ಸುಂದರವಾದ ಹುಬ್ಬುಗಳಿಂದ ಕೂಡಿದ ಸುಂದರಿಯರ, **ನುದಲಿಯರ್** =ಮನಸ್ಸನ್ನೂ ಸೆಳೆಯುವ, **ಶೇರಲರ್ಕೋನ್**=ಕೇರಳ ದೇಶದ ಸ್ವಾಮಿ-ಯಾದವನೇ, **ಎಂಗಳ್ ಕುಲಶೇಖರನ್**=ನಮ್ಮ ಕುಲಶೇಖರಾಳ್ವಾರರು, **ಎನ್ರೇ** =ಎಂದೇ, **ಕೂರು**=ಕೂಗುತ್ತಿರು.

ಕುಲಶೇಖರಾಳ್ವಾರ್‌ರವರು ರಾಮಭಕ್ತರು. ಶ್ರೀ ರಾಮಚಂದ್ರನ ದಿವ್ಯ-ನಾಮಗಳನ್ನು ಹೇಳಲು, ಗಿಳಿಯೊಂದನ್ನು ಸಾಕಿ ಸಲಹಿ ರಾಮನಾಮವನ್ನ ಅದು ಹೇಳುವಂತೆ ಅದನ್ನು ಶಿಕ್ಷಿಸಿ, ಅದರ ಬಾಯಿಂದ ಹೇಳುವ ರಾಮನಾಮ-ವನ್ನು ಕೇಳಿ ಆನಂದಿಸುತ್ತಿದ್ದರು. ಅಂತೆಯೇ ಕುಲಶೇಖರರ ಭಕ್ತಾಗ್ರೇಸರೊ-ಬ್ಬರು, ಕುಲಶೇಖರರ ನಾಮ ಸಂಕೀರ್ತನವನ್ನು ಕೇಳಲು ಗಿಳಿಯೊಂದನ್ನು ತನ್ನ ಬಳಿಗೆ ಕರೆಯುತ್ತಾ ಹೇಳುತ್ತಾರೆ—'ಮನೋಹರವಾದ ಗಿಳಿಯೇ ನಿನಗೆ ಪರಮ-ಭೋಗ್ಯವಾದ ಅಮೃತವನ್ನ ಪ್ರಾಶನಮಾಡಿಸುತ್ತೇನೆ ಬಾ'. ಶ್ರೀ ರಂಗ ಕ್ಷೇತ್ರದ ಹಿರಿಮೆಯನ್ನು ನಿರಂತರವಾಗಿ ಹಾಡುವುದರಲ್ಲೇ ನಿರತರಾದ, ಶುಭಗುಣಶಾಲಿಯಾದ

ಸಾಕ್ಷಾತ್ ಶ್ರೀರಾಮಚಂದ್ರನ ಅವತಾರ ಸ್ವರೂಪರಾಗಿ 'ಕುಲಶೇಖರ ಪ್ಪೆರುಮಾಳ್' —ಎಂದು ಬಿರುದಾಂಕಿತರಾದ, ಸರ್ವವಿಧವಾದ ಸುಂದರಿಯರ ಮನಸ್ಸನ್ನು ಸೆಳೆಯುವ, ಕೇರಳ ದೇಶದ ಸ್ವಾಮಿಯಾದವನೇ—'ನಮ್ಮ ಕುಲಶೇಖರಸಾಮಿ' –ಅಂದರೆ ನಾನು ಅವನಿಗೇ ಸೇರಿದವನು—ಎಂದು ನಿರಂತರವಾಗಿ ಜಪಿಸುತ್ತಿರು. ಅದೇ ನಿನಗೆ ಅಮೃತದಂತೆ ಭೋಗ್ಯ ಭೂತವಾದುದು. ಇದರಿಂದ ನೀನು ಕುಲಶೇಖರರ ಕೃಪೆಗೆ ಪಾತ್ರರಾಗಿ, ಅವರು ಪರಮಾತ್ಮನನ್ನು ಅನುಭವಿಸಿದಂತೆಯೇ, ನೀನೂ ಅಮೃತಸ್ವರೂಪನಾದ ಪರಮಾತ್ಮನನ್ನು ನಿರಂತರ ಅನುಭವಿಸುವಂತಾಗುತ್ತದೆ' —ಎಂದು ಹೇಳಿದ್ದಾರೆ.

ಇಲ್ಲಿ ಗಿಳಿಯನ್ನು ಕುರಿತು ಹೇಳಿರುವುದು—ಆಚಾರ್ಯರು, ತಾನು ಹೇಳಿ-ಕೊಟ್ಟಂತೆಯೇ ಹೇಳುವ ಗಿಳಿಯಂತಿರುವ ಶಿಷ್ಯನನ್ನು ಕುರಿತು ಹೇಳುವಂತಹ ಉಪದೇಶವೆಂದು ಕೆಲವರು ಅಭಿಪ್ರಾಯ ಪಡುತ್ತಾರೆ. ಮತ್ತೆ ಕೆಲವರು — **"ದ್ವಾಸುಪರ್ಣಾಸಯುಜಾಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ । ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತಿ ಅನಶ್ನನ್ನನ್ಯೋ ಅಭಿಚಾಕಶೀತಿ ।"** ಎಂದು ಶ್ರುತಿಗಳಲ್ಲಿ ಹೇಳಿರುವಂತೆ, ವೃಕ್ಷದಂತಿರುವ ಈ ದೇಹದಲ್ಲಿ ಹೃದಯಗುಹೆಯೆಂಬ ಪೊಟರೆಯಲ್ಲಿ ವಾಸಮಾಡುತ್ತಾ ಇಲ್ಲಿ ಬಿಡುವ ಸಿಹಿ ಕಹಿ ರೂಪವಾದ ಪಾಪ ಪುಣ್ಯ ಫಲಗಳನ್ನು ತಿನ್ನುತ್ತಾ ಅನುಭವಿಸುತ್ತಿರುವ ಗಿಳಿಯಂತಿರುವ ಜೀವಾತ್ಮನನ್ನು ಕರಿತು—ನೀನು ನಿರಂತರವಾದ ಅಮೃತರಸವನ್ನು ಪ್ರಾಶನಮಾಡಬೇಕಾದರೇ ನಿರಂತರವಾಗಿ ಕುಲಶೇಖರನೇ ನಮಗೆ ಸ್ವಾಮಿ–ನಾನು ಅವನಿಗೆ ಸೇರಿದವನೆಂದು ಕೀರ್ತಿಸು' — ಇದೇ ಅಮೃತಸ್ವರೂಪವಾಗಿರುವುದಲ್ಲದೆ ಅಮೃತಸ್ವರೂಪನಾದ ಪರಮಾತ್ಮನನ್ನೂ ಇದರಿಂದಲೇ ನೀನು ಅನುಭವಿಸುವಂತೆ ಮಾಡುತ್ತದೆ – ಎಂದು ಹೇಳಿರುವಂತಹುದು—ಎಂದೂ ಅಭಿಪ್ರಾಯಪಡುತ್ತಾರೆ ॥೧॥

**ಆರವಮ್ ಕೆಡಪ್ಪೆರನನ್ಬರ್ ಕೊಳ್ಳಾರೆನ್ರು, ಅವರ್‌ಕಳುಕ್ಕೇ**
**ವಾರಮ್ ಕೊಡು ಕುಡಪ್ಪಾಂಬಿಲ್ ಕೈಯಿಟ್ಟವರ್, ಮಾಟ್ರಲರ್ಕೈ**
**ವೀರಮ್ ಕೆಡುತ್ತ ಶೆಂಕೋಲ್ ಕೊಲ್ಲಿಕಾವಲರ್ ವಿಲ್ಲವರ್ ಕೋ**
**ಶೇರನ್ ಕುಲಶೇಖರನ್ ಮುಡಿವೇನ್ದರ್ ಶಿಖಾಮಣಿಯೇ ॥೨॥**

**ಆರಮ್ ಕೆಡ**=(ಗೃಹದಲ್ಲಿ ಆರಾಧಿಸುತ್ತಿದ್ದ ಭಗವಂತನ ವಿಗ್ರಹದ) ಮುಕ್ತಾ ಹಾರವು ಕಾಣಲಾಗಿರಲು, **ಪರಅನ್ಬರ್ ಕೊಳ್ಳಾರ್ ಎನ್ರು**= ಭಗವಂತನ ಭಕ್ತರಾದ ಭಾಗವತರು ಕದ್ದಿಲ್ಲವೆಂದು, **ಅವರ್‌ಕಳುಕ್ಕೆ**=ಆ

ಭಾಗವತರ ವಿಷಯದಲ್ಲಿಯೇ, **ವಾರಮ್ ಕೊಡು**=ಪಕ್ಷಪಾತವನ್ನು ವಹಿಸಿ, **ಕುಡಪ್ಪಾಂಬಿಲ್**=ಸರ್ಪಭರಿತವಾದ ಕೊಡವೊಂದರಲ್ಲಿ, **ಕೈಯಿಟ್ಟವರ್**= ಕೈಯಿಟ್ಟವರಾದ, **ಮಾಟ್ರಲರೈ**=ಶತ್ರುಗಳಾದ ಪ್ರತಿಪಕ್ಷಿಗಳ, **ವೀರಮ್ ಕೆಡುತ್ತ**=ಪರಾಕ್ರಮವನ್ನು ಭಗ್ನಮಾಡಿದವರಾದ, **ಶೆಂಕೋಲ್**=ಋಜುವಾದ ಅಧಿರಾಜ್ಯ ಶ್ರೀಯನ್ನು ಹೊಂದಿದವರಾದ, **ಕೊಲ್ಲಿಕಾವಲ**='ಕೊಲ್ಲಿ' ಎಂಬ ರಾಜ್ಯವನ್ನು ಪರಿಪಾಲಿಸಿದವರಾದ, **ವಿಲ್ಲವರ್ ಕೋ**=ಧನುರ್ವಿದ್ಯಾ ಪ್ರವೀಣ ರಲ್ಲಿ ಅಗ್ರೇಸರರಾದ, **ಶೇರ**=ಚೇರದೇಶಾಧಿಪತಿಯೂ ಆದ, **ಕುಲಶೇಖರನ್**= ಶ್ರೀ ಕುಲಶೇಖರಾಳ್ವಾರ್ರವರು, **ಮುಡಿವೇಂದರ್**=ಮಕುಟಧಾರಿಗಳಾದ ಚಕ್ರವರ್ತಿ-ಗಳಲ್ಲಿ, **ಶಿಖಾಮಣಿ**=ಶ್ರೇಷ್ಠರಾದವರು.

ಶ್ರೀ ಕುಲಶೇಖರಾಳ್ವಾರ್‌ರವರ ಚರಿತ್ರಪ್ರಭಾವದಲ್ಲಿ ಏಕದೇಶವನ್ನು ಮಾತ್ರ ಈ ಪಾಶುರವು ತೋರಿಸಿಕೊಡುತ್ತೆ. ಶ್ರೀ ಕುಲಶೇಖರಾಳ್ವಾರ್ರವರು ಧನುರ್ವಿದ್ಯಾ-ಪ್ರವೀಣರಲ್ಲಿ ಅಗ್ರೇಸರರಾಗಿ, ಚೇರದೇಶಾಧಿಪತಿಯಾಗಿ, ಕೊಲ್ಲಿ ಎಂಬ ರಾಜ್ಯ ವನ್ನು ಪರಿಪಾಲಿಸುತ್ತಾ, ಶತ್ರುಗಳೆಲ್ಲರ ಪರಾಕ್ರಮವನ್ನು ಎದುರಿಸಿ ಚಕ್ರವರ್ತಿ-ಗಳಾಗಿದ್ದರು. ಈ ಆಳ್ವಾರ್ರವರಿಗೆ ಭಗವದ್ಭಕ್ತಿಗಿಂತಲೂ ಭಾಗವತ ಭಕ್ತಿಯಲ್ಲಿ ವಿಶೇಷ ಆದರ ವಿದ್ದುದರಿಂದ, ಸದಾಕಾಲದಲ್ಲಿಯೂ ಭಾಗವತರನ್ನು ವಿಶೇಷವಾಗಿ ಆರಾಧಿಸುವುದರಲ್ಲಿಯೇ ನಿರತರಾಗಿದ್ದರು. ಆ ಭಾಗವತರೂ ಆ ವಿಶೇಷವಾದ ಅವರ ಸೌಲಭ್ಯ ಗುಣವನ್ನುಪಯೋಗಿಸಿಕೊಂಡು, ಸಭಾಮಂಟಪಗಳಲ್ಲಿಯೂ ಆಲೋಚನಾಸ್ಥಾನಗಳಲ್ಲಿಯೂ, ತಮಗೆ ತೋರಿದಾಗಲೆಲ್ಲ ರಾಜ ಅಥವಾ ಮಂತ್ರಿ-ಗಳ ಅಪ್ಪಣೆಯಿಲ್ಲದೆ ನಿಸ್ಸಂಕೋಚವಾಗಿ ಪ್ರವೇಶಿಸುತ್ತಿದ್ದರು. ಇದನ್ನು ಕಂಡ ಮಂತ್ರಿಗಳು ಇವರ ವಿಷಯದಲ್ಲಿ ಅತ್ಯಂತ ಅಸಹಿಷ್ಣುಗಳಾಗಿ, ಇವರ ಹೆಸರಿನಲ್ಲಿ ಯಾವುದಾದರೊಂದು ಕಳುವಿನ ಅಪವಾದವೊಂದನ್ನು ಹೊರಿಸಿ, ಇವರನ್ನು ರಾಜ-ದ್ರೋಹಿಗಳನ್ನಾಗಿಸಿ, ರಾಜನಿಗೂ ಇವರ ವಿಷಯದಲ್ಲಿ ದಂಡವಿಧಿಸುವಂತಹ ಮನೋಭಾವನೆಯನ್ನುಂಟುಮಾಡಬೇಕೆಂದು ತೀರ್ಮಾನಿಸಿ ಸಮಯವೊಂದನ್ನು ಎದುರು ನೋಡುತ್ತಿದ್ದರು. ಹೀಗಿರಲು ಒಂದು ದಿನ ಮಹಾರಾಜರ ಮನೆಯ ದೇವರ ವಿಗ್ರಹಕ್ಕೆ ಅಭಿಷೇಕಮಾಡಲೆಂದು, ದೇವರಮೇಲಿದ್ದ ಆಭರಣಗಳೆಲ್ಲವನ್ನೂ ಕಳಚಿಟ್ಟಿರಲು ಅತ್ಯಂತ ಅನರ್ಘ್ಯವಾದ ನವರತ್ನಹಾರವೊಂದನ್ನು, ಮಂತ್ರಿಗಳು ತೆಗೆದು ಬಚ್ಚಿಟ್ಟು, ಅದರ ವಿಚಾರಣೆನಡೆಯುವ ಸಮಯದಲ್ಲಿ–"ಭಾಗವತರೆಂದೂ, ಭಕ್ತರೆಂದೂ, ಕಪಟನಾಟಕ ಮಾಡುತ್ತಾ ಅತ್ತ ಇತ್ತ ಅಲೆಯುತ್ತಿರುವ ಈ ಬ್ರಾಹ್ಮಣಾಧಮರೇ ಕದ್ದುಕೊಂಡುಹೋಗಿದ್ದಾರೆ"—ಎಂದು ಮಹಾರಾಜರಲ್ಲಿ ವಿಜ್ಞಾಪಿಸಿದರು. ಆಗ ರಾಜರು ಭಾಗವತರ ವಿಷಯದಲ್ಲಿ ಅತ್ಯಲ್ಪವೂ ಚಿತ್ತ-

ವಿಕಾರವನ್ನು ಹೊಂದದೆ, ಅವರ ವಿಷಯದಲ್ಲಿ ಇನ್ನೂ ಅಧಿಕವಾದ ಆದರವನ್ನೂ, ಅಭಿನಿವೇಶವನ್ನೂ ಹೊಂದಿದವರಾಗಿ, ಸರ್ಪಭರಿತವಾದ ಕುಂಭವೊಂದನ್ನು ತರಲು ಆಜ್ಞಾಪಿಸಿ, ಅದು ತಂದ ಬಳಿಕ—"ಭಗವದ್ಭಕ್ತರಾದ ಇವರು ಕಳ್ಳತನವನ್ನು ಮಾಡುವುದಿಲ್ಲ, ಒಂದು ವೇಳೆ ಮಾಡಿದ್ದರೆ ಈ ಸರ್ಪವು ನನ್ನನ್ನು ಕಚ್ಚಲಿ"— ಎಂದು ಹೇಳಿ ಆ ಸರ್ಪಭರಿತವಾದ ಕೊಡದಲ್ಲಿ ಕೈಯಿಟ್ಟರು. ಆಗ ಸರ್ಪವು ಇವರನ್ನು ಕಚ್ಚದಿರಲು, ಇವರು ಈ ಪ್ರಸಂಗದಮುಖಾಂತರ ಹೊರಗೆಡಹಿದ ಭಾಗವತರ ಪ್ರಭಾವವನ್ನರಿತ ಮಂತ್ರಿಗಳು, ಸತ್ಯಾಂಶವನ್ನು ತಿಳಿಸಿ, ತಪ್ಪೊಪ್ಪಿ-ಕೊಂಡು ಅಪರಾಧಕ್ಷಾಪಣವನ್ನು ಮಾಡಿಕೊಂಡರು. ಈ ಪ್ರಸಂಗದಿಂದ ಇವರ ಭಾಗವತಭಕ್ತಿಯು ವಿಶೇಷವಾಗಿ ವ್ಯಕ್ತವಾಗುತ್ತೆ. ಆದುದರಿಂದಲೇ ಇವರು ಈ ರೀತಿಯಾಗಿ ಚಕ್ರವರ್ತಿಸಾರ್ವಭೌಮರಾಗಿದ್ದರೂ, ಭಗವದ್ಭಾಗವತ ಶೇಷತ್ವವನ್ನರಿತು ಆತ್ಮಜ್ಞಾನಪೂರ್ಣರಾಗಿದ್ದುದರಿಂದ, 'ಮುಡಿವೇಂದರ್ ಶಿಖಾಮಣಿ (ಚಕ್ರವರ್ತಿ-ಶ್ರೇಷ್ಠ) ಎಂದು ಪ್ರಸಿದ್ಧಿಪಡೆದವರಾಗಿದ್ದಾರೆ.

## ಪೆರುಮಾಳ್ ತಿರುಮೊಳಿ—ಮೊದಲನೆಯದಶಕ

ಮುಮುಕ್ಷುಗಳಲ್ಲಿ ಅಗ್ರೇಸರರಾದ ಈ ಆಳ್ವಾರ್ರವರಿಗೆ ಮುಕ್ತಭೋಗಾವಳಿಗಳು ಕ್ರಮವಾಗಿ ಪ್ರಾಪ್ತವಾಗುವುದರಲ್ಲಿ ಯಾವವಿಧವಾದ ಸಂದೇಹಲೇಶವಿಲ್ಲದಿದ್ದರೂ, ಅದು ದೇಶಾಂತರ — ಕಾಲಾಂತರಗಳಲ್ಲಿ ಲಭಿಸುವುದರಿಂದ ಅಲ್ಲಿಯವರೆಗೂ ಇರುವ ಕಾಲವಿಳಂಬವನ್ನು ಸಹಿಸಿದವರಾಗಿ ತಪಿಸುತ್ತಾ, ಭಗವಂತನನ್ನು ಕುರಿತು ಈ ಕೆಳಕಂಡ ಪಾಶುರಗಳನ್ನು ಹೇಳುತ್ತಾರೆ.

ಇರುಳಿರಿಯ ಚ್ಚುಡರ್‌ಮಣಿಗಳ್ ಇಮೈಕ್ಕುಮ್‌ನೆತ್ತಿ,
ಯಿನತ್ತುತ್ತಿ ಅಣಿಪಣಮಾಯಿರಂಗಳಾರ್ನ್ದ |
ಅರವರಶಪ್ಪೆರುಮ್ ಶೋದಿ ಅನಂದನೆನ್ನುಮ್
ಅಣಿವಿಳಂಗುಮುಯಿರ್ ವೆಳ್ಳೈಯಣೈಯಮೇವಿ |
ತಿರುವರಂಗಪ್ಪೆರುನಹರುಳ್‌ತೆಣ್ಣೀರ್‌ಪ್ಪೊನ್ನಿ,
ತಿರುಕ್ಕೈಯಾಲ್‌ಅಡಿವರುಡ ಪಳ್ಳಿಕೊಳ್ಳುಮ್ |
ಕರುಮಣಿಯೈ ಕ್ಕೋಮಳತ್ತೈ ಕಂಡುಕೊಂಡು
ಎನ್‌ಕಣ್ಣಿಣೈಗಳೆನ್ರುಕೊಲೋ ಕಳಿಕ್ಕುಂನಾಳೇ ||೧||

**ಇರುಳ್ ಇರಿಯ**=ಅಂಧಕಾರವು ತೊಲಗುವಂತೆ, **ಶುಡರ್ ಮಣಿಗಳ್**= ಜಾಜ್ವಲ್ಯವಾದ (ನಾಗ) ರತ್ನಗಳು, **ಇಮೈಕ್ಕುಮ್ ನೆತ್ತಿ**=ಪ್ರಕಾಶಿಸುವಂತಹ ಲಲಾಟಪ್ರದೇಶವುಳ್ಳ, **ಇನತ್ತುತ್ತಿ ಅಣಿ**=ಶ್ಲಾಘ್ಯವಾದ ಚುಕ್ಕಿಗಳಂತಿರುವ ಮಚ್ಚೆ-ಗಳಿಂದ ಕೂಡಿರುವ, **ಪಣಮ್ ಆಯಿರಂಗಳ್ ಆರ್ನ್ದ**=ಸಾವಿರ ಹೆಡೆಗಳನ್ನು ಹೊಂದಿದವನಾದ, **ಅರವುಅರಶ**=ಸರ್ಪ ಕುಲಗಳಿಗೆಲ್ಲ ಪ್ರಭುವಾದ, **ಪೆರುಮ್-ಶೋದಿ**=ಮಹಾಜ್ಯೋತಿಸ್ಸುಳ್ಳವನಾದ, **ಅನನ್ದನ್ ಎನ್ನುಮ್**=ಅನಂತ ನೆಂಬ ಹೆಸರುಳ್ಳ, **ಅಣಿ ವಿಳಂಗುಂ**=ಸೌಂದರ್ಯವನ್ನು ಹೊಂದಿದ, **ಉಯರ್ ವೆಳ್ಳೈ** =ವಿಶಾಲವಾಗಿಯೂ ಬಿಳುಪಾಗಿಯೂ ಇರುವ, **ಅಣೈಯೈ ಮೇವಿ**=ತಲ್ಪದಲ್ಲಿ ಸೇರಿ, **ತಿರುಅರಂಗಮ್ ಪೆರುನಹರುಳ್**=ಶ್ರೀರಂಗವೆಂಬ ಮಹಾನಗರದಲ್ಲಿ, **ತೆಳ್ ನೀರ್**=ಸ್ವಚ್ಛವಾದ ತೀರ್ಥದಿಂದ ಕೂಡಿರುವ, **ಪೊನ್ನಿ**=ಕಾವೇರಿಯಾದರೋ **ತಿರೈ ಕೈಯಾಲ್**=ಅಲೆಗಳೆಂಬ ಕೈಗಳಿಂದ, **ಅಡಿವರುಡ**=ಪಾದಗಳನ್ನು ಹಿಡಿಯುವಂತೆ, **ಪಳ್ಳಿಕೊಳ್ಳುಮ್**=ಶಯನಿಸಿರುವಂತಹ, **ಕರುಮಣಿಯೈ**= ನೀಲಮಣಿ ನಿಭನಾಗಿರುವ, **ಕೋಮಳತ್ತೈ**=ಸುಕುಮಾರದಿವ್ಯಮಂಗಳ ವಿಗ್ರಹ-ನಾಗಿಯೂ ಇರುವ ಶ್ರೀರಂಗನಾಥನನ್ನು, **ಎನ್‌ಕಣ್ ಇಣೈಗಳ್**=ನನ್ನ ಎರಡು ಕಣ್ಣುಗಳೂ, **ಕಣ್ಡು ಕೊಣ್ಡು** = ದರ್ಶನಮಾಡಿ, **ಕಳಿಕ್ಕುಮ್ ನಾಳ್** = ಆನಂದಿಸುವಕಾಲವು, **ಎನ್ರು ಕೊಲ್**=ಯಾವಾಗ ಬರುತ್ತದೆಯೋ ?

ಆಳ್ವಾರ್‌ರವರು ಮೊತ್ತಮೊದಲಿನ ಈ ಪಾಶುರದಲ್ಲಿ "**ಕದಾಹಂ ಕಾವೇರೀ ತಟಪರಿಸರೇ ರಂಗನಗರೇ | ಶಯಾನಂ ಭೋಗೀಂದ್ರೇ ಶತಮುಖಮಣಿ ಶ್ಯಾಮಲರುಚಿಂ |**"— ಎಂಬಂತೆ ಶ್ರೀರಂಗದಲ್ಲಿ ಶ್ರೀರಂಗನಾಥನು ಬಿಜಯು-ಮಾಡಿರುವ ಬಗೆಯನ್ನು ವರ್ಣಿಸಿ, ಅಂತಹ ರಂಗನಾಥನನ್ನು ಎಂದು ಕಾಣುವೆನೋ —ಎಂದು ಹಂಬಲಿಸಿದ್ದಾರೆ. ಶ್ರೀರಂಗದಲ್ಲಿ ರಂಗನಾಥನು ಸರ್ಪವಾದ ಆದಿ-ಶೇಷನ ಮೇಲೆ ಮಲಗಿದ್ದಾನೆ. ಆ ಆದಿಶೇಷನು ತನ್ನ ಹೆಡೆಯಲ್ಲಿರುವ ನಾಗರತ್ನ-ದಿಂದ ಬಾಹ್ಯಾಂಧಕಾರವನ್ನು ದೂರಮಾಡುವಂತೆಯೇ, ತತ್ಸನ್ನಿವೇಶ ಅನು-ಸಂಧಾನಮಾತ್ರದಿಂದಲೇ ನಮ್ಮೊಳಗಿರುವಂತಹ ಅಜ್ಞಾನವೆಂಬ ಕತ್ತಲೆಯನ್ನೂ ನೀಗಿಸುವಂತಹವನಾಗಿದ್ದಾನೆ. ಆ ಆದಿಶೇಷನು, ಆ ರೀತಿಯ ಜಾಜ್ವಲ್ಯವಾದ ನಾಗರತ್ನಗಳು ಪ್ರಕಾಶಿಸುವಂತಹ ಲಲಾಟ ಪ್ರದೇಶವುಳ್ಳವನಾಗಿ, ಶ್ಲಾಘ್ಯವಾದ ಚುಕ್ಕಿಗಳಂತಿರುವ ಮಚ್ಚೆಗಳಿಂದ ಕೂಡಿ, ಭಗವಂತನು ತನ್ನನ್ನು ಬಿಟ್ಟು ಒಂದು ಕ್ಷಣವೂ ಇಲ್ಲದಿರುವುದರಿಂದ ಉಂಟಾದ ಹರ್ಷ ಪ್ರಕರ್ಷದಿಂದ ಹೆಡೆಗಳು ಸಾವಿರಾರಾಗಿ ಅನೇಕ ಸಂಖ್ಯಾತವಾಗಿ ತೋರುತ್ತಾ, ಸರ್ಪ ಕುಲಗಳಿಗೆ ಪ್ರಭು-ವಾಗಿ, ಮಹಾಜ್ಯೋತಿಸ್ಸಿನಿಂದ ಕೂಡಿದವನಾಗಿದ್ದಾನೆ. ಇವನು—"**ಶೆನ್ರಾಲ್**

ಕುಡೈಯಾಮ್, ಇರುಂದಾಲ್ ಶಿಂಗಾಶನಮಾಮ್"....., "ನಿವಾಸಶಯ್ಯಾಸನಪಾದುಕಾಂಶುಕೋಪಧಾನವರ್ಷಾತಪವಾರಣಾದಿಭಿಃ । ಶರೀರಭೇದೈಸ್ತವಶೇಷತಾಂಗತೈಃ"— ಇತ್ಯಾದಿಯಾಗಿ ಹೇಳಲ್ಪಡುವಂತೆ ಭಗವಂತನಿಗೆ ಅವನ ಸಮಯಾನುಸಾರವಾಗಿ ವಾಸಸ್ಥಾನನಾಗಿಯೂ, ತಲ್ಪವಾಗಿಯೂ, ಪಾದುಕೆಯಾಗಿಯೂ, ವಸ್ತ್ರಗಳಾಗಿಯೂ, ಕೊಡೆಯಾಗಿಯೂ, ಸಿಂಹಾಸನವೇ ಮೊದಲಾದವು ಗಳಾಗಿಯೂ ರೂಪವನ್ನುಧರಿಸಿ ಸೇವೆಸಲ್ಲಿಸುತ್ತಿದ್ದರೂ, ಭಗವಂತನಿಗೆ ತಾನು ಸೇವೆಸಲ್ಲಿಸಿದುದು ಸಾಲದು ಎಂದು ಮತ್ತೆ ಮತ್ತೆ ಅವನ ಸೇವೆಯನ್ನೇ ಮಾಡಲು ಇವನ ಮನೋರಥವು ಮೇಲ್ಮೇಲೆ ಉಕ್ಕಿಬಂದು, ಇವನ ಸೇವೆಗೆ ಅಂತವೇ ಇಲ್ಲದಿರುವುದರಿಂದ 'ಅನಂತ' ಎಂಬ ಹೆಸರನ್ನು ಪಡೆದಿದ್ದಾನೆ. ವಿಶೇಷವಾದ ಸೌಂದರ್ಯದಿಂದ ಪ್ರಕಾಶಿಸುತ್ತಿದ್ದಾನೆ. ಭಗವಂತನ ಸೇವೆಮಾಡಿದುದರಿಂದುಂಟಾದ ಹರ್ಷ ಭರದಿಂದ ದೇಹವು ಹಿಗ್ಗಿರುವುದರಿಂದ ವಿಶಾಲವಾಗಿ ಕಾಣುತ್ತಿದ್ದಾನೆ. ಹೀಗಿರುವ ಶೇಷತಲ್ಪದಲ್ಲಿ ಶ್ರೀರಂಗದಲ್ಲಿ ಭಗವಂತನು ಮಲಗಿದ್ದಾನೆ.

ಶ್ರೀರಂಗವು ನಾಲ್ಕುಕಡೆಯೂ ಕಾವೇರಿ ನದಿಯಿಂದ ಸುತ್ತುವರಿಯಲ್ಪಟ್ಟಿದೆ. ಅದು ನೋಡುವುದಕ್ಕೆ ಹೇಗಿರುವುದೆಂದರೆ,—ಭಗವಂತನು ಹಿಂದೆಮಾಡಿದ ಅನೇಕ ಅವತಾರಗಳಲ್ಲಿ ನಡೆದುನಡೆದು ಆಯಾಸಗೊಂಡ ಪಾದಗಳನ್ನು ಕಾವೇರಿನದಿಯು (ಮಾತೆಯು) ತಿಳಿಯಾಗಿರುವ ತೀರ್ಥದಿಂದ ಕೂಡಿರುವ ತನ್ನ ಅಲೆಗಳೆಂಬ ಕೈಗಳಿಂದ ಹಿಡಿದು ಶೈತ್ಯೋಪಚಾರಮಾಡಿ ಭಗವಂತನ ಶ್ರಮವನ್ನು ನೀಗಿಸುತ್ತಿರುವಳೆಂಬಂತೆ ಕಾಣುತ್ತದೆ. ಈ ರೀತಿಯಾಗಿ ಕಾವೇರಿಯಿಂದ ಸುತ್ತುವರಿಯಲ್ಪಟ್ಟ ಶ್ರೀ ರಂಗಕ್ಷೇತ್ರದಲ್ಲಿ ಶೇಷತಲ್ಪದಲ್ಲಿ ಮಲಗಿರುವ ರಂಗನಾಥನ ದಿವ್ಯಮಂಗಳ ವಿಗ್ರಹವು ನೀಲಮಣಿ ಕಾಂತಿಯಿಂದ ಕೂಡಿ ಸೌಕುಮಾರ್ಯದಿಂದ ಶೋಭಿಸುತ್ತಿದೆ. ಇಂತಹ ರಂಗನಾಥನನ್ನು ನನ್ನ ಎರಡುಕಣ್ಣುಗಳೂ ದರ್ಶನಮಾಡಿ ಆನಂದಿಸುವ ಕಾಲವು ಎಂದು ಬರುತ್ತದೆಯೋ ? — ಎಂದು ಹಂಬಲಿಸುತ್ತಾರೆ. ॥೧॥

ವಾಯೋರೀರೈ ಞ್ಞೂರುತುದಙ್ಗಳಾರ್ನ್ದ
ವಳೆಯುಡಂಬಿಲ್ ಅಳಲ್ ನಾಗಮ್ ಉಮಿಳ್ನ್ದಶೆನ್ದೀ
ವಿಯಾಮಲರ್ಕ್ಷೆನ್ನಿ ವಿದಾನ ಮೇಪ್ಪೋಲ್
ಮೇನ್ಮೇಲುಂ ಮಿಗವೆಂಗುಂ ಪರನ್ದದನ್ ಕೀಳ್
ಕಾಯಾಮ್ಪೂಮಲರ್ಪ್ಪಿರಙ್ಗಲನ್ನಮಾಲೈ
ಕ್ಕಡಿಯರಙ್ಗತ್ತರವಣೈಯಿಲ್ ಪಳ್ಳಿಕೊಳ್ಳುಮ್

**ಮಾಯೋನೈ ಮಣತ್ತೂಣೇ ಪತ್ತಿನಿನ್ರೇನ್**
**ವಾಯಾರವೆನ್ರುಕೊಲೋ ವಾಳ್ತ್ತುಂ ನಾಳೇ** ||೨||

**ಓರ್ ಈರ್ ಐಞ್ಞೂರುವಾಯ್**=ಒಂದು ಸಾವಿರ ಬಾಯಿಗಳಿಂದಲೂ, **ತುದಙ್ಗಳಾರ್ನ್ದ**=ಅನೇಕ ಚುಕ್ಕಿಗಳಿಂದಲೂ ತುಂಬಿರುವ, **ವಳ್ಳೈ ಉಡಂಬಿನ್**= ಬೆಳ್ಳಗಿರುವ ದೇಹದಿಂದ ಕೂಡಿರುವ, **ಅಳಲ್**=ಪ್ರತಿಪಕ್ಷಿಗಳು ಹತ್ತಿರ ಬಾರದಂತೆ ವಿಷಜ್ವಾಲೆಯನ್ನು ಕಾರುವಂತಹ, **ನಾಗಮ್**=ಆದಿಶೇಷನು, **ಉಮಿಳ್ನ್ದ**= ತನ್ನ ಬಾಯಿಂದ ವಮನ ಮಾಡುವಂತಹ, **ಶೇಮ್ತೀ**=ಕೆಂಪಗಿರುವ ಅಗ್ನಿ-ಜ್ವಾಲೆಯುಳ್ಳ, **ಶೆನ್ನಿ**=ಮಸ್ತಕದ ಮೇಲೆ, **ವಿಯೂತಮಲರ್ ವಿತಾನಮ್ ಪೋಲ್**=ಶಾಶ್ವತವಾದ ಪುಷ್ಪಮಯವಾದ ವಿತಾನದಂತೆ, **ಎಂಗುಂ ನೇರ್ ಮೇಲುಮ್ ಪರನ್ದು ಮಿಕ**=ಮೇಲ್ಭಾಗದಲ್ಲಿ ಎಲ್ಲೆಲ್ಲಿಯೂ ವಿಸ್ತರಿಸಿ ಪ್ರಕಾಶಿಸುವ, **ಅರ್ತಕೀಳ್**=ಆ ರೀತಿಯಾದ ಪುಷ್ಪವಿತಾನದ ಕೆಳಗಡೆ, **ಕಡಿ ಅರಙ್ಗತ್ತು**= ಪರಿಮಳಭರಿತವಾದ ಶ್ರೀರಙ್ಗ ವಿಮಾನದಲ್ಲಿ, **ಅರವು ಅಣೈಯಿಲ್**=ಶೇಷಶಯನ ದಲ್ಲಿ, **ಪಳ್ಳಿಕೊಳ್ಳುಮ್**=ಮಲಗುವ, **ಕಾಯಾಮ್ಪೂ ಮಲರ್ ಪಿರಙ್ಗಲ್ ಅನ್ನ**=ಅತಸೀಪುಷ್ಪದ ಗೊಂಚಲುಗಳಿಂದ ಕಟ್ಟಲ್ಪಟ್ಟಿರುವ ಮಾಲೆಯಂತಿರುವ, **ಮಾಲೈ**=ಆಶ್ರಿತರಲ್ಲಿ ವ್ಯಾಮೋಹದಿಂದ ಕೂಡಿರುವ, **ಮಾಯೋನೈ**=ಆಶ್ಚರ್ಯ ಗುಣಚೇಷ್ಟಿತನಾದ ಭಗವಂತನ, **ಮಣತ್ತೂಣೆ ಪತ್ತಿನಿನ್ರು**=ಶ್ರೀರಂಗದ ಗರ್ಭ-ಗೃಹದಲ್ಲಿರುವ 'ತಿರುಮಣತ್ತೂಣ್'- ಎಂಬ ಸ್ತಂಭಯುಗ್ಮಗಳನ್ನು ಅವಲಂಬಿಸಿ ನಿಂತು, **ಎನ್ವಾಯಾರ**=ನನ್ನ ಬಾಯ್ತುಂಬ, **ವಾಳ್ತ್ತುಮ್ ನಾಳ್**= ಸ್ತೋತ್ರಮಾಡುವ ಕಾಲವು, **ಎನ್ರು ಕೊಲೋ**=ಎಂದು ಬರುವುದೋ ?

ಪ್ರತಿಯೊಬ್ಬ ಚೇತನನೂ, ಕರ್ಮಬಂಧವನ್ನು ನೀಗಿ ಪರಮಾತ್ಮನನ್ನು ಸೇರಿ ಪರಿಪೂರ್ಣ ಬ್ರಹ್ಮಾನಂದವನ್ನು ಪಡೆಯಲು. ಸಾಧನಾನುಷ್ಠಾನಮಾಡಲು ಸಹಾಯಕ ವಾಗುವಂತೆ. ಪರಮಾತ್ಮನೇ ಪ್ರತಿ ಚೇತನರಿಗೂ ಕರಣ ಕಳೇಬರಗಳನ್ನಿತ್ತಿದ್ದಾನೆ. ಆದುದರಿಂದ ಪ್ರತಿ ಚೇತನನೂ ತನ್ನ ಪ್ರತಿಯೊಂದು ಇಂದ್ರಿಯವನ್ನೂ ಪರಮಾತ್ಮನ ವಿಷಯದಲ್ಲಿ ತೊಡಗಿಸಬೇಕು. ಇದನ್ನೇ ಕುಲಶೇಖರಾಳ್ವಾರ್ರವರು, ತಮ್ಮ ಮುಕುಂದಮಾಲಾ ಸ್ತೋತ್ರದಲ್ಲಿ ವಿಶದವಾಗಿ ವಿವರಿಸಿದ್ದಾರೆ. ಅವುಗಳಲ್ಲಿ ಮೊದಲು **'ಕೃಷ್ಣಂ ಲೋಕಯ ಲೋಚನದ್ವಯ'**-ಎಂದು ಹೇಳಿರುವಂತೆ, ಕಣ್ಗಳಿರುವುದಕ್ಕೆ ಸಾರ್ಥಕವಾಗುವಂತೆ, ಶ್ರೀರಂಗ ಕ್ಷೇತ್ರದಲ್ಲಿ ಶ್ರೀರಂಗನಾಥನ ಸ್ವರೂಪದಲ್ಲಿ ಬಿಜಯ ಮಾಡಿಸಿರುವ ಪರಮಾತ್ಮನ ಅರ್ಚಾಮೂರ್ತಿಯ ಸ್ವರೂಪವನ್ನು ಕಣ್ತುಂಬ ಕಂಡು, ನೇತ್ರಾನಂದವನ್ನು ಪಡೆಯುವ ಭಾಗ್ಯವು ಎಂದು ತಮಗೆ ಲಭಿಸುತ್ತದೆಯೋ

—ಎಂದು ಹಾತೊರೆಯುತ್ತಿರುವ ತನ್ನ ಮನಸ್ಥಿತಿಯನ್ನು ಹಿಂದಿನ ಹಾಡಿನಲ್ಲಿ ತಿಳಿಸಿ, ಈ ಪಾಶುರದಲ್ಲಿ **'ಜಿಹ್ವೇ ಕೀರ್ತಯ ಕೇಶವಂ'**—ಎಂದು ತಾನೇ ಹೇಳಿರುವಂತೆ ನಾಲಿಗೆಯನ್ನು ಪಡೆದುದಕ್ಕೆ ಸಾರ್ಥಕವಾಗುವಂತೆ, ಆ ಪರಮಾತ್ಮನನ್ನು ಸ್ತೋತ್ರ ಮಾಡುವುದರಿಂದ ಲಭಿಸುವ ವಾಗಾನಂದವು ತನಗೆ ಎಂದು ಲಭಿಸುವುದೋ—ಎಂದು ಹಂಬಲಿಸುತ್ತಾರೆ. ಭಗವಂತನ ಶುಭಾಶ್ರಯಭೂತವಾದ ದಿವ್ಯ ಮಂಗಳ ಮೂರ್ತಿಸ್ವರೂಪವನ್ನು ಕಣ್ಣಾರ ಕಂಡು, ಅವನ ಸೌಂದರ್ಯಾತಿಶಯದಿಂದ ಕೂಡಿದ ಸ್ವರೂಪ–ರೂಪಗುಣ ವಿಭವೈಶ್ವರ್ಯಗಳನ್ನು ಅನುಭವಿಸುತ್ತಿರುವಲ್ಲಿ ಉಂಟಾಗುವ, ಮೇಲೆ ಮೇಲೆ ಉಕ್ಕಿ ಹರಿಯುತ್ತಿರುವ ಆನಂದವನ್ನು ಮನಸ್ಸಿನಲ್ಲಿಯೇ ಅಡಗಿಸಿ-ಕೊಳ್ಳಲಾರದೆ. 'ಮೌನದ್ರುಹೋ ಮುಖರಯನ್ತಿ ಗುಣಾಸ್ತ್ವದೀಯಾಃ' ಎಂಬಂತೆ, ಮೂಗನೂ ಬಾಯ್ತೆರದು, ತನಗಾದ ಭಗವದ್ಗುಣಾನುಭವ ಪರೀವಾಹವನ್ನು ಸ್ತೋತ್ರರೂಪದಲ್ಲಿ ಹಾಡುವಂತಾಗುತ್ತದೆ. ಆದುದರಿಂದಲೇ ಮೊದಲು ದರ್ಶನಭಾಗ್ಯ ವನ್ನು ಅಪೇಕ್ಷಿಸಿ, ಬಳಿಕ ಆ ಭಗವಂತನನ್ನು ಸ್ತೋತ್ರಮಾಡುವ ಭಾಗ್ಯವನ್ನೂ ಅಪೇಕ್ಷಿಸುತ್ತಾರೆ.

ಹಿಂದಿನ ಪಾಶುರದಲ್ಲಿ ವರ್ಣಿಸಿದಂತೆಯೇ ಶ್ರೀ ರಂಗನಾಥನು—ಸಾವಿರಾರು ಬಾಯಿಗಳಿಂದಕೂಡಿ, ಅನೇಕ ಚುಕ್ಕಿಗಳಂತಿರುವ ಮಚ್ಚೆಗಳಿಂದ ತುಂಬಿ, ಬೆಳ್ಳಗಿರುವ ದೇಹದಿಂದ ಕೂಡಿದ ಆದಿಶೇಷನ ಮೇಲೆ ಮಲಗಿದ್ದಾನೆ. ಪರಾಶರಭಟ್ಟರು **"ಸ್ನೇಹಾದಸ್ಥಾನರಕ್ಷಾವ್ಯಸನಿಭಿಃ"** ಎಂದು ಹೇಳಿದಂತೆ, ಭಗವಂತನು ತನ್ನ ಸಂರಕ್ಷಣೆಯನ್ನು ತಾನು ಮಾಡಿಕೊಳ್ಳುವ ಸಾಮರ್ಥ್ಯವನ್ನು ಹೊಂದಿದ್ದರೂ, ಆದಿಶೇಷನು ಭಗವಂತನಲ್ಲಿ ತನಗಿರುವ ಪ್ರೇಮವಿಶೇಷದಿಂದ, ಹಿಂದೆ ಭಗವಂತನಲ್ಲಿ ಮಧುಕೈಟಭಾದಿಗಳಿಂದ ಮಾಡಲ್ಪಟ್ಟ ಕೋಲಾಹಲವನ್ನು ನೆನಸಿಕೊಂಡು, ಮುಂದೆ ಯಾದರೂ ಎಂದೂ ಭಗವಂತನ ಪ್ರತಿಪಕ್ಷಿಗಳಾರೂ ಭಗವಂತನ ಹತ್ತಿರಕ್ಕೆ ಬರಲಾಗದಂತೆ ಸದಾಕಾಲದಲ್ಲಿಯೂ ವಿಷಾಗ್ನಿಯನ್ನು ವಮನಮಾಡುತ್ತಲೇಇದ್ದಾನೆ. ಈ ರೀತಿಯಾಗಿ ಆದಿಶೇಷನ ಬಾಯಿಂದ ಹೊರ ಹೊಮ್ಮಿದ ಕೆಂಪಾಗಿರುವ ವಿಷಾಗ್ನಿಜ್ವಾಲೆಯು ಮೇಲೆ ಮೇಲೆ ಎಲ್ಲೆಡೆಯೂ ಪ್ರಸರಿಸಿರುವುದರಿಂದ ಅದು ಭಗವಂತನಿಗೆ ಅವನ ತಲೆಯ ಮೇಲೆ ಶಾಶ್ವತವಾಗಿ ನಿರ್ಮಿತವಾದ ಪುಷ್ಪ-ಮಯವಿತಾನದಂತೆ ಕಾಣುತ್ತದೆ. **"ಯಂ ಸರ್ವಗನ್ಧ ಇತಿ ಸಾದರಮುದ್ವಹಂತೀ"** ಎಂದೂ ಗೋದಾಸ್ತುತಿಯಲ್ಲಿ ವೇದಾಂತ ದೇಶಿಕರು ವರ್ಣಿಸಿರುವಂತೆ, ವೇದಗಳೆಲ್ಲವೂ —'**ಸರ್ವರಸಃ, ಸರ್ವಗಂಧಃ**'—ಎಂದೂ ಉದ್ಘೋಷಿಸುವ ಆ ಭಗವಂತನು ಆದಿಶೇಷನ ಮೇಲೆ ಮಲಗಿರುವುದು ಅತಸೀಪುಷ್ಪಗಳನ್ನು ಒಂದು ದೊಡ್ಡ

ಮಾಲೆಯಾಗಿ ಕಟ್ಟಿ, ಆದಿಶೇಷನ ಮಡಿಲಲ್ಲಿಟ್ಟಿರುವಂತೆ ಕಾಣುತ್ತದೆ. ಆ ಭಗವಂತನು ತನ್ನನ್ನು ಆಶ್ರಯಿಸಿದ ಭಕ್ತರಲ್ಲಿ ವಿಶೇಷವಾದ ವ್ಯಾಮೋಹದಿಂದ ಕೂಡಿರುತ್ತಾನೆ. "ನಿದ್ರಾಸಿ ಜಾಗರ್ಯಯಾ" ಎಂದು ಭಟ್ಟರು ಹೇಳುವಂತೆ ನಿದ್ದೆ ಮಾಡುತ್ತಿದ್ದರೂ ಜಾಗ್ರತನಾಗಿರುವುದರಿಂದ ಆಶ್ಚರ್ಯ ಚೇಷ್ಟಿತನಾಗಿದ್ದಾನೆ. ಇವನ ದರ್ಶನವನ್ನು ಮಾಡಿ, ಇವನ ಸೌಂದರ್ಯದಿಂದ ಮೋಹಿತರಾಗಿ ಅನೇಕ ಭಕ್ತರು "ಕಾಲಾಳುಮ್ ನೆಂಜಳಿಯುಮ್ ಕಣ್‌ಶುಳಲುಂ"— ಎನ್ನುವಂತೆ ಭಗವದನುಭವವಿವಶರಾಗಿ ಪ್ರಜ್ಞಾಹೀನರಾಗಿ ಮೂರ್ಛಿತರಾಗಿ ಬೀಳುವವರುಂಟು. ಅಂತಹವರಿಗೆ ಹಸ್ತಾವಲಂಬನಾರ್ಥವಾಗಿ ಶ್ರೀರಂಗದಗರ್ಭಗೃಹದಲ್ಲಿ ಸ್ತಂಭಗಳೆರಡು ನಿರ್ಮಿತವಾಗಿದೆ. ಅವುಗಳನ್ನು 'ಮಣತ್ತೂಣ್' — ದಿವ್ಯಸ್ತಂಭಗಳೆಂದು ಕರೆಯುತ್ತಾರೆ. ಕುಲಶೇಖರಾಳ್ವಾರವರು, ತಾನು ಆ ಭಗವಂತನ ದರ್ಶನಮಾಡಿ, ಭಗವದನುಭವವಿವಶರಾಗಿ ಆ ದಿವ್ಯಸ್ತಂಭಗಳನ್ನು ಅವಲಂಬಿಸುವ ಸ್ಥಿತಿಯನ್ನು ಹೊಂದಬೇಕೆಂಬೂ ಮತ್ತು ಅಲ್ಲಿಯೇ ನಿಂತು ಆ ಭಗವಂತನ ಗುಣಾನುಭವವನ್ನು ಬಾಯ್ತುಂಬ ಹಾಡಬೇಕೆಂದೂ ಅಪೇಕ್ಷಿಸಿ, ಅಂತಹ ಕಾಲವು ಎಂದು ತಮಗೆ ಸಂಭವಿಸುವುದೋ —ಎಂದು ಹಂಬಲಿಸುತ್ತಾರೆ. ||೨||

ಎಮ್ಮಾಣ್ಬಿಲಯರ್ ನಾನ್ಗುನಾವಿನಾಲುಮ್
ಎಡುತ್ತೇತ್ತಿಯೀರಿರಣ್ಡು ಮುಗಮುಮ್ ಕೊಣ್ಡು
ಎಮ್ಮಾಡುಮೆಳಿಲ್ಕಣ್ಗಳೆಟ್ಟಿನೋಡುಮ್
ತೊಳುದೇತ್ತಿಯಿನಿತಿರೈಞ್ಜಿ ನಿನ್ರುಶೆಮ್ಬೊನ್
ಅಮ್ಮಾನ್ರನ್ ಮಲಕ್ಕಮಲ ಕೊಪ್ಪೂಳ್ ತೋನ್ರು
ಅಣಿಅರಂಗತ್ತರವಣೈಯಿಲ್ ಪಳ್ಳಿಕೊಳ್ಳುಮ್
ಅಮ್ಮಾನ್ ತನ್ ಅಣಿಇಡೈಕ್ಕೀಳಲರ್‌ಕಳಿಟ್ಟು
ಅಙ್ಗಡಿಯುವರೋಡೆನ್ರು ಕೊಲೋ ಅಣುಕುಂ ನಾಳೇ ||೩||

ಎಮ್ಮಾಣ್ಬಿನ್‌ಅಯರ್=ಆ ರೀತಿಯಾಗಿ ಪ್ರಭಾವಶಾಲಿಯಾದ ಚತುರ್ಮುಖನಾದ ಬ್ರಹ್ಮದೇವನು, ನಾನ್ಗುನಾವಿನಾಲುಂ=ತನ್ನ ನಾಲ್ಕು ನಾಲಿಗೆಗಳಿಂದಲೂ, ಎಡುತ್ತು ಏತ್ತಿ=ಸ್ತುತಿವಚನಗಳನ್ನೂ ಕೊಂಡು ಸ್ತೋತ್ರಮಾಡಿ, ಈರಿರಣ್ಡು ಮುಕಮುಮ್‌ಕೊಣ್ಡು=ನಾಲ್ಕು ಮುಖಗಳಿಂದಲೂ, ಇನಿದು ಏತ್ತಿ=ಪರಮ ಭೋಗ್ಯವಾದ ವೇದಗಳಿಂದ ಸ್ತುತಿಸಿ, ಎಳಿಲ್ ಕಣ್ಗಳ್ ಎಟ್ಟಿನೋಡುಮ್=ಸುಂದರವಾದ ಎಂಟು ಕಣ್ಣುಗಳಿಂದಲೂ, ಎಮ್ಮಾಡುಮ್=ಭಗವಂತನ ದಿವ್ಯಮಂಗಳ ವಿಗ್ರಹದ ಎಲ್ಲ ಪ್ರಾಂತಗಳಲ್ಲಿಯೂ, ತೊಳದು ಇರೈಂಜಿ ನಿನ್ರು=ನಮಸ್ಕರಿಸಿ ಸೇವಿಸಲು

ಅನುಕೂಲವಾಗುವಂತೆ ನಿಂತಿರುವ, **ಶೆಮ್ ಪೊರ್ಅಮ್ಮಾನ್** = ಸ್ವರ್ಣದಂತೆ ಹೊಳೆ-ಯುವ (ರುಕ್ಮಾಭನಾದ) ಸ್ವಾಮಿಯು, **ತನ್** = ತನ್ನ, **ಕಮಲಮಲರ್ ಕೊಪ್ಪೂಳ್** = ಕಮಲ ಪುಷ್ಪದಿಂದ ಪ್ರಕಾಶಿಸುವ ನಾಭಿಯು, **ತೋನ್ರ** = ಪ್ರಕಾಶಿಸುವಂತೆ, **ಅಣಿ ಅರಂಗತ್ತು** = ರಮಣೀಯವಾದ ಶ್ರೀರಂಗ ವಿಮಾನದಲ್ಲಿ, **ಅರವು ಅಣ್ಣೈಯಿಲ್ ಪಳ್ಳಿಕೊಳ್ಳುಮ್** = ಶೇಷಶಯನದಲ್ಲಿ ಶಯನಿಸುತ್ತಿರುವ, **ಅಮ್ಮಾನ್ ತನ್** = ಆ ಸ್ವಾಮಿಯ, **ಅಡಿ ಇಣೈಕಳ್** = ಪಾದಯುಗಳಗಳ ಪರಿಸರದಲ್ಲಿ, **ಅಲರ್‌ಕಳ್ ಇಟ್ಟು** = ಪುಷ್ಪಗಳನ್ನು ಸಮರ್ಪಿಸಿ, **ಅಙ್ಗು ಅಡಿಯವರೋಡು** = ಅಲ್ಲಿರುವ ಭಗವದ್ದಾಸರೊಡನೆ, **ಅಣುಕುಮ್ ನಾಳ್** = ಕೂಡಿ ಬಾಳುವ ಕಾಲವು, **ಎನ್ರು ಕೊಲೋ** = ಎಂದು ಪ್ರಾಪ್ತವಾಗುವುದೊ ? ॥೩॥

ಈ ಪಾಶುರದಲ್ಲಿ, ಶ್ರೀ ಕೃಷ್ಣ ಪರಮಾತ್ಮನು ಭಗವದ್ಗೀತೆಯಲ್ಲಿ **"ಪತ್ರಂ ಪುಷ್ಪಂ ಫಲಂತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ |.....ತದಹಂಭಕ್ತ್ಯು ಪಹೃತಂ"**— ಎಂದು ಅಪ್ಪಣೆ ಕೊಟ್ಟಿರುವಂತೆ, ಭಕ್ತಿಯಿಂದ ಪುಷ್ಪಗಳನ್ನು ತಂದು ಶ್ರೀರಂಗನಾಥನ ಅಡಿದಾವರೆಗಳಲ್ಲಿ ಸಮರ್ಪಿಸಿ, ಅಲ್ಲಿ ಅದೇ ರೀತಿ ಸದಾ ಕಾಲದಲ್ಲಿಯೂ ಆ ಭಗವಂತನ ಕೈಂಕರ್ಯದಲ್ಲೇ ನಿರತರಾಗಿರುವ, ಪರಮ ಸಾತ್ವಿಕರಾದ, ಪರಮೈ-ಕಾಂತಿಗಳಾದ ಭಗವದ್ಭಕ್ತರೊಡನೆ ಕೂಡಿಬಾಳುವ ಭಾಗ್ಯವು ಎಂದು ತನಗೆ ಲಭಿಸುವುದೋ—ಎಂದು ಆಳ್ವಾರವರು ಹಂಬಲಿಸುತ್ತಾರೆ.

ಚತುರ್ಮುಖ ಬ್ರಹ್ಮನು ಶ್ರೀರಂಗ ವಿಮಾನದಲ್ಲಿ ಪರಮಪುರುಷನನ್ನು ಅನೇಕ ಕಾಲ ಆರಾಧಿಸಿ ಉಜ್ಜೀವಿಸಿದನೆಂದು ಪುರಾಣಗಳಲ್ಲಿ ಪ್ರಸಿದ್ಧವಾಗಿದೆ. ಅದನ್ನಾಶ್ರಯಿಸಿ ಪೂರ್ವಾರ್ಥವನ್ನು ಹೇಳುತ್ತಾರೆ. ಅಕಾರವಾಚ್ಯನಾದ ಭಗವಂತನಿಂದ ಜನಿಸಿದುದ-ರಿಂದ ಬ್ರಹ್ಮನಿಗೆ 'ಅಜ'ನೆಂದು ಹೆಸರು. **"ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋ ವೈವೇದಾಂಶ್ಚ ಪ್ರಹಿಣೋತಿ ತಸ್ಮೈ"**— ಎಂದು ಉಪನಿಷತ್ತು ತಿಳಿಸುವಂತೆ ಭಗವಂತನಿಂದಲೇ ವ್ಯವಧಾನವಿಲ್ಲದೆ ಜನಿಸಿ, ಅವನ ಸನ್ನಿಧಾನದಲ್ಲಿಯೇ ಅಖಿಲ ವೇದ-ಗಳನ್ನೂ ಅಧಿಕರಿಸಿ, ವಾಚಾಂ ಅಗೋಚರವಾದ ಪ್ರಭಾವದಿಂದ ಕೂಡಿದವನಾಗಿದ್ದಾನೆ. ಅವನು ಚತುರ್ಮುಖನಾದುದರಿಂದ, ತನ್ನ ನಾಲ್ಕು ಮುಖಗಳಲ್ಲಿಯೂ ಇರುವ ನಾಲ್ಕು ನಾಲಿಗೆಗಳನ್ನೂ **'ಜಿಹ್ವೇ ಕೀರ್ತಯ ಕೇಶವಂ'**— ಎಂದು ಹೇಳುವಂತೆ ಭಗವಂತನನ್ನು ಸ್ತೋತ್ರ ಮಾಡುವ ಕೆಲಸವೊಂದರಲ್ಲಿಯೇ ನಿರತವಾಗುವಂತೆ ಮಾಡಿ, ಪರಮ ಭೋಗ್ಯವಾದ ನಾಲ್ಕು ವೇದಗಳಿಂದಲೂ ಭಗವಂತನನ್ನು ಸ್ತುತಿಸಿದನು. ಹಾಗೆಯೇ ನಮ್ಮ ಹಾಗೆ ಎರಡೇ ಕಣ್ಣುಗಳಿಲ್ಲದೆ, ತನ್ನ ಭಾಗ್ಯ ವಿಶೇಷದಿಂದ ತಾನು ಹೊಂದಿರುವ ಎಂಟು ಕಣ್ಣುಗಳಿಂದಲೂ, **'ಕೃಷ್ಣಂ ಲೋಕಯ ಲೋಚನದ್ವಯ'**—

ಎಂದು ಹೇಳುವಂತೆ, ಭಗವಂತನ ಒಂದೊಂದು ಅವಯುವವನ್ನೂ ಒಂದೊಂದು ಕಣ್ಣುಗಳಿಂದ ದರ್ಶನಮಾಡುತ್ತಾ, ಏಕಕಾಲದಲ್ಲಿ ಭಗವಂತನ ಎಲ್ಲ ಅಂಗಾಂಗಗಳನ್ನೂ ಕಂಡು ಅನುಭವಿಸಿ ಉಜ್ಜೀವಿತನಾದವನು. ಹೀಗೆ ಚತುರ್ಮುಖ ಬ್ರಹ್ಮನಿಂದ ಆರಾಧಿತನಾದ ಭಗವಂತನು **'ರುಕ್ಮಾಭಂ ಸ್ವಪ್ನಧೀಗಮ್ಯಮ್,' 'ಆಪ್ರಣಖಾತ್ ಸರ್ವ ಏವ ಸುವರ್ಣಃ,'**—ಎಂದು ಹೇಳುವಂತೆ ಸ್ವರ್ಣಕಾಂತಿಯಿಂದ ಕೂಡಿದವನಾಗಿ, ತಾನೇ ತ್ರಿಜಗದೇಕಕಾರಣ ಭೂತನೆಂದೂಪರಮಾರ್ಥನೆಂದೂನಿಶ್ಚಯಿಸಿ ಕೊಡುವಂತಹ ತನ್ನ ನಾಭಿಕಮಲವನ್ನು ನಮ್ಮ ಚಕ್ಷುರ್ವಿಷಯವನ್ನಾಗಿ ಮಾಡುವವನಾಗಿ, ಮನೋಹರವಾದ ಶ್ರೀರಂಗ ವಿಮಾನದಲ್ಲಿ ಶೇಷಪರ್ಯಂಕದಲ್ಲಿ ನಿದ್ರಿಸುತ್ತಿದ್ದಾನೆ. ಆ ರಂಗನಾಥನ ಚರಣಾರವಿಂದಗಳ ಪರಿಸರದಲ್ಲಿ ಪುಷ್ಪಗಳನ್ನು ಸಮರ್ಪಿಸಿ, ಶ್ರೀ ಮದ್ವೇದಾಂತ ದೇಶಿಕರು : **'ಪರಸ್ಪರ ಹಿತೈಷಿಣಾಂ ಪರಿಸರೇಷು ಮಾಂ ವರ್ತಯ'**— ಎಂದು ಅಭೀತಿಸ್ತವದಲ್ಲಿ ಪ್ರಾರ್ಥಿಸಿದಂತೆ, ಆ ಭಗವಂತನ ದಾಸ ವರ್ಗದವರೊಡನೆ ಕೂಡಿಬಾಳುವ ಕಾಲವು ಎಂದು ಬರುವುದೋ— ಎಂದು, ಆಳ್ವಾರವರು ಆ ಕಾಲವನ್ನು ನಿರೀಕ್ಷಿಸುತ್ತಿದ್ದಾರೆ. ॥೩॥

**ಮಾವಿನ್ನೈವಾಯ್ ಪಿಳಂದುಗಂದ ಮಾಲ್ಯೈವೇಲ್ಯೈ—**
**ವಣ್ಣನ್ನೈಯೆರ್ಕಣ್ಣನ್ನೈವರ್ ಕುನ್ರಮೇನ್ದಿ.**
**ಆವಿನ್ನೈಯುನ್ರುಯ್ಯಕ್ಕೊಂಡವಾಯರೇತ್ತೈ—**
**ಅಮರರ್ಹಳ್‌ತಂತಲ್ಯೈವನ್ನೈ ಯನ್ದಮಿಳ್‌ನಿನ್ಬಪ್ಪಾವಿನ್ನೈ,**
**ಅವ್ವಡಮೊಳಿಯ್ಯೈ ಪತ್ತತ್ತಾರ್‌ಕಳ್—**
**ಪಯಿಲರಂಗತ್ತರವಣ್ಯೈಯಿಲ್ ಪಳ್ಳಿಕೊಳ್ಳುಮ್,**
**ಕೋವಿನ್ನೈನಾವುರಮುಳುತ್ತಿ ಯೆನ್ರ್ಕೈಗಳ್—**
**ಕೊಯ್‌ಮಲರ್‌ತೂಯೆನ್ರು ಕೊಲೋ ಕೂಪ್ಪುಂ ನಾಳೇ** ॥೪॥

**ಮಾವಿನ್ನೈ**=ಅಶ್ವರೂಪವನ್ನು ಹೊಂದಿ ಕೊಲ್ಲಲು ಬಂದ 'ಕೇಶಿ' ಎಂಬ ಅಸುರನನ್ನು, **ವಾಯ್ ಪಿಳನ್ದು**=ಧ್ವಂಸಮಾಡಿ, **ಉಕನ್ದ**=ಸಂತುಷ್ಟನಾದ, **ಮಾಲ್ಯೈ**=ಸರ್ವಾಧಿಕನಾದ, **ವೇಲ್ಯೈವಣ್ಣನ್ನೈ**=ಸಮುದ್ರಸನ್ನಿಭವರ್ಣದಿಂದ ಕಂಗೊಳಿಸುವ, **ಎರ್ಕಣ್ಣನ್ನೈ**=ನನಗೆ ಅನುಭಾವ್ಯನಾದ ಕೃಷ್ಣನಾಗಿರುವ, **ವರ್ಕುನ್ರಮೇಂದಿ**=ಬಲಿಷ್ಠವಾದ ಗೋವರ್ಧನಗಿರಿಯನ್ನು ಎತ್ತಿಹಿಡಿದು, **ಅನ್ದು**=ಅಂದು, **ಆವಿನ್ನೈ**=ಪಶುಗಳೆಲ್ಲವನ್ನೂ, **ಉಯ್ಯಕ್ಕೊಂಡು**=ಸಂರಕ್ಷಿಸಿದ, **ಆಯರೇತ್ತೈ**=ಗೋಪಾಲರ ಒಡೆಯನಾದ, **ಅಮರ್ಹಳ್ ತಂ ತಲ್ಯೈವನ್ನೈ**=ದೇವಾಧಿ ದೇವನಾದ, **ಅನ್ ತಮಿಳಿನ್ ಇನ್ಬಪ್ಪಾವಿನ್ನೈ**=ಪರಮ ಭೋಗ್ಯವಾದ ದ್ರಾವಿಡವೇದ ಪ್ರತಿಪಾದ್ಯ–

ನಾದ, **ಅನ್ನಡನೊಳಿಯ್ಯೆ**=ಹಾಗೆಯೇ ಅದಕ್ಕೆ ಸರಿಸಮಾನವಾದ ಸಂಸ್ಕೃತ ವೇದ ಪ್ರತಿಪಾದ್ಯನೂ ಆಗಿರುವ, **ಪಟ್ರು ಅತ್ತಾರ್ಹಳ್ ಪಯಿಲ್ ಅರಂಗತ್ತು**= ವಿರಕ್ತಾಗ್ರೇಸರರು ವಾಸಮಾಡುವ ಶ್ರೀರಂಗ ಕ್ಷೇತ್ರದಲ್ಲಿ, **ಅರವು ಅಣ್ಣೆಯಿಲ್ ಪಳ್ಳಿಕೊಳ್ಳುವನ್**=ಶೇಷ ಭೋಗಪರ್ಯಂಕದಲ್ಲಿ ನಿದ್ರಿಸುವ, **ಕೋವಿನ್ನೈ**=ಮಹಾ ಪ್ರಭುವನ್ನು, **ನಾವುರವಳುತ್ತಿ**=ನಾಲಿಗೆಯುತೃಪ್ತವಾಗುವಂತೆ ಸ್ತುತಿಸಿ, **ಎನ್ರ್ತ ಕೈಕಳ್**=ನನ್ನ ಕೈಗಳು, **ಕೊಯ್‌ಮಲರ್ ತೂಯ್**=ಆಯಾಯಾ ಕಾಲಗಳಲ್ಲಿ ಕೊಯ್ದು ಪುಷ್ಪಗಳನ್ನು ಸಮರ್ಪಿಸಿ, **ಕೂಪ್ಪುಂ ನಾಳ್**=ಕೈ ಮುಗಿದು ಅಂಜಲಿ ಮಾಡುವ ದಿನವು, **ಎನ್ರು ಕೊಲ್**=ಯಾವಾಗ ಬರುತ್ತದೆಯೋ ? ॥೪॥

ಭಗವಂತನ ನಾನಾ ವಿಧವಾದ ಕಲ್ಯಾಣಗುಣ ಚೇಷ್ಟಿತಗಳನ್ನು ಬಾಯ್ತುಂಬ ಹಾಡಿ ಭಗವಂತನನ್ನು ಸ್ತುತಿಸಿ, ನಾನಾ ರೀತಿಯಾದ ಪುಷ್ಪಗಳನ್ನು ಅವನ ಅಡಿ-ದಾವರೆಗಳಲ್ಲಿ ಸಮರ್ಪಿಸಿ, **'ಅಂಜಲಿಃ ಪರಮಾ ಮುದ್ರಾ ಕ್ಷಿಪ್ರಂ ದೇವ-ಪ್ರಸಾದಿನೀ'**—ಎಂದು ಹೇಳುವಂತೆ, ಅಕಾರವಾಚ್ಯನಾದ ಭಗವಂತನ ಮನಸ್ಸನ್ನೂ ಕರಗುವಂತೆ ಮಾಡುವ ಅಂಜಲಿ ಮುದ್ರೆ (ಕೈಮುಗಿಯುವಿಕೆ) ಯನ್ನು ಮಾಡಿ **'ಬದ್ಧೇನಾಂಜಲಿನಾ ನತೇನ ಶಿರಸಾ'** ಎಂದಿರುವ ದಿನವು ಎಂದು ಪ್ರಾಪ್ತವಾಗು-ವುದೋ ಎಂದು ಹಂಬಲಿಸುತ್ತಾರೆ.

ಭಗವಂತನು ಮತ್ಸ್ಯಾದಿ ಅನೇಕ ಅವತಾರಗಳನ್ನು ಮಾಡಿದ್ದರೂ, ಈ ಆಳ್ವಾ-ರವರು ವಿಶೇಷವಾಗಿ ರಾಮಾವತಾರದಲ್ಲಿ ಪ್ರಾವಣ್ಯಾತಿಶಯವನ್ನು ಹೊಂದಿದ್ದವ-ರೆಂದೂ ಪ್ರಸಿದ್ಧರಾಗಿದ್ದರೂ, ಪ್ರಾರಂಭದಲ್ಲಿಯೇ **'ಯಥಾರ್ಹಂ ಕೇಶವೇ ವೃತ್ತಿಮ-ವಶಾಃ ಪ್ರತಿಪೇದಿರೇ'**— ಎಂದು ಹೇಳುವಂತೆ, ಬಲವಂತವಾಗಿ ಹಿಡಿದೆಳೆದು ತನ್ನಲ್ಲಿ ಲೀನವಾಗುವಂತೆ ಮಾಡುವ ಕೃಷ್ಣಾವತಾರ ಚೇಷ್ಟಿತಾನು ಭವದಲ್ಲಿಯೇ ಪರವಶ-ರಾಗಿದ್ದಾರೆ. ಹಿಂದೆ ಕೃಷ್ಣನಿಂದ ತನಗೆ ವಿನಾಶವುಂಟಾಗುವುದೆಂದು ತಿಳಿದ ಕಂಸನು ಆ ಕೃಷ್ಣನನ್ನು ನಾಶಪಡಿಸಲು ಅನೇಕ ದುಷ್ಟ ಅಸುರರನ್ನು ಗೋಕುಲಕ್ಕೆ ಕಳುಹಿ-ಸುವ ಸಮಯದಲ್ಲಿ 'ಕೇಶಿ' ಎಂಬ ಅಸುರನನ್ನು ಕುದುರೆಯ ರೂಪದಿಂದ ಹಿಂಸಿಸಲು ಆಜ್ಞಾಪಿಸಿದ. ಬಳಿಕ ಆ ಅಸುರನು ಅಂತೆಯೇ ಅಶ್ವರೂಪಿಯಾಗಿ **'ಜಗದಸ್ತಮಿತಂ ಹನ್ತ'**—ಎಂದೆಲ್ಲರೂ ಹಾಹಾಕಾರ ಮಾಡುವಂತೆ ಲೋಕಗಳೆಲ್ಲವನ್ನೂ ಕಬಳಿಸಲು ಬಂದಿರುವಂತೆ ಭಯಂಕರವಾಗಿ ಬಾಯ್ತೆರದು ಗೋಕುಲವನ್ನು ಪ್ರವೇಶಿಸಿದನು. ಆಗ ಶ್ರೀಕೃಷ್ಣನು ತನ್ನ ಕೈಗಳನ್ನು ವೃದ್ಧಿಪಡಿಸಿಕೊಂಡು ಆ ಕುದುರೆಯ ಬಾಯಲ್ಲಿಟ್ಟು, ಅದನ್ನು ಅನಾಯಾಸವಾಗಿ ಎರಡು ತುಂಡಾಗಿ ಸೀಳಿಹಾಕಿ, ಆಶ್ರಿತ ವಿರೋಧಿಯನ್ನು ನಾಶಪಡಿಸಿದನೆಂದು– ಸಂತುಷ್ಟನಾದನು. ಇದು ಅವನಿಗೆ **ಆಶ್ರಿತ-**

ರಲ್ಲಿರುವಂತಹ ವ್ಯಾಮೋಹಾತಿಶಯುವನ್ನು ತೋರಿಸುತ್ತಿ. ಈ ರೀತಿಯಾದ ಚೇಷ್ಟಿತ-ವೊಂದನ್ನು ಬಾಯಾರ ಹೇಳಿ ಸ್ತುತಿಸಬೇಕಲ್ಲವೆ?

ಸಮುದ್ರದಂತೆ ನೀಲವರ್ಣನಾದ ಶ್ರೀಕೃಷ್ಣನು ಪರಮಸುಲುಭನು. ಪರತ್ವ-ವನ್ನು ಹೊಂದಿರುವ ಆವನ ಸೌಲಭ್ಯ ಸೌಶೀಲ್ಯಗಳನ್ನು ವಿಶೇಷವಾಗಿ ಸ್ತುತಿಸ-ಬೇಕಾದರೂ ಮಧ್ಯೆ ಮಧ್ಯೆ ಅವನ ಪರತ್ವವನ್ನೂ ಸ್ತುತಿಸಬೇಕು. ಕೃಷ್ಣಾವತರದಲ್ಲಿ ಅತಿ ಬಾಲ್ಯದಲ್ಲಿಯೇ ಮಾಡಿದ ಅತಿ ಮಾನುಷ ಚೇಷ್ಟೆಗಳಲ್ಲಿ ಗೋವರ್ಧನೋದ್ಧರಣವು ಅತಿ ಮಾತ್ರ ಪರತ್ವಪ್ರಕಾಶಕವಾಗಿರುವುದು. ಹಿಂದೆ ಗೋಕುಲದಲ್ಲಿ ಗೋಪಾಲರೆಲ್ಲರೂ, ಕಾಲಕಾಲದಲ್ಲಿ ಮಳೆ ಬರಲೆಂದು ವರ್ಷಕೊಮ್ಮೆ ದೇವೇಂದ್ರ ಪೂಜೆಯನ್ನು ಮಾಡುತ್ತಿದ್ದರು. ಅದನ್ನು ಕಂಡ ಕೃಷ್ಣನು, ತಾನು ಅವತರಿಸಿ ಅಲ್ಲಿ ಬೆಳೆಯುತ್ತಿರಲು, ದೇವತಾಂತರಭಜನವು ಅಲ್ಲಿ ನಡೆಯುತ್ತಿರಲು, ಅದನ್ನು ಕಂಡು ತಾನು ಸಹಿಸಿಕೊಂಡಿರುವುದು ಉಚಿತವಲ್ಲವೆಂದು, ಆ ದೇವೇಂದ್ರ ಪೂಜಾ ಸಮಾರಂಭವನ್ನು ನಿಲ್ಲಿಸಬೇಕೆಂದು **"ಯೋನ್ಯಾಂ ಸ್ವಾಂ ದೇವತಾಮತಿಯಜತೇ, ಪ್ರಸ್ವಾಯೈ ದೇವತಾಯೈ ಚ್ಯವತೇ ನ ಪರಾಂ ಪಾಪ್ನೋತಿ ಪಾಪೀಯಾನ್ ಭವತಿ"**—'ಯಾರು ತನ್ನ ದೇವತೆಯನ್ನು ಬಿಟ್ಟು ಇತರ ದೇವತೆಯನ್ನು ಪೂಜಿಸುತ್ತಾನೋ ಅಂತಹವನನ್ನು ತನ್ನ ದೇವತೆಯೂ ತ್ಯಾಗ ಮಾಡುತ್ತದೆ ಮತ್ತು ಇತರ ದೇವತೆಗಳು ಕೈಹಿಡಿಯುವುದಿಲ್ಲವಾಗಿ ಅವನು ಪಾಪಿಯಾಗಿ ನಾಶವಾಗುತ್ತಾನೆ'—ಎಂಬ ಶ್ರುತ್ಯರ್ಥವನ್ನು ಇತರ ಗೊಲ್ಲರಿಗೆ ಉಪದೇಶಿಸಿ, ನಮಗೂ ನಮ್ಮ ಗೋವುಗಳಿಗೂ ಹುಲ್ಲು-ನೀರುಗಳನ್ನು ಕೊಟ್ಟು ಸಲಹುತ್ತಿರುವ ಪ್ರತ್ಯಕ್ಷ ದೇವತೆಯಾದ ಈ ಗೋವರ್ಧನಗಿರಿಯನ್ನು ಬಿಟ್ಟು ಪರೋಕ್ಷದೇವತೆ-ಯನ್ನು ಆರಾಧಿಸುವುದು ಸರಿಯಲ್ಲವೆಂದು **"ಅತಿಯುಜೀತ ನಿಜಾಂಯದಿ ದೇವತಾಂ ಉಭಯುತಶ್ಚ್ಯವತೇ ಜುಷತೇಪ್ಯಘಂ। ಕ್ಷಿತಿಭೃತೈವ ನದೈವತಕಾವಯಂ ವನಮಿ-ಹಾನವತಾಕಿಮಹಿದ್ರುಹಾ ॥"** (ಯಾದವಾಭ್ಯುದಯ)—ಎಂದು ಹೇಳಿ ಅನೇಕ ಶತ ಸಹಸ್ರ ಶಕಟಪೂರಿತವಾದ ಅನ್ನ ಸೂಪದಧಿಘೃತಾದಿಗಳೆಲ್ಲವನ್ನೂ ಆ ಗೋವರ್ಧನ ಗಿರಿಗೆಂದು ಇಡಿಸಿ, ಕೊನೆಯಲ್ಲಿ **"ಅಹಂ ಗೋವರ್ಧನೋಸ್ಮಿ"** ಎಂದು ಹೇಳಿ ತಾನೇ ಅದೆಲ್ಲವನ್ನೂ ಕ್ಷಣ ಮಾತ್ರದಲ್ಲಿ ಅನಾಯಾಸವಾಗಿ ತಿಂದುಹಾಕಿದನು. ಇದನ್ನು ನೋಡಿ ಹಸಿವಿನಿಂದ ಕುಪಿತನಾದ ಇಂದ್ರನು ಪುಷ್ಕಲಾವರ್ತಗಳೆಂಬ ಮೇಘಗಳಿಗೆ ಆಜ್ಞೆಮಾಡಿ, ಆ ಪ್ರದೇಶದಲ್ಲಿ ಏಳು ದಿನಗಳ ಕಾಲ ಅವಿಚ್ಛಿನ್ನವಾಗಿ ಮಳೆ ಸುರಿಯು-ವಂತೆ ಮಾಡಿದನು. ಆಗ ತಾನು ಮೊದಲು ರಕ್ಷಕವೆಂದು ಹೇಳಿದಂತಹ ಗೋವರ್ಧನ ಗಿರಿಯ ಸಹಾಯದಿಂದಲೇ ಎಲ್ಲರನ್ನೂ ರಕ್ಷಿಸಬೇಕೆಂದು ತೀರ್ಮಾನಿಸಿ, ಆ ಗೋವರ್ಧನ ಗಿರಿಯನ್ನು ಛತ್ರಿಯಂತೆ ಮೇಲಕ್ಕೆತ್ತಿಹಿಡಿದು ಎಲ್ಲರನ್ನೂ ರಕ್ಷಿಸಿದನು. ಆ ರೀತಿ ತನ್ನ ಪರತ್ವವನ್ನು ವ್ಯಕ್ತಪಡಿಸಿ, ತನ್ನನ್ನು ಆಶ್ರಯಿಸಿದವರನ್ನು ಕೈಬಿಡುವುದಿಲ್ಲವೆಂದು

ತೋರಿಸಿಕೊಟ್ಟು ಎಲ್ಲರನ್ನೂ ರಕ್ಷಿಸಿದ ಅವನ ಕೈಗಳನ್ನು "**ಕ್ಷೋಣೀಛತ್ರಂ ಪುನರಬಿಭೃತ್ಸ ಸಪ್ತರಾತ್ರಂ ಅಮ್ಲಾನಾ ವರದ ತಥಾಪಿ ಪಾಣಯಸ್ತೇ**" ಎಂದು ಬಾಯ್ತುಂಬ ಹಾಡಿ ಸ್ತೋತ್ರ ಮಾಡಬೇಕು.

ಈ ರೀತಿ ಗೋವರ್ಧನೋದ್ಧರಣ ಮಾಡಿದ ಸಮಯದಲ್ಲಿ, ಅದನ್ನು ಕಂಡವರೆಲ್ಲರೂ 'ನೀನು ದೇವತೆಯೋ ದಾನವನೋ' —ಎಂದು ಆಶ್ಚರ್ಯದಿಂದ ಪ್ರಶ್ನಿಸಲು, '**ಅಹಂ ವೋ ಬಾನ್ಧವೋ ಜಾತಃ ನೈವಶಂಕ್ಯಮಿತೋನ್ಯಥಾ ॥**' — ಎಂದು ತಾನೂ ಒಬ್ಬ ಗೊಲ್ಲನೆಂದೂ ಈ ವಿಷಯದಲ್ಲಿ ಶಂಕಿಸಬಾರದೆಂದೂ ಹೇಳಿದನು. ಇದರಿಂದ ಪ್ರಕಾಶಿಸುವ ಅವನ ಸೌಶೀಲ್ಯ ಗುಣವನ್ನು ಸ್ತೋತ್ರ ಮಾಡಬೇಕು. ಹಾಗೆಯೇ ಆ ಸಮದಲ್ಲಿಯೇ ದೇವತೆಗಳೆಲ್ಲರೂ ಮಂತ್ರ ಪುಷ್ಪಾದ್ಯುಪಕರಣಗಳಿಂದ ಅವನನ್ನು ಪೂಜಿಸಿದುದರಿಂದ, ಅವನು ಹೇಗೆ ಗೋಪ ನಾಯಕನೋ ಹಾಗೆಯೇ ದೇವಾಧಿದೇವನೂ ಆಗಿದ್ದಾನೆ ಎಂದು ತಿಳಿದು ಬರುತ್ತದೆ. ಇದರಿಂದ ಅವನ ಪರತ್ವವು ಪ್ರಕಾಶಿತವಾಗುತ್ತದೆ.

"**ವೇದೈಶ್ಚ ಸರ್ವೈರಹಮೇವ ವೇದ್ಯಃ**", "**ಸರ್ವೇ ವೇದಾ ಯತ್ಪದಮಾಮನಂತಿ**", "**ಸರ್ವೇ ವೇದಾ ಯತ್ರೈಕಂ ಭವಂತಿ**"— ಎಂದು ಹೇಳುವಂತೆ ಅಪೌರುಷೇಯವಾದ ಸರ್ವ ಸಂಸ್ಕೃತ ವೇದಪ್ರತಿಪಾದ್ಯನಾದವನೂ, ಆಳ್ವಾರುಗಳಿಂದ ರಚಿಸಲ್ಪಟ್ಟ ದಿವ್ಯ ಪ್ರಬಂಧಗಳೆಂದು ಕರೆಯಲಾಗುವ ಸರ್ವ ದ್ರಾವಿಡ ವೇದ ಪ್ರತಿಪಾದ್ಯನೂ ಆಗಿದ್ದಾನೆ. ಹೀಗೆ ಉಭಯ ವೇದಗಳಿಂದಲೂ ಆ ಭಗವಂತನನ್ನು ಸ್ತುತಿಸುತ್ತಾ "**ಪರಮಾತ್ಮನಿ ಯೋ ರಕ್ತಃ ವಿರಕ್ತಃ ಅಪರಮಾತ್ಮನಿ**"— ಎಂದು ಹೇಳುವಂತೆ ಇತರ ವಿಷಯ ಪ್ರಾವಣ್ಯವಿಲ್ಲದೆ, ಸದಾ ಕಾಲದಲ್ಲಿ ಭಗವತ್ಕೈಂಕರ್ಯೈಕ ನಿರತರಾಗಿರುವ ಪರಮೈಕಾಂತಿಗಳಾದ ಭಗವದ್ಭಕ್ತರು ವಾಸಿಸುವ ಆ ಶ್ರೀರಂಗ ಕ್ಷೇತ್ರದಲ್ಲಿ ಭೋಗಿಭೋಗಶಯನೀಯಶಾಯಿಯಾಗಿರುವ ಆ ರಂಗನಾಥನ ಅಡಿದಾವರೆಗಳಲ್ಲಿ ಆಗತಾ ಕೊಯ್ದು ಪುಷ್ಪಗಳನ್ನು ಸಮರ್ಪಿಸಿ, ಅವನ ಚರಣಗಳಿಗೆ ಅಂಜಲಿಯನ್ನು ಸಮರ್ಪಿಸಬೇಕು. "**ತ್ವದಂಘ್ರಿಮುದ್ದಿಶ್ಯ ಕದಾಪಿ ಕೇನಚಿದ್ಯಥಾತಥಾವಾಪಿ ಸಕೃತ್ಕೃತೋಂಜಲಿಃ । ತದೈವ ಮುಷ್ಣಾತ್ಯಶುಭಾನ್ಯಶೇಷತಃ ಶುಭಾನಿ ಪುಷ್ಣಾತಿ ನ ಜಾತುಹೀಯತೇ ॥**"—ಎಂದು ಆಳವಂದಾರ್‌ರವರು ಸ್ತೋತ್ರ ರತ್ನದಲ್ಲಿ ಹೇಳಿರುವಂತೆ, ಆ ಭಗವಂತನ ಅಡಿಗಳನ್ನುದ್ದೇಶಿಸಿ, ಒಂದು ಸಲ ಮಾಡಿದ ಅಂಜಲಿಯೂ ನಮಗೆ ಸಂಭವಿಸಿರುವ ಸರ್ವ ವಿಧವಾದ ಅಮಂಗಲಗಳನ್ನೂ ತೊಲಗಿಸಿ ಮಂಗಳವನ್ನುಂಟು ಮಾಡುವುದರಿಂದ, ಮೇಲೆ ಹೇಳಿದಂತೆ ಆ ಭಗವಂತನನ್ನು ನಾನಾ ರೀತಿಯಲ್ಲಿ ಸ್ತುತಿಸಿ, ಅವನ ಚರಣಗಳನ್ನು ಪುಷ್ಪಗಳಿಂದ ಅರ್ಚಿಸಿ ಅವನ ಅಡಿ-

ದಾವರೆಗೆ ಅಂಜಲಿಯನ್ನು ಸಮರ್ಪಿಸುವ ಕಾಲವು ತನಗೆ ಎಂದು ಸಂಭವಿಸುವುದೋ— ಎಂದು ಆಳ್ವಾರವರು ಆ ಕಾಲವನ್ನು ನಿರೀಕ್ಷಿಸುತ್ತಿದ್ದಾರೆ. ॥೪॥

**ಇಣೈಯಿಲ್ಲಾ ವಿನ್ನಿಶೈಯಿಯಾಳ್‌ಕೆಳುವಿ ಯಿನ್ಬತ್ತುಂಬುರುವು ನಾರದನುಂ ಇರೈಂಜಿಯೇತ್ತ, ತುಣೈಯಿಲ್ಲಾ ತೊನ್ಮರೈನೂಲ್ ತೋತ್ತಿರತ್ತಾಲ್ ತೊನ್ಮಲರ್ಕ್ಕಣಯನ್ ವಣಂಗಿಯೋವಾದೇತ್ತ. ಮಣಿಮಾಡ ಮಾಳಿಗೈಗಳ್ ಮಲ್‌ಕುಶೆಲ್ವಮದಿಳರ ಙ್ಗತ್ತರವಣೈಯಿಲ್ಪಳ್ಳಿಕೊಳ್ಳುಮ್.ಮಣಿವಣ್ಣ ನಮ್ಮಾನೈ ಕಂಡು ಕೊಂಡೆನ್ ಮಲರ್ಚ್ಚೆನ್ನಿ ಯೆನ್ರುಕೊಲೋ ವಣಂಗುಂ ನಾಳೇ ॥೫॥**

**ಇನ್ಬತ್ತುಮ್ಬುರುವುಂ ನಾರದನುಂ**=ಆನಂದವೇ ಮೂರ್ತಿವೆತ್ತಾಗಿ ನಿಂತಿರುವ ತುಂಬುರ ನಾರದರು, **ಇಣೈ ಇಲ್ಲಾ**=ನಿರುಪಮವಾದ, **ಇಶೈ**=ಪರಮ ಭೋಗ್ಯಸ್ವರದಿಂದ ಕೂಡಿರುವ, **ಯಾಳ್**=ವೀಣೆಯನ್ನು, **ಕೆಳುವಿ**=ನುಡಿಸಿ ಧ್ವನಿಗೈದು, **ಇರೈಂಜಿ ಏತ್ತ**=ಬಗ್ಗಿ ಸ್ತುತಿಸಲು, **ತೊಲ್ ಮಲರ್ ಕಣ್ ಅಯನ್**= ಅನಾದಿಯಾದ ತಾವರೆ ಪುಷ್ಪದಲ್ಲಿ ಜನಿಸಿದ ಬ್ರಹ್ಮದೇವನು, **ವಣಂಗಿ**=ಬಗ್ಗಿ (ನಮಸ್ಕರಿಸಿ), **ತುಣೈ ಇಲ್ಲಾ**=ಅಸದೃಶವಾದ, **ತೊಲ್ ಮರೈನೂಲ್**= ಅನಾದಿ ವೇದಶಾಸ್ತ್ರಗಳೆಂಬ,**ತೋತ್ತಿರತ್ತಾಲ್**=ಸ್ತೋತ್ರಗಳಿಂದ,**ಓವಾದುಏತ್ತ**= ಅನವರತ 'ಸ್ತುತಿ' ಸುತ್ತಿರಲು, **ಮಣಿ ಮಾಡಂಮಾಳಿಕೈಕಳ್ ಮಲ್‌ಕು**=ರತ್ನಮಯವಾದ ಉಪ್ಪರಿಗೆಗಳಿಂದ ತುಂಬಿರುವ, **ಶೆಲ್ವಂ ಮತಿಳ್**=ಸಂಪತ್ಸಮೃದ್ಧವಾದ ಪ್ರಾಕಾರಗಳಿಂದ ಕೂಡಿರುವ, **ಅರಂಗತ್ತು**=ಶ್ರೀರಂಗ ಕ್ಷೇತ್ರದಲ್ಲಿ, **ಅರವು ಅಣೈಯಿಲ್ ಪಳ್ಳಿಕೊಳ್ಳುಮ್**=ಶೇಷತಲ್ಪದಲ್ಲಿ ನಿದ್ರಿಸುವ, **ಮಣಿವಣ್ಣನ್ ಅಮ್ಮಾನೈ**= ನೀಲಮಣಿ ಪ್ರಭನಾದ ನನ್ನ ಸ್ವಾಮಿಯನ್ನು, **ಕಂಡುಕೊಂಡು**= ದರ್ಶನಮಾಡಿ, **ಎನ್ಮಲರ್ ಶೆನ್ನಿವಣಂಗುಂ ನಾಳ್**=ನನ್ನ ಪುಷ್ಪಾಲಂಕೃತವಾದ ಶಿರಸ್ಸು ನಮಿಸುವ ದಿನವು, **ಎನ್ರುಕೊಲೋ**=ಎಂದು ಬರುತ್ತದೆಯೋ ?

ಈ ಪಾಶುರದಲ್ಲಿ ತುಂಬುರು ನಾರದರೊಡನೆಯೂ ಚತುರ್ಮುಖನಾದ ಬ್ರಹ್ಮದೇವನೊಡನೆಯೂ ತಾವೂ ಒಬ್ಬರಾಗಿ ಭಗವಂತನನ್ನು ಸೇವಿಸುವಂತಹ ದಿನವು ಎಂದು —ಬರುವುದೋ ಎಂದು ಹಂಬಲಿಸುತ್ತಾರೆ.

**"ಮುನ್ನಲ್‌ಯಾಳ್ ಪಯಿಲ್‌ನೂಲ್ ನರಂಬಿನ್ ಮುದಿರ್‌ಶುವೈಯೇ"**— ಎಂದು ಹೇಳುವಂತೆ ವೀಣಾಧ್ವನಿಯೇ ಮೂರ್ತಿವೆತ್ತಂತಿರುವ ಭಗವಂತನನ್ನು ವೀಣಾಗಾನದಿಂದಲೇ ಸಂತುಷ್ಟನನ್ನಾಗಿ ಮಾಡಲು ಪ್ರಾರ್ಥಿಸಿ, ತುಂಬುರು ನಾರದರು ಶ್ರೀರಂಗ ಕ್ಷೇತ್ರದಲ್ಲಿ ವೀಣಾಗಾನ ಮಾಡುತ್ತಾ ಸೇವೆಸಲ್ಲಿಸುತ್ತಿರುವರೆಂದು ಪುರಾಣ

ಪ್ರಸಿದ್ಧವಾದ ಐತಿಹ್ಯ. ಪ್ರಪಂಚದಲ್ಲಿ ಅನೇಕರು ವೀಣಾಗಾನಮಾಡುವವರಿದ್ದರೂ, ಅಸದೃಶವಾದ ಪರಮ ಭೋಗ್ಯವಾದ ಸ್ವರಮಾಧುರ್ಯ ಇವರ ವೀಣೆಗಳಿಗೆ ಮಾತ್ರವೆ. ಹಾಗೆಯೇ ಇವರಗಾನ ಪ್ರಯೋಜನಾಂತರಾಪೇಕ್ಷೆಯಿಲ್ಲದೆ ಭಗವಂತನನ್ನು ಸಂತೋಷ-ಗೊಳಿಸುವುದೊಂದೇ ಉದ್ದೇಶವಾಗಿದ್ದು, ಆದರಿಂದ ಇವರೂ ಸರ್ವದಾ ತನ್ನಿಬಂಧನವಾದ ಆನಂದವನ್ನು ಹೊಂದಿದವರಾಗಿದ್ದಾರೆ. ಹೀಗೆ ಒಂದು ಕಡೆ ಇವರು ನಮಿಸಿ ವೀಣಾ-ಗಾನ ಮಾಡುತ್ತಿದ್ದರೆ, ಮತ್ತೊಂದು ಕಡೆ ಚತುರ್ಮುಖ ಬ್ರಹ್ಮದೇವನು ಚತುರ್ವೇದ ಪಾರಾಯಣ ಮಾಡುತ್ತ ಭಗವಂತನನ್ನು ಸ್ತುತಿಸುತ್ತಿದ್ದಾನೆ. ತನಗೆ ಯಾರೂ ಅಧಿಕರಾಗಲೀ, ಸಮರಾಗಲೀ ಇಲ್ಲದ ಭಗವಂತನನ್ನು ಪರಿಪೂರ್ಣವಾಗಿ ಸ್ತುತಿಸಲು ನಿಸ್ಸಮಾಭ್ಯಧಿಕವಾದ ವೇದವೊಂದೇ ಸಮರ್ಥವಾದುದಲ್ಲವೆ ? **"ವಾಚಾ ವಿರೂಪ ನಿತ್ಯಯಾ"** ಎಂದೂ, **"ಅನಾದಿ ನಿಧನಾ ಹ್ಯೇಷಾ ವಾಗುತ್ಸೃಷ್ಟಾ ಸ್ವಯಂಭುವಾ"** —ಎಂದೂ ಹೇಳುವಂತೆ ಈ ವೇದಗಳು ನಿತ್ಯ ಸಿದ್ಧವಾದುದು. **"ವೇದಾಕ್ಷರಾಣಿ ಯಾವಂತಿ ಪಠಿತಾನಿ ದ್ವಿಜಾತಿಭಿಃ। ತಾವಂತಿ ಹರಿನಾಮಾನಿ ಕೀರ್ತಿತಾನಿ ನ ಸಂಶಯಃ ॥"**—ಎಂದು ಹೇಳುವಂತೆ ವೇದಗಳ ಒಂದೊಂದು ಅಕ್ಷರವೂ ಭಗವನ್ನಾಮವನ್ನು ಸೂಚಿಸುವುದಾಗಿರುತ್ತವೆ. ಆದರೆ ಈ ವಿಷಯಗಳು ಇತರರಿಗೆ ಸ್ಪಷ್ಟವಾಗಿ ತಿಳಿಯದಂತೆ ಮರೆಮಾಚುವುದರಿಂದ ಈ ವೇದಗಳನ್ನು ತಮಿಳಿನಲ್ಲಿ "ಮರೈ" ಎಂದೇ ಕರೆಯುತ್ತಾರೆ. ಈ ವೇದಗಳು **"ಇದಂ ಕುರು, ಇದಂ ಮಾ ಕಾರ್ಷೀಃ"** ಎಂದು ವಿಧಿ ನಿಷೇಧ ರೂಪವಾಗಿ ಶಾಸನ ಮಾಡುವುದರಿಂದ **'ವೇದಾಚ್ಛಾಸ್ತ್ರಂ ಪರಂ ನಾಸ್ತಿ'** —ಎಂದು ಹೇಳುವಂತೆ ಪರಮ ಶಾಸ್ತ್ರವಾಗಿದೆ. ಕ್ಷುತ್ಪಿಪಾಸಾ ರಹಿತನಾಗಿರುವುದರಿಂದ ಆ ಬ್ರಹ್ಮದೇವನು ನಿರಂತರವಾಗಿ ಈ ವೇದ ಪಾರಾಯಣವನ್ನು ಮಾಡುತ್ತಿದ್ದಾನೆ. ಹೀಗೆ ರತ್ನಮಯವಾದ ಉಪ್ಪರಿಗೆಗಳಿಂದ ತುಂಬಿ ಸಂಪದ್ಭರಿತವಾದ ಪ್ರಾಕಾರಗಳಿಂದ ಕೂಡಿದ ಶ್ರೀರಂಗ ಕ್ಷೇತ್ರದಲ್ಲಿ ಶೇಷ ತಲ್ಪದಲ್ಲಿ ಪವಡಿಸಿರುವ ಆ ರಂಗನಾಥನು ತುಂಬುರು ನಾರದರ ವೀಣಾಗಾನವನ್ನೂ, ಬ್ರಹ್ಮದೇವನ ವೇದ ಪಾರಾಯಣವನ್ನೂ ಆಲಿಸುತ್ತಾ ನೀಲಮಣಿ ವರ್ಣದಿಂದ ಕಂಗೊಳಿಸುತ್ತಿದ್ದಾನೆ. ಶಿರಸ್ಸನ್ನು ಪಡೆದುದಕ್ಕೆ ಅಂತಹ ಭಗವಂತನನ್ನು ನಮಿಸುವುದೊಂದೇ ಪ್ರಯೋಜನವಲ್ಲವೇ ? ಆದುದರಿಂದ ಆ ರೀತಿ ಇರುವ ಭಗವಂತನನ್ನು ನಮಿಸುವ ದಿನವು ಎಂದು ಬರುವುದೊ ?—ಎಂದು ಆಳ್ವಾರರು ಹಂಬಲಿಸುತ್ತಾರೆ. ॥೫॥

ಅಳಿಮಲರ್ಮೇಲ್ ಅಯನರನಿಂದಿರನೋಡೇನ್ನೈ
ಅಮರರ್‌ಕಳ್ ತಮ್ ಕುಳುವುಮರಂ ಬೈಯರುಂ
ಮಟ್ರುಂ ತೆಳಿಮದಿಶೇರ್ ಮುನಿವರ್ ತಮ್ ಕುಳುವು ಮುನ್ದಿ
ತಿಶೈತಿಶೈಯಿಲ್ ಮಲರ್ ತೂವಿಚ್ಚೆನ್ರುಶೇರುಮ್ ॥
ಕಳಿಮಲರ್‌ಶೇರ್ ಪೊಳಿಲರಂಗತ್ತುರಗಮೇರಿ
ಕಣ್ವಳರುಮ್ ಕಡಲ್‌ವಣ್ಣರ್ ಕಮಲಕ್ಕಣ್ಣುಮ್ ।
ಒಳಿಮದಿಶೇರ್ ತಿರುಮುಗಮುಮ್ ಕಂಡುಕೊಂಡು
ಎನ್ನುಳ್ಳಮಿಕವೆನ್ರುಕೊಲೋ ವುರುಕುನಾಳೇ ॥೬॥

**ಅಳಿಮಲರ್‌ಮೇಲ್ ಅಯನ್**= ದುಂಬಿಗಳಿಂದ ತುಂಬಿದ ಕಮಲಪುಷ್ಪದಲ್ಲಿ ಅವತರಿಸಿದ ಬ್ರಹ್ಮದೇವನು, **ಅರನ್**=ರುದ್ರನು, **ಇಂದರನೋಡು** = ದೇವೇಂದ್ರ- ನೊಡನೆ, **ಏನ್ನೈ ಅಮರರ್ ತಮ್ ಕುಳುವುಮ್**=ಮತ್ತುಳಿದ ದೇವತಾವೃಂದವು, **ಅರಂಬೈಯರುಂ** = ರಂಭಾದ್ಯಪ್ಸರಸ್ಸುಗಳು, **ಮಟ್ರುಮ್** = ಮತ್ತು **ತೆಳಿಮದಿಶೇರ್**=ತಿಳಿಯಾದ ಬುದ್ಧಿಯುಳ್ಳ, **ಮುನಿವರ್‌ತಮ್ ಕುಳುವುಮ್**= ಮಹರ್ಷಿಗಳ ಸಮೂಹವು, **ಉನ್ದಿ** = ಒಬ್ಬರನ್ನೊಬ್ಬರು (ಜಜ್ಜುವಂತೆ) ತಳ್ಳುತ್ತಾ, **ತಿಶೈತಿಶೈಯಿಲ್** = ದಿಕ್ಕುದಿಕ್ಕುಗಳಲ್ಲಿಯೂ ಇರುವ, **ಮಲರ್**= ಪುಷ್ಪಗಳನ್ನು, **ತೂವಿ** = ಒಟ್ಟುಗೂಡಿಸಿ ತೆಗೆದುಕೊಂಡು, **ಶೆನ್ರುಶೇರುಮ್** =, ಬಂದು ಸೇರಿ ಬಾಳುವ ಸ್ಥಳವಾದ, **ಕಳಿಮಲರ್‌ಶೇರ್ ಪೊಳಿಲ್ ಅರಂಗತ್ತು**= ಮಧುಸ್ರವಿಸುವ ಪುಷ್ಪಭರಿತವಾದ ಉದ್ಯಾನವನಗಳಿಂದ ಕೂಡಿದ ಶ್ರೀರಂಗದಲ್ಲಿ, **ಉರಗಮ್ ಏರಿ**= ಆದಿಶೇಷನನ್ನು ಹತ್ತಿ, **ಕಣ್‌ವಳರುಮ್**= ನಿದ್ರಿಸುತ್ತಿರುವ, **ಕಡಲ್‌ವಣ್ಣರ್**= ಸಮುದ್ರ ಸಮಾನವರ್ಣನಾದ ಶ್ರೀರಂಗನಾಥನ, **ಕಮಲಕ್ಕಣ್ಣುಮ್** = ಕಮಲ ಸದೃಶವಾದ ನೇತ್ರಗಳನ್ನು, **ಒಳಿಮದಿರ್‌ಶೇರ್ ತಿರುಮುಕಮುಮ್**=ಕಾಂತಿಯುತ ವಾದ ಚಂದ್ರನಂತಿರುವ ಮುಖಾರವಿಂದವನ್ನು, **ಕಂಡುಕೊಂಡು**= ದರ್ಶನಮಾಡಿ, **ಎನ್‌ಉಳ್ಳಮ್**=ನನ್ನ ಮನಸ್ಸು, **ಮಿಕ ಉರುಕುಮ್‌ನಾಳ್**=ಆನಂದದಿಂದ ಕರಗುವ ದಿನವು, **ಏನ್ರುಕೊಲೋ**= ಎಂದು ಬರುತ್ತದೆಯೋ ?

ಈ ಪಾಶುರದಲ್ಲಿ ಶ್ರೀರಂಗನಾಥನ ದಿವ್ಯಲೋಚನ ಮುಖಾರವಿಂದಾದಿ ಅವಯವಗಳನ್ನು ದರ್ಶನಮಾಡಿ ದ್ರವೀಭೂತವಾದ ಹೃದಯವುಳ್ಳವನಾಗಿ ನಿಂತು ಅವನನ್ನು ಸ್ತುತಿಸುವ ದಿನವು ಎಂದು ಬರುವುದೋ ? — ಎಂದು ಹಂಬಲಿಸುತ್ತಾರೆ. ಆ ಭಗವಂತನ ಸನ್ನಿಧಿಯಲ್ಲಿ ಪ್ರತಿನಿತ್ಯವೂ ಇರುವಂತಹ ಸ್ತೋತೃವರ್ಗವನ್ನು ಮೊದಲೆರಡು ಪಾದಗಳಲ್ಲಿ ತಿಳಿಸುತ್ತಾರೆ. ಮೊದಲೇ ತಿಳಿಸಿರುವಂತೆ ಆ ಸ್ತೋತೃ-

ವರ್ಗದಲ್ಲಿ ಬ್ರಹ್ಮದೇವನೂ ಒಬ್ಬ. ಇವನ ವಿಷಯ ಮೊದಲು ಮೂರು ಪಾಶುರಗಳಲ್ಲಿ ಹೇಳಿದ್ದರೂ ಮತ್ತೆ ಇಲ್ಲಿ ಹೇಳುವುದರಲ್ಲಿ ವಿಶೇಷವಿದೆ. **"ಯುಗಕೋಟಿ ಸಹಸ್ರಾಣಿ ವಿಷ್ಣುಮಾರಾಧ್ಯ ಪದ್ಮಭೂಃ । ಪುನಸ್ತ್ರೈಲೋಕ್ಯಧಾತೃತ್ವಂ ಪ್ರಾಪ್ತವಾನಿತಿ ಶುಶ್ರುಮ" ॥** — ಎಂದು ಹೇಳುವಂತೆ, ಅಧಿಕಾರಕನಾದ ಬ್ರಹ್ಮನು ತನ್ನ ಅಧಿಕಾರ ಸಿದ್ಧ್ಯರ್ಥವಾಗಿಯೂ ಮತ್ತು ಅದು ವಿಚ್ಛೇದರಹಿತವಾಗಿರಲೂ ಆಗಾಗ್ಗೆ ಬಂದು ಭಗವಂತನನ್ನು ಸೇವಿಸುತ್ತಿರುತ್ತಾನೆ. ಹೀಗೆ ದುಂಬಿಗಳಿಂದ ಕೂಡಿದ ನಾಭಿ ಕಮಲದಲ್ಲಿ ಜನಿಸಿದಂತಹ ಬ್ರಹ್ಮನೂ, ಸಂಹಾರೈಕ ಕರ್ತೃಕನಾದ ರುದ್ರನೂ, ದೇವತೆಗಳ ಒಡೆಯನಾದ ಇಂದ್ರನೂ, ಅವನನ್ನು ಮುಂದಿಟ್ಟುಕೊಂಡು ಬರುವ ಇತರ ದೇವತೆಗಳೂ ಮತ್ತು ಅವರ ಪ್ರಿಯೆಯರಾದ ರಂಭಾದ್ಯಪ್ಸರ ಸ್ತ್ರೀಯರೂ ಅವರವರ ಅಧಿಕಾರಗಳಿಗನುಗುಣವಾದ ಅತ್ಯಲ್ಪ ಫಲಾರ್ಥವಾಗಿ ಪ್ರಯೋಜನಾಂತರಪರರಾಗಿ ಪ್ರತಿನಿತ್ಯವೂ ಶ್ರೀರಂಗನಾಥನನ್ನು ಸೇವಿಸಲು ಬರುತ್ತಿರುತ್ತಾರೆ. ಹೀಗೆಯೇ ತತ್ವಹಿತ ಪುರುಷಾರ್ಥಗಳಲ್ಲಿ ನಿಶ್ಚಯಾತ್ಮಕವಾದ ಜ್ಞಾನವುಳ್ಳ ಕೆಲವರು ಅನನ್ಯ ಪ್ರಯೋಜನರಾಗಿ ಅವನನ್ನು ಸೇವಿಸುತ್ತಾರೆ. ಅವರಾರೆಂದರೆ, ಶ್ರೀಮನ್ನಾರಾಯಣನೇ ಪರತತ್ವವೆಂದೂ, ತದ್ವಿಷಯಕವಾದ ಭಕ್ತಿಪ್ರಪತ್ತಿಗಳೇ ಸಾಧನವೆಂದೂ, ಅವನ ಚರಣಕಮಲಗಳಲ್ಲಿ ನಿತ್ಯ ಪರಿಚರ್ಯೆ ಮಾಡುವುದೇ ಪುರುಷಾರ್ಥವೆಂದೂ ತಿಳಿದಿರುವ ಸನಕಸನಂದನಾದಿ ಮುನಿಗಳೂ, ಪೊಯ್ಹೈಮುನಿ, ಪೂದತ್ತಾಳ್ವಾರ್, ಪೇಯಾಳ್ವಾರ್, ತಿರುಮಳಿಶೈಪ್ಪಿರಾನ್, ನಮ್ಮಾಳ್ವಾರ್ ಮೊದಲಾದವರು. ಇವರ ಸಮೂಹವೂ, ಬ್ರಹ್ಮಾದಿಗಳೂ ಒಬ್ಬರನೊಬ್ಬರು ತಳ್ಳಿಕೊಂಡು ತಾನುಮೊದಲು ನಾನುಮೊದಲೆಂದು ಭಗವಂತನನ್ನು ದರ್ಶನಮಾಡಲು, ದಿಕ್ಕು ದಿಕ್ಕುಗಳಲ್ಲಿಯೂ ಲಭಿಸುವಂತಹ ಪುಷ್ಪಗಳೆಲ್ಲವನ್ನೂ ತಂದು, "ಶ್ರೀರಂಗೋಪವನ ತಟೀಷು ವರ್ತಿಷೀಯ" ಎಂದು ಹೇಳುವಂತೆ, ದಿವ್ಯೋದ್ಯಾನ ಶತಸಹಸ್ರಾವೃತವಾದ ಶ್ರೀವೈಕುಂಠಕ್ಕೆ ಸರಿಸಮನಾದ ಮಧುಸ್ರವಿಸುತ್ತಿರುವ ಪುಷ್ಪಭರಿತವಾದ ಅನೇಕ ಉದ್ಯಾನ ವನಗಳಿಂದ ತುಂಬಿರುವ ಶ್ರೀರಂಗಕ್ಷೇತ್ರದಲ್ಲಿ ಶೇಷಶಯನದಲ್ಲಿ ನಿದ್ರಿಸುತ್ತಿರುವ–ಶ್ರೀರಂಗನಾಥನ ಅಡಿದಾವರೆಗಳಲ್ಲಿ ಆ ಪುಷ್ಪಗಳನ್ನು ಸಮರ್ಪಿಸಿ ಸೇವಿಸುತ್ತಾರೆ. "ನಮಾಂಸ ಚಕ್ಷುರಭಿವೀಕ್ಷತೇ ತಮ್", "ನ ಚಕ್ಷುಷಾ ಪಶ್ಯತಿ ಕಶ್ಚನೈನಮ್"— ಎಂದು ಹೇಳುವಂತೆ ಸಾಮಾನ್ಯ ಮನುಷ್ಯನಿಂದ ಕಾಣಲಾಗದಂತಹ, ಅರಳಿದ ಕಮಲದಂತಿದ್ದು ತಂಪಾಗಿಯೂ ಹಿತವಾಗಿಯೂ ವೀಕ್ಷಿಸುವ ಅವನ ಕಣ್ಣುಗಳನ್ನೂ ಮತ್ತು ಬಳಿಕ ಸ್ಮಿತಪೂರ್ವಾಭಿಭಾಷಣನಾದ ಮುಗುಳ್ನಗೆಯಿಂದ ಕೂಡಿದ ಅವನ ವದನಾರವಿಂದವನ್ನೂ ನನ್ನ ಕಣ್ಣುಗಳಿಂದ ದರ್ಶನಮಾಡಿ ಆನಂದಾರ್ಣವದಲ್ಲಿ ಮುಳುಗಿ, ಅದರಿಂದ ದ್ರವೀಭೂತವಾದ ಹೃದಯ ಉಳ್ಳವನಾಗಿ, ಅಲ್ಲಿಯೇ ನಿಂತು ಭಗವಂತನನ್ನು ಸ್ತುತಿಸುವ

ದಿನವು ನನಗೆ ಎಂದು ಪ್ರಾಪ್ತವಾಗುವುದೋ — ಎಂದು ಆಳ್ವಾರ್‌ರವರು ಹಂಬಲಿಸುತ್ತಿದ್ದಾರೆ. ||೬||

ಮರನ್ದಿಹಳುಮ್ ಮನನೊಳಿತ್ತು ವಞ್ಜಮೂಟ್ರು,
ಐಮ್ಬುಲನ್‌ಹಳಡಕ್ಕಿ ಇಡರ್‌ಪಾರತ್ತುನ್ಬಮ್
ತುರನ್ದು, ಇರುಮುಪ್ಪೊಳುದೇತ್ತಿ ಎಲ್ಲೈಯಿಲ್ಲಾ
ತೊನ್ನೆರಿಕ್ಕಣ್ ನಿಲ್ಲೈನಿನ್ರ ತೊಂಡರಾನ,
ಅರನ್ತಿಹಳುಮ್ ಮನತ್ತವರ್ ತಙ್ಗಡಿಯ್ಯೆ ಪೊನ್ನಿ
ಮಣಿಯರಙ್ಗತ್ತರವಣ್ಣೈಯಿಲ್ ಪಳ್ಳಿಕೊಳ್ಳುಮ್
ನಿರನ್ದಿಹಳುಮ್ ಮಾಯೋನೈಕ್ಕಣ್ಡೆನ್ ಕಣ್ಗಳ್
ನೀರ್ಮಲ್‌ಹ ಎನ್ರುಕೊಲೋ ನಿಕ್ಕುಮ್ ನಾಳೇ ||೭||

**ಮರಮ್ ತಿಹಳುಮ್ ಮನಮ್ ಒಳಿತ್ತು** = ಮಾತ್ಸರ್ಯವು ಪ್ರಕಾಶಿಸುವ ಮನಸ್ಸನ್ನು ಬಿಟ್ಟು, **ವಂಜಮ್‌ಮೂಟ್ರು** = ವಂಚನೆಯನ್ನೂ ಬಿಟ್ಟು, **ವರ್ಪುಲನ್ಗಳಡಕ್ಕಿ** = ಬಲಿಷ್ಠವಾದ ಪಂಚೇಂದ್ರಿಯಗಳನ್ನೂ ಜಯಿಸಿ, **ಇಡರ್‌ಪಾರಮ್ ತುನ್ಬಮ್ ತುರನ್ದು** = ದುಃಖ ಭಾರಕ್ಕೆ ಕಾರಣವಾದ ಕ್ಲೇಶಗಳೆಲ್ಲವನ್ನೂ ಬಿಟ್ಟು, **ಇರುಮುಪ್ಪೊಳುತು ಏತ್ತಿ** = ಪಞ್ಚಕಾಲಪರಾಯಣರಾಗಿದ್ದು, **ಎಲ್ಲೈಯಿಲ್ಲಾ** = ನಿರವಧಿಕವಾದ, **ತೊಲ್‌ನೆರಿಕ್ಕಣ್** = ಅನಾದಿಯಾದ ಅನುಷ್ಠಾನ ಮಾರ್ಗದಲ್ಲಿ, **ನಿಲ್ಲೈನಿನ್ರ** = ಸ್ಥಿರರಾಗಿರುವ, **ತೊಂಡರ್ ಆನ** = ಪರಮ ಭಾಗವತರಾದ, **ಅರಮ್ ತಿಹಳುಮ್ ಮನತ್ತವರ್ ತಮ್** = ಪರಮ ಧಾರ್ಮಿಕ ಮನಸ್ಕರಾದ ಪರಮೈಕಾನ್ತಿಗಳಿಗೆ, **ಕಡಿಯ್ಯೆ** = ಗತಿಯಾಗಿರುವ, **ಪೊನ್ನಿ ಅಣಿ–ಅರಂಗತ್ತು** = ಕಾವೇರಿಯಿಂದ ಸೌಂದರ್ಯ ಹೊಂದಿರುವ ಶ್ರೀರಂಗದಲ್ಲಿ, **ಅರವು–ಅಣ್ಣೈಯಿಲ್ ಪಳ್ಳಿಕೊಳ್ಳುಮ್** = ಶೇಷತಲ್ಪದಲ್ಲಿ ಮಲಗಿರುವ, **ನಿರಂತಿಕಳುಮ್ ಮಾಯೋನೈ** = ಸೌಂದರ್ಯವು ಪ್ರಕಾಶಿಸುವಂತೆ ಇರುವ ಆಶ್ಚರ್ಯ ಗುಣನಾದ ಭಗವಂತನನ್ನು, **ಎನ್ ಕಣ್ಗಳ್ ಕಣ್ಡು** = ತನ್ನ ಕಣ್ಣುಗಳು ಕಂಡು, **ನೀರ್ ಮಲ್ಕನಿಕ್ಕುಂ ನಾಳ್** = ಕಣ್ಣೀರು ಸುರಿಸುವಂತೆ ನಿಲ್ಲುವ ದಿನವು, **ಎನ್ರುಕೊಲೋ** = ಎಂದು ಬರುತ್ತದೆಯೋ ?

ಈ ಪಾಶುರದಲ್ಲಿ ಪರಮ ಭಾಗವತರ ಲಕ್ಷಣವನ್ನು ಹೇಳುವಲ್ಲಿ– "ಆಹ್ಲಾದಶೀತನೇತ್ರಾಂಬುಃ" —ಎಂದು ಹೇಳುವಂತೆ, ಭಗವಂತನನ್ನು ದರ್ಶನ ಮಾಡಿದುದರಿಂದುಂಟಾದ ಸಂತೋಷದಿಂದ ಆನಂದಬಾಷ್ಪವನ್ನು ಸುರಿಸುವ ದಿನವು ತನಗೆ ಎಂದು ಬರುವುದೋ ಎಂದು ಹಂಬಲಿಸುತ್ತಾರೆ.

ಘಂಟಾಕರ್ಣ–ಶಿಶುಪಾಲಾದಿಗಳಿಂತೆ, ಭಗವಂತನ ಸೇವೆಯಲ್ಲಿ ತೊಡಗಲು ಅವಕಾಶಕೊಡದೆ ಭಗವಂತನ ವಿಷಯದಲ್ಲಿ ಮಾತ್ಸರ್ಯಪೂರಿತವಾದ ಮನಸ್ಸನ್ನು ಬಿಟ್ಟು ಶುದ್ಧ ಮನಸ್ಕರಾದ, **'ಮನಸ್ಯನ್ಯತ್ ವಚಸ್ಯನ್ಯತ್ ಕರ್ಮಣ್ಯನ್ಯದ್ದು-ರಾತ್ಮನಾಮ್'**— ಎಂದು ಹೇಳುವಂತೆ ಮನಸ್ಸಲ್ಲೊಂದು, ಮಾತಿನಲ್ಲೊಂದು, ಕೆಲಸದಲ್ಲೊಂದು– ಎಂಬಂತಲ್ಲದೆ, 'ಮನಸ್ಯೇಕಂ ವಚಸ್ಯೇಕಂ ಕರ್ಮಣ್ಯೇಕಂ ಮಹಾತ್ಮನಾಂ'— ಎಂಬಂತೆ ವಾಙ್ಮನಃ ಕಾಯಗಳಲ್ಲಿ ಒಂದೇ ರೀತಿ ವರ್ತಿಸುವ, ಇತರರು ನೋಡಿದಾಗ ಒಂದು ರೀತಿಯಲ್ಲಿ ನೋಡದಿದ್ದಾಗ ಮತ್ತೊಂದು ರೀತಿಯಲ್ಲಿ ಅಲ್ಲದೆ– ಸರ್ವದಾ ಏಕರೀತಿಯಲ್ಲಿ ವರ್ತಿಸುತ್ತಿದ್ದು ವಂಚನೆಯಿಂದ ದೂರರಾದ, 'ಇಂದ್ರಿಯಾಣಿ ಪ್ರಮಾಥೀನಿ ಹರಂತಿ ಪ್ರಸಭಂ ಮನಃ' ಎಂಬಂತೆ ಮನಸ್ಸನು, ಬಲಾತ್ಕಾರವಾಗಿ ತಮ್ಮ ಕಡೆಗೆ ಸೆಳೆಯುವ ಇಂದ್ರಿಯಗಳನ್ನು ಜಯಿಸಿದ, ದುಃಖ ಭಾರಗಳಿಗೆ ನಿದಾನಭೂತವಾದ ಕ್ಲೇಶಗಳನ್ನು ಬಿಟ್ಟಿರುವ, ಪ್ರಾತಃಸಂಗವ, ಮಧ್ಯಾಹ್ನ ಅಪರಾಹ್ಣ ಮತ್ತು ಸಾಯಾಹ್ನವೆಂಬ ಪಂಚಕಾಲಗಳಲ್ಲಿಯೂ ಶಾಸ್ತ್ರಚೋದಿತವಾದ ನಿತ್ಯನೈಮಿತ್ತಿಕಾದಿ ಸತ್ಕರ್ಮಗಳನ್ನು ಅನುಷ್ಠಿಸುತ್ತಿರುವ, **"ಪೂರ್ವೇ ಪೂರ್ವೇಭ್ಯೋ ವಚ ಏತ ದೂಚುಃ"** ಎಂದು ಹೇಳುವಂತೆ ನಿರವಧಿಕವಾದ ಅನಾದಿಯಾದ ಈ ಅನುಷ್ಠಾನ ಮಾರ್ಗದಲ್ಲಿ ಸ್ಥಿರವಾಗಿ ನಿಂತಿರುವ ಪರಮ ಧಾರ್ಮಿಕ ಮನಸ್ಕರಾದ ಪರಮೈಕಾಂತಿಗಳಿಗೆ. **"ಸ್ವಪ್ರಾಪ್ತೌ ಸ್ವಯಮೇವ ಸಾಧನತಯಾ ಜೋಘುಷ್ಯಮಾಣಃ"** ಎಂದು ಶ್ರೀಮದ್ವೇದಾಂತದೇಶಿಕರು ಹೇಳಿರುವಂತೆ ಉಪಾಯನಾಗಿಯೂ ಮತ್ತು ಉಪೇಯನಾಗಿಯೂ ಇರುವ, ಕಾವೇರಿ-ಯಿಂದ ಸುತ್ತುವರೆಯಲ್ಪಟ್ಟು ಸೌಂದರ್ಯವನ್ನು ಹೊಂದಿರುವ, ಶ್ರೀರಂಗಕ್ಷೇತ್ರದಲ್ಲಿ ಶೇಷತಲ್ಪದಲ್ಲಿ ಪವಡಿಸಿರುವ, ಸೌಂದರ್ಯವೇ ಮೂರ್ತಿವೆತ್ತಂತಿರುವ ಆಶ್ಚರ್ಯವಾದ ಕಲ್ಯಾಣಗುಣವಿಭೂಷಿತನಾದ ಆ ರಂಗನಾಥನನ್ನು, ನನ್ನ ಕಣ್ಣುಗಳು ಪ್ರತ್ಯಕ್ಷವಾಗಿ ದರ್ಶನಮಾಡಿ ಆನಂದಭಾಷ್ಪವನ್ನು ಸುರಿಸುವ ಕಾಲವು ಎಂದು ನನಗೆ ಪ್ರಾಪ್ತವಾಗು-ವುದು— ಎಂದು ಆಳ್ವಾರ್ರವರು ತವಕಿಸುತ್ತಿದ್ದಾರೆ. ॥೭॥

**ಕೋಲಾರ್ನ್ದ ನೆಡುಮ್ ಶಾರ್ಙ್ಗಮ್ ಕೂನಲ್ ಶಙ್ಗಮ್**
**ಕೊಲೈಯಾಳಿ ಕೊಡುನ್ದಣ್ಡು ಕೊತ್ ಇವ್ವೊಳ್ವಾಳ್**
**ಕಾಲಾರ್ನ್ದ ಗತಿಕ್ಕರುಡನೆನ್ನುಮ್ ವೆನ್ರಿಕ್ಕಡುಮ್-**
**ಪಱವೈ ಇವೈಯನೈತ್ತುಮ್ ಪುಱಮ್ಶೂಳ್ಕಾಪ್ಪ**
**ಶೇಲಾರ್ನ್ದ ನೆಡುಮ್ಕಳನಿ ಶೋಲೈಶೂಳ್ನ್ದ**
**ತಿರುವರಙ್ಗತ್ತರವಣೈಯಿಲ್ ಪಳ್ಳಿಕೊಳ್ಳುಮ್**

**ಮಾಲೋನ್ನೈ ಕಣ್ಣಿನ್ಬಕ್ಕಲವಿಯೆಯ್ದಿ ವಲ್ವಿನ್ನೈಯೇನ್**
**ಎನ್ರುಕೊಲೋ ವಾಳುಮ್ ನಾಳೇ ॥೮॥**

**ಕೋಲ್ ಅನ್ದ್ರ**=ಬಾಣಗಳಿಂದ ಕೂಡಿದ, **ನೆಡು**=ದೊಡ್ಡದಾಗಿರುವ, **ಶಾಙ್ಗ್ರಮ್**=ಶ್ರೀಶಾಙ್ಗ್ರವೆನ್ನುವ ಬಿಲ್ಲು, **ಕೂನ್**=ಭಗವದನುಭವದಿಂದ(ಬಳಸಿ) ಸುತ್ತಿಕೊಂಡಿರುವ, **ನಲ್**=ಒಳ್ಳೆತನದಿಂದ ಕೂಡಿದ, **ಶಙ್ಗಮ್**=ಶ್ರೀಪಾಞ್ಚಜನ್ಯ-ವೆಂಬ ಶಂಖವು, **ಕೊಲೈ**=ಪ್ರತಿಪಕ್ಷನಿರಸನದಲ್ಲಿ ಸಮರ್ಥವಾದ, **ಆಳಿ**=ಸುದರ್ಶನವೆಂಬ ಚಕ್ರವು, **ಕೊಡು** = ವಿರೋಧಿ ನಿರಸನವನ್ನು ಮಾಡುವ, **ತಣ್ಡು** = ಕೌಮೋದಕಿ ಎಂಬ ಗದೆಯು, **ಕೊಟ್ರಮ್** = ಜಯಪ್ರದವಾದ, **ಒಳ್**= ತೇಜಿಷ್ಠವಾದ, **ವಾಳ್**=ನನ್ದಕವೆನ್ನುವ ಖಡ್ಗವು, **ಕಾಲ್ಆರ್ನ್ದ**=ಗಾಳಿಯ ವೇಗದಂತೆ, **ಕಡುಮ್ ಗತಿ** = ಅಧಿಕವಾದ ವೇಗದಿಂದ ಕೂಡಿದ ಗತಿಯುಳ್ಳ, **ಕರುಡನೆನ್ನುಮ್** = ಗರುಡನೆಂಬ, **ವೆನ್ರಿ** = ಜಯಪ್ರದನಾದ, **ಪರವೈ** = ಪಕ್ಷಿರಾಜನು, **ಇವೈ ಅನೈತ್ತುಮ್**=ಇವರೆಲ್ಲರ, **ಪುರಮ್ಶೂಳ್**=ನಾಲ್ಕುಕಡೆಯಲ್ಲೂ ಸುತ್ತುವರೆದು, **ಕಾಪ್ಪ**=ಕಾಯುತ್ತಿರುವ, **ಶೇಲ್**=ಮತ್ಸ್ಯ ವಿಶೇಷಗಳಿಂದ, **ಆರ್ನ್ದ** = ತುಂಬಿದ, **ನೆಡು** = ದೊಡ್ಡದಾದ, **ಕಳನಿ**=ಗದ್ದೆಗಳು, **ಶೋಲೈ** = ಪ್ರಾಕಾರವೂ, **ಶೂಳ್ನ್ದ** = ಸುತ್ತುವರೆದಿರುವ, **ತಿರುವರಙ್ಗತ್ತರವಣೈಯಿಲ್** = ಶ್ರೀರಂಗಕ್ಷೇತ್ರದಲ್ಲಿನ ಶೇಷತಲ್ಪದಲ್ಲಿ, **ಪಳ್ಳಿ-ಕೊಳ್ಳುಂ** = ನಿದ್ರಿಸುವ, **ಮಾಲೋನ್ನೈ** = ಸರ್ವಾಧಿಕನಾದ ರಂಗನಾಥನನ್ನು, **ವಲ್ವಿನ್ನೈಯೇನ್** = ಬಲಿಷ್ಠವಾದ ಪಾಪವನ್ನು ಮಾಡಿರುವ ನಾನು, **ಕಂಡು**=ಕಣ್ಣಾರೆ ಕಂಡು, **ಇನ್ಬಮ್**=ನಿರತಿಶಯವಾದ ಆನಂದದಿಂದ ಕೂಡಿದಂತೆ, **ಕಲವಿಯೆಯ್ದಿ**=ಸಂಶ್ಲೇಷಿಸಿ, **ವಾಳುಮ್ನಾಳ್**= ಉಜ್ಜೀವಿಸುವ ಕಾಲವು **ಎನ್ರುಕೊಲೋ**=ಎಂದು ಬರುತ್ತದೆಯೋ ?

ಈ ಪಾಶುರದಲ್ಲಿ **"ಅದರ್ಶನೇ ದರ್ಶನಮಾತ್ರಕಾಮಾಃ ದೃಷ್ಟ್ವಾ ಪರಿಷ್ವಂಗರಸೈಕ ಲೋಲಾಃ"** –ಎಂಬಂತೆ ದರ್ಶನಸಮನಂತರ ಭಾವಿಯಾದುದು ಸಂಶ್ಲೇಷ-ವಾದುದರಿಂದ, ಅದು ತನಗೆ ಎಂದು ಲಭಿಸುವುದೋ ಎಂದು ಪ್ರಾರ್ಥಿಸುತ್ತಾರೆ.

ಶ್ರೀರಂಗಕ್ಷೇತ್ರವಾದರೋ ನಾನಾತರಹದ ವಿಶೇಷವಾದ ಮೀನುಗಳಿಂದ ತುಂಬಿರುವ ದೊಡ್ಡದೊಡ್ಡದಾದ ಗದ್ದೆಗಳಿಂದಲೂ, ತೋಟ ಹೊಲಗಳಿಂದಲೂ ಪ್ರಾಕಾರಗಳಿಂದಲೂ ಸುತ್ತುವರಿಯಲ್ಪಟ್ಟಿದೆ. ಈ ರಂಗಧಾಮವನ್ನು ಭಗವಂತನ ಪಂಚಾಯುಧವಾದ– ಸದಾಕಾಲದಲ್ಲಿ ಸಿದ್ಧವಾದ ಬಾಣಗಳಿಂದ ಕೂಡಿರುವ ಶಾಙ್ಗ್ರ-

ವೆಂಬ ಬಿಲ್ಲು, ಭಗವಂತನ ಗುಣಾನುಭವದಲ್ಲಿಯೇ ಸದಾಕಾಲದಲ್ಲಿ ಮುಳುಗಿರುವ ಪಾಂಚಜನ್ಯವೆಂಬ ಶಂಖವೂ, ವಿರೋಧಿ ನಿರಸನೈಕಸ್ವಭಾವವಾದ ಶ್ರೀಸುದರ್ಶನವೆಂಬ ಚಕ್ರವೂ ಮತ್ತು ಕೌಮೋದಕಿ ಎಂಬ ಗದೆಯೂ, ಜಯಶೀಲವಾಗಿ ತೇಜಿಷ್ಮವಾದ ನನ್ದಕವೆಂಬ ಖಡ್ಗವೂ ಮತ್ತು ವಾಯುವೇಗಸಮಾನವಾಗಿ ಚಲಿಸುವ ಗರುಡನೆಂಬ ಜಯಪ್ರದನಾದ ಪಕ್ಷಿರಾಜನೂ— ಎಲ್ಲರೂ ನಾಲ್ಕು ಕಡೆಗಳಲ್ಲಿಯೂ ಸುತ್ತುವರೆದು ಕಾಯುತ್ತಿದ್ದಾರೆ. ಈ ಮಧ್ಯದಲ್ಲಿ ಆ ಸರ್ವಾಧೀಕನಾದ ರಂಗನಾಥನು ಶೇಷತಲ್ಪದಲ್ಲಿ ನಿದ್ರಿಸುತ್ತಿದ್ದಾನೆ. ಅಂತಹವನನ್ನು ಬಲಿಷ್ಮವಾದ ಪಾಪಕರ್ಮಗಳನ್ನು ಮಾಡಿರುವ ನಾನು ಕಣ್ಣಾರಕಂಡು ಬಾಳುವ ದಿನವು ಎಂದು ಬರುತ್ತದೆಯೋ ?— ಎನ್ನುತ್ತಾರೆ. ||೮||

**ತೂರಾದ ಮನಕ್ಕಾದಲ್ ತೊಣ್ಡರ್ ತಙ್ಗಳ್**
**ಕುಳಾಙ್ಗಳುಮಿ ತಿರುಪ್ಪುಹಳ್‌ಹಳ್ ಪಲವುಮ್‌ಪಾಡಿ**
**ಆರಾದಮನಕ್ಕಳಿಪ್ಪೋಡಳುದಕಣ್ಣೀರ್**
**ಮಳೈಶೋರ ನಿನ್ನೈದ್ದುರುಹಿಏತ್ತಿ, ನಾಳುಮ್–**
**ಶೀರಾರ್ನ್ದ‌ಮುಳುವೋಶೈ ಪರನ್ವೈಕಾಟ್ಟುಮ್**
**ತಿರುವರಙ್ಗತ್ತರವಣೈಯಿಲ್ ಪಳ್ಳಿಕೊಳ್ಳುಮ್ ।**
**ಪೋರಾಳಿಯಮ್ಮಾನ್ನೈ ಕಣ್ಡುತುಳ್ಳಿ ಪೂದಲತ್ತಿಲ್,**
**ಎನ್ರು ಕೊಲೋ ಪುರುಳುಮ್ ನಾಳೇ ||೯||**

**ತೂರಾದ**=ತೃಪ್ತಿಯಾಗದಂತಹ, **ಕಾದಲ್**= ಆಸೆಯನ್ನು ಹೊಂದಿರುವ, **ಮನಮ್** = ಮನಸ್ಸಿನಿಂದ ಕೂಡಿರುವ, **ತೊಣ್ಡರ್ ತಙ್ಗಳ್ ಕುಳಾಮ್**= ದಾಸಭೂತರಾದ ಶ್ರೀವೈಷ್ಣವರ ಸಮೂಹದಲ್ಲಿ, **ಕುಳುಮಿ** = ಕಲೆತು, **ತಿರುಪ್ಪುಹಳ್‌ಹಳ್** = ಅವನ ಗುಣಗಳಿಗೆ ವಾಚಕವಾದ ನಾಮಗಳನ್ನು, **ಪಲವುಮ್** = ಹಲವನ್ನು, **ಪಾಡಿ**=ಪ್ರೀತಿ ಪ್ರೇರಿತನಾಗಿ ಹಾಡಿ, **ಆರಾದ**= ಪರ್ಯಾಪ್ತಿಯಾಗದ, **ಮನಕ್ಕಳಿಪ್ಪೋಡು** = ಮನಸ್ಸಿನ ಸ್ಥಿತಿಯಿಂದ, **ಅಳುದ–ಕಣ್ಣೀರ್**= ಅತ್ತ ಕಣ್ಣುಗಳಲ್ಲುಂಟಾದ ಆನಂದಬಾಷ್ಪವು, **ಮಳೈಶೋರ**= ಮಳೆಯಂತೆ ಪ್ರವಹಿಸುತ್ತಿರಲು, **ನಿನ್ನೈನ್ದು** = ಅವನನ್ನು ನೆನೆದು, **ಉರುಕಿ**= (ಅದರಿಂದ) ಕರಗಿ, **ಏತ್ತಿ** = ಸ್ತೋತ್ರಮಾಡಿ, **ನಾಳುಮ್** = ದಿನಪೂರ್ತಿ, **ಶೀರ್‌ಆರ್ನ್ದ** = ಐಶ್ವರ್ಯ ಪ್ರಕಾಶಕವಾದ, **ಮುಳುವು ಓಶೈ** = ವಾದ್ಯ–ಘೋಷಗಳು, **ಪರನ್ವೈಕಾಟ್ಟುಮ್** =ಸಮುದ್ರ ಘೋಷವನ್ನು ಅನುಕರಣೆ ಮಾಡಿ ತೋರಿಸುತ್ತಿರುವಂತಹ, **ತಿರುವರಂಗತ್ತರವಣೈಯಿಲ್**=ಶ್ರೀರಂಗದ ಶೇಷಶಯನ

**ದಲ್ಲಿ, ಪಳ್ಳಿಕೊಳ್ಳುವನ್** = ನಿದ್ರಿಸುತ್ತಿರುವ, **ಪೋರಾಳಿ**=ಯುದ್ಧೋನ್ಮುಖ-ವಾದ ಚಕ್ರವನ್ನು ಕೈಯಲ್ಲಿ ಧರಿಸಿರುವ, **ಅಮ್ಮಾನೈ**= ಸರ್ವೇಶ್ವರನನ್ನು, **ಕಂಡು** = ಸೇವಿಸಿ, **ತುಳ್ಳಿ** = ಸಸಂಭ್ರಮವಾದ ನರ್ತನವನ್ನು ಮಾಡಿ, **ಪೂತಲತ್ತಿಲ್** = ಭೂಮಿಯಲ್ಲಿ, **ಪುರುಳುಮ್ ನಾಳ್** = ಹೊರಳುವಂತಹ ಕಾಲವು, **ಎನ್ರುಕೊಲೋ.....** ಎಂದು ಬರುತ್ತದೆಯೋ ? ॥೯॥

ಈ ಒಂಬತ್ತನೆಯ ಪಾಶುರದಲ್ಲಿ ಶ್ರೀರಂಗನಾಥನನ್ನು ಸೇವಿಸಿ ಸಂಭ್ರಮದಿಂದ ನರ್ತನ ಮಾಡುವಂತಹ ದಿನವು ತನಗೆ ಎಂದು ಒದಗುವುದೋ ಎಂದು ಹಂಬಲಿಸು-ತ್ತಾರೆ. **"ನಾಗ್ನಿಸ್ತೃಪ್ಯತಿ ಕಾಷ್ಠಾನಾಂ"**– ಎಂದು ಹೇಳುವಂತೆ ಭಗವಂತನನ್ನು ಎಷ್ಟು ಅನುಭವಿಸಿದರೂ ತೃಪ್ತಿಯಾಗದ ಪ್ರೇಮ ಭಾರವುಳ್ಳವರು ಕೆಲವರಿದ್ದಾರೆ. ಅವರು ಗುಂಪು ಗುಂಪಾಗಿ ಕೂಡಿಕೊಂಡು, **"ಮಚ್ಚಿತ್ತಾಮದ್ಗತಪ್ರಾಣಾಃ ಬೋಧಯನ್ತಃ ಪರಸ್ಪರಮ್। ಕಥಯನ್ತಶ್ಚ ಮಾಂಭಕ್ತ್ಯಾ ತುಷ್ಯನ್ತಿ ಚ ರಮನ್ತಿ ಚ॥"**— ಎಂದು ಗೀತಾಚಾರ್ಯನು ಹೇಳಿರುವಂತೆ, ಭಗವಂತನ ಸ್ವರೂಪ ರೂಪಗುಣ ವಿಭೂವ ಚೇಷ್ಟಿತಗಳನ್ನು ಬಾಯಾರ ಹಾಡುವರು. ಹೀಗೆ ಹಾಡಿದರೂ ತೃಪ್ತಿಯಾಗದ ಮನಸ್ಸಿನಿಂದ ಹೊರಹೊಮ್ಮಿದ ಆನಂದ ಬಾಷ್ಪವು ಮಳೆಯಂತೆ ಪ್ರವಹಿಸುತ್ತದೆ. ಅದೇ ಸ್ಥಿತಿಯಲ್ಲಿ ಮೇಲ್ಮೇಲೆ ಭಗವದ್ಗುಣಗಳನ್ನು ಸ್ಮರಿಸಿ-ಕೊಂಡು, ತಮ್ಮ ದೇಹವು ನೀರಾಗಿ ಕರಗಿಹೋಗುವಂತೆ ಮತ್ತೆ ಭಗವಂತನನ್ನು ಸ್ತೋತ್ರ ಮಾಡುತ್ತಿರುತ್ತಾರೆ. ಒಂದು ಕಡೆಯಲ್ಲಿ ಹೀಗಿದ್ದರೆ, ಮತ್ತೊಂದು ಕಡೆಯಲ್ಲಿ ಅನವರತವಾಗಿ ಭೇರಿಮುರಜಾದಿ ವಾದ್ಯಘೋಷಗಳು ಸಮುದ್ರ ಘೋಷವನ್ನು ನಮ್ಮ ಸ್ಮೃತಿಪಥಕ್ಕೆ ತರುವಂತೆ ಮೊಳಗುತ್ತಿರುತ್ತವೆ. ಈ ರೀತಿ ಇರುವ ಶ್ರೀರಂಗಕ್ಷೇತ್ರದಲ್ಲಿ ಶೇಷತಲ್ಪದಲ್ಲಿ ನಿದ್ರಿಸುತ್ತಿರುವ, ಪ್ರತಿಪಕ್ಷಿಗಳನ್ನು ನಿರಸನಮಾಡುವ ಸ್ವಭಾವದಿಂದ ಅನವರತವೂ ಯುದ್ಧೋನ್ಮುಖವಾಗಿ ನಿಂತಿರುವ ಚಕ್ರವನ್ನು ಕೈಯಲ್ಲಿ ಹಿಡಿದಿರುವ ನನ್ನ ಸ್ವಾಮಿಯಾದ ರಂಗನಾಥನನ್ನು ಕಣ್ಣಾರೆ ಕಂಡು ಆನಂದಸಾಗರದಲ್ಲಿ ಮುಳುಗಿ ನರ್ತನಮಾಡಿ ಮಾಡಿ ಭೂತಲದಲ್ಲಿ ಬಿದ್ದು ಹೊರಳುವ ದಿನವು ಎಂದು ನನಗೆ ಸಂಭವಿಸುವುದೋ ?—ಎನ್ನುತ್ತಾರೆ. ॥೯॥

**ವರ್ ಪೆರುವಾನಹಮುಯ್ಯ ವಮುರರುಯ್ಯ**
**ಮಣ್ಣುಯ್ಯ ಮಣ್ಣುಲಕಿಲ್ ಮನಿಶರುಯ್ಯ**
**ತುನ್ಬಮಿಕು ತುಯುರಕಲ ಅಯರ್ವೊನ್ರಿಲ್ಲಾ**
**ಚ್ಚುಕಮ್ವಳರ ಅಕಮಿಕಿಳುಮ್ ತೊಂಡರ್ವಾಳ**
**ಅನ್ಬೊಡು ತೆನ್ತಿಶೈನೋಕ್ಕಿಪ್ಪಳ್ಳಿಕೊಳ್ಳುಮ್**

**ಅಣಿಯರಙ್ಗ ತ್ತಿರುಮುಟ್ರತ್ತಡಿಯಾರ್ ತಂಗಳ್**
**ಇನ್ಬಮಿಕು ಪೆರುಂಕುಳುವುಕಂಡು ಯಾನುಂ**
**ಇಶೈಂದುಡನೇಯನ್ರುಕೋಲೊ ಇರುಕ್ಕುಂ ನಾಳೇ ||೧೦||**

**ವಲ್** = ನೈಮಿತ್ತಿಕ ಪ್ರಳಯಗಳಲ್ಲಿಯೂ ನಾಶವಾಗದಂತಹ, **ಪೆರು**= ಹಿರಿಮೆಯಿಂದ ಕೂಡಿದ, **ವಾನಕವ್** = ಬ್ರಹ್ಮಲೋಕವೇ ಮೊದಲಾದ ಉಪರಿತನ ಲೋಕಗಳು, **ಉಯ್ಯ**= ಉಜ್ಜೀವಿಸುವಂತೆಯೂ, **ಅಮರರ್** = ದೇವತೆಗಳು, **ಉಯ್ಯ** = ಉಜ್ಜೀವಿಸುವಂತೆಯೂ, **ಮಣ್** = ಭೂಲೋಕವು, **ಉಯ್ಯ**= ಉಜ್ಜೀವಿಸುವಂತೆಯೂ, **ಮಣ್ಣುಲಹಿಲ್** = ಭೂಲೋಕದಲ್ಲಿರುವ, **ಮನಿಶರ್** = ಮನುಷ್ಯರು, **ಉಯ್ಯ**= ಉಜ್ಜೀವಿಸುವಂತೆಯೂ, **ಮಿಕುತುನ್ಬಮ್** =ಅಧಿಕವಾದ ದುಃಖಗಳಿಗೆ ಕಾರಣವಾದ, **ತುಯರ್**= ಪಾಪಗಳು, **ಅಕಲ**= ನಶಿಸಿಹೋಗುವಂತೆ ಮಾಡುವ, **ಅಯರ್‌ವು ಒನ್ರುಇಲ್ಲಾ** = ದುಃಖ ಮಿಶ್ರವಲ್ಲದ, **ಶುಕಮ್**= ನಿತ್ಯ ಸುಖವು, **ವಳರ**= ಅಭಿವೃದ್ಧಿಯಾಗುವ, **ಅಕಮ್ ಮಕಿಳುಮ್**= ನಿರತಿಶಯವಾದ ಆನಂದದಿಂದ ಕೂಡಿದ ಮನಸ್ಸುಳ್ಳ, **ತೊಂಡರ್**= ಭಗವದ್ಭಕ್ತರು, **ವಾಳುಂ**= ಬಾಳುವಂತಹ, **ಅನ್ಬೊಡು**=ವಿಭೀಷಣನಲ್ಲುಂಟಾದ ಅಭಿಮಾನದಿಂದ, **ತೆನ್‌ತಿಶೈ** = ದಕ್ಷಿಣ ದಿಕ್ಕಿನಲ್ಲಿರುವ ಲಂಕೆಯನ್ನು **ನೋಕ್ಕಿ** = ಕಟಾಕ್ಷಿಸುತ್ತಾ, **ಪಳ್ಳಿಕೊಳ್ಳುಮ್**=ಶಯನಿಸಿರುವ, **ಅಣಿ ಅರಂಗ**= ಆ ಸುಂದರಮೂರ್ತಿಯಾದ ರಂಗನಾಥನ, **ತಿರುಮುಟ್ರತ್ತು**=ಸನ್ನಿಧಿಯಲ್ಲಿ, **ಮಿಕು ಇನ್ಬಮ್**= ನಿರತಿಶಯ-ವಾದ ಆನಂದದಿಂದ ಕೂಡಿದ, **ಅಡಿಯಾರ್ ತಂಗಳ್**= ಶ್ರೀವೈಷ್ಣವದಾಸಜನರ, **ಪೆರುಂಕುಳುವು** = ದೊಡ್ಡದೊಡ್ಡ ಗುಂಪನ್ನು, **ಕಂಡು** = ಕಣ್ಣಾರಕಂಡು, **ಯಾನುಮ್** = ನಾನು, **ಇಶೈಂದು** = ಅವರಲ್ಲೊಬ್ಬನಾಗಿ ಸೇರಿ, **ಉಡನೇಯಿರುಕ್ಕುಮ್ ನಾಳ್** = ಅವರೊಡನೆ ಭಗವತ್ಸೇವೆಯನ್ನು ಮಾಡುವ ಕಾಲವು, **ಎನ್ರುಕೊಲೋ**=ಎಂದು ಬರುವುದೋ ? ||೧೦||||

ಪರಮಪದವನ್ನು ಸೇರಿದರೂ, ಅಲ್ಲಿಯೂ "ಮದ್ದೇವತ್ಯೈಃ ಪರಿಜನೈಸ್ತ್ವ ಸಂಗನೀಯಃ"— ಎಂದು ಹೇಳುವಂತೆ, ಅಲ್ಲಿರುವ ಪರಮ ಭಾಗವತ ಸಮಾಜಗಳಲ್ಲಿ ಕಲೆತು, ಭಗವಂತನನ್ನು ಅನುಭವಿಸುವುದೇ ಪರಮಪ್ರಾಪ್ಯವಾದುದರಿಂದ, ಆ ಪುರುಷಾರ್ಥವು ಈ ವಿಭೂತಿಯಲ್ಲಿ ತಮಗೆ ಲಭಿಸುವ ದಿನವು ಎಂದು ಬರುತ್ತದೋ— ಎಂದು ಹಂಬಲಿಸುತ್ತಾರೆ.

ನೈಮಿತ್ತಿಕವಾದ ಪ್ರಳಯಗಳಲ್ಲಿಯೂ ಅಳಿವಿಲ್ಲದಿರುವಂತಹ ಒಂದು ಹಿರಿಮೆಯನ್ನು ಹೊಂದಿರುವ ಬ್ರಹ್ಮಲೋಕವೇ ಮೊದಲಾದ ಉಪರಿತನ ಲೋಕಗಳಲ್ಲಿ

ವಾಸಿಸುವ ದೇವತೆಗಳೂ, ತನ್ನ ದರ್ಶನವನ್ನು ಪಡೆದು ಉಜ್ಜೀವಿತರಾಗಲೆಂದು, ಅವರಿಗೆ ದರ್ಶನಭಾಗ್ಯವನ್ನೊದಗಿಸಲು ಭಗವಂತನು ಶ್ರೀರಂಗಕ್ಷೇತ್ರದಲ್ಲಿ ಶೇಷಶಾಯಿ-ಯಾಗಿದ್ದಾನೆ. ಇವನ ದರ್ಶನವನ್ನು ಪಡೆದು ಉಜ್ಜೀವಿತರಾದ ದೇವತೆಗಳು ವಾಸಿಸುವುದರಿಂದ ಆ ಭಕ್ತಾಗ್ರೇಸರರ ವಾಸಸ್ಥಾನಗಳಾದ ಲೋಕಗಳೂ ಉಜ್ಜೀವಿತ-ವಾಗುತ್ತವೆ. ಹಾಗೆಯೇ ಭೂಲೋಕದಲ್ಲಿ ಆ ಭಗವಂತನು ಮಲಗಿರುವುದರಿಂದ ಅವನ ಸಂಸರ್ಗಮಾತ್ರದಿಂದಲೇ ಇಡೀ ಭೂಮಂಡಲವೇ ಉಜ್ಜೀವಿತವಾಗುತ್ತವೆ ಮತ್ತು ಅವನ ದರ್ಶನವನ್ನು ಮಾಡಿದ ಮನುಷ್ಯರೆಲ್ಲರೂ ಉಜ್ಜೀವಿತರಾಗುತ್ತಾರೆ. ಸಾಂಸಾರಿಕ ತಾಪತ್ರಯಾದಿ ದುಃಖಗಳಿಗೆ ಕಾರಣವಾದ ಪಾಪಗಳನ್ನು ಕಳೆದುಕೊಂಡು, ಸ್ವಲ್ಪವೂ ದುಃಖ ಮಿಶ್ರಿತವಲ್ಲದ, ನಿರತಿಶಯ ಸುಖವನ್ನು ಅನುಭವಿಸುತ್ತಾ, ನಿರತಿಶಯವಾದ ಆನಂದದಿಂದ ಕೂಡಿದ ಮನಸ್ಸುಳ್ಳ ಮುಕ್ತರೂ, ಈ ಭೂಲೋಕದಲ್ಲಿ ಲಭಿಸುವಂತಹ ರಂಗನಾಥನ ದರ್ಶನಭಾಗ್ಯ ತಮಗೆ ವೈಕುಂಠದಲ್ಲಿ ಲಭಿಸದಿರುವುದ-ರಿಂದ, **'ಇಮಾನ್ ಲೋಕಾನ್ ಕಾಮಾನ್ನೀ ಕಾಮರೂಪ್ಯನು ಸಂಚರನ್'**— ಎಂದು ಹೇಳಿರುವಂತೆ ತಮ್ಮ ಇಷ್ಟಾರ್ಥಪೂರ್ತಿಗಾಗಿ ಶ್ರೀರಂಗಕ್ಷೇತ್ರಕ್ಕೆ ಬಂದು ಭಗವಂತನ ದರ್ಶನ ಪಡೆದು ತಮ್ಮ ಬಾಳನ್ನು ಸಾರ್ಥಕಪಡಿಸಿಕೊಳ್ಳುತ್ತಾರೆ. ಹೀಗೆ ಎಲ್ಲರನ್ನೂ ಉಜ್ಜೀವಿಸಲೆಂದೇ ಶ್ರೀರಂಗಪಲ್ಲಿರುವ ರಂಗನಾಥನು, ರಾಮಾವತಾರ ಸಮಯವಲ್ಲಿ ತನ್ನನ್ನು ರಕ್ಷಿಸಬೇಕೆಂದು ಶರಣುಹೊಂದಿದ ವಿಭೀಷಣನ ಮೇಲೆ ಅತಿಯಾದ ಅಭಿಮಾನವುಂಟಾದುದರಿಂದ ಅವನನ್ನೂ ಮತ್ತು ಅವನ ಲಂಕಾಪಟ್ಟಣ ವನ್ನೂ ಪರಿಪೂರ್ಣವಾಗಿ ಕಟಾಕ್ಷಿಸಬೇಕೆಂದು ಲಂಕಾಪಟ್ಟಣವಿರುವ ದಕ್ಷಿಣ ದಿಕ್ಕಿಗೇ ತಿರುಗಿಕೊಂಡು ಅದನ್ನು ನೋಡುತ್ತಲೇ ಮಲಗಿದ್ದಾನೆ. ಹೀಗೆ ಬಿಜಯಮಾಡಿಸಿರುವ ರಂಗನಾಥನ ಸನ್ನಿಧಾನದಲ್ಲಿ ಅವನ ದರ್ಶನದಿಂದ ನಿರತಿಶಯವಾದ ಆನಂದವನ್ನು ಹೊಂದಿರುವ ಅವನ ಭಕ್ತರನೇಕರು ಕೂಡಿರುತ್ತಾರೆ. ಆ ಭಕ್ತ ವರ್ಗವನ್ನು ಕಣ್ಣಾರಕಂಡು, ಅವರ ಗುಂಪಿನಲ್ಲಿ ತಾವೂ ಒಬ್ಬರಾಗಿದ್ದು ಆ ಭಗವಂತನನ್ನು ಸೇವಿಸುವ ದಿನವು ತಮಗೆ ಎಂದು ಬರುತ್ತದೆಯೋ– ಎಂದು ಆ ಕಾಲವನ್ನು ಕುರಿತು ಆಳ್ವಾರ್‌ರವರು ಹಾತೊರೆಯುತ್ತಾರೆ. ॥೧೦॥

**ತಿಡರ್ ವಿಳಂಗುಕರೈ ಪೊನ್ನಿ ನಡುವುಪಾಟ್ಟು ।**
**ತ್ತಿರುವಂಗತ್ತರವಣೈಯಿಲ್ ಪಳ್ಳಿಕೊಳ್ಳುಮ್,**
**ಕಡಲ್ ವಿಳಂಗುಕರುಮೇನಿಯಮ್ಮಾನ್ ತನ್ನೈ ।**
**ಕಣ್ಣಾರಕ್ಕಂಡುಹಕ್ಕುಮ್ ಕಾದಲ್‌ತನ್ನಾಲ್,**
**ಕುಡೈವಿಳಂಗು ವಿರಿಲ್‌ತಾನೈಕ್ಕೊಟ್ಟ್ರವೊಳ್‌ವಾಳ್**

ಕೂಡಲರ್‌ಕೋ಼ ಕುಡೈಕ್ಕುಲಶೇಖರನ್ ಶೊಲ್‌ಶೆಯ್ದ
ನಡೈವಿಳಂಗುತಮಿಳ್‌ಮಾಲೈ ಪತ್ತುಮ್‌ವಲ್ಲಾರ್
ನಲಮ್‌ತಿಕಳ್ ನಾರಣ ನಡಿಕ್ಕೀಳ್ ನಣ್ಣುವಾರೇ ||೧೧||

**ವಿಳಂಗು**= ಪ್ರಕಾಶಿಸುತ್ತಿರುವ, **ತಿಡರ್**=ಎತ್ತರವಾದ, **ಕರೈ**=ದಡವನ್ನು ಹೊಂದಿರುವ, **ಪೊನ್ನಿ**= ಕಾವೇರಿ ನದಿಯ, **ನಡುವುಪಾಟ್ಟು**= ಮಧ್ಯ ಪ್ರದೇಶ-ದಲ್ಲಿ, **ತಿರುವರಂಗತ್ತು**= ಶ್ರೀರಂಗಕ್ಷೇತ್ರದ, **ಅರವಣೈಯಿಲ್**= ಶೇಷತಲ್ಪದಲ್ಲಿ, **ಪಳ್ಳಿಕೊಳ್ಳುವನ್**= ನಿದ್ರಿಸುತ್ತಿರುವ, **ಕಡಲ್**= ಸಮುದ್ರದಂತೆ, **ವಿಳಂಗು**= ಪ್ರಕಾಶಿಸುವ, **ಕರು**=ಶ್ರಮಹರವಾದ (ಶುಭಾಶ್ರಯವಾದ), **ಮೇನಿ**=ದಿವ್ಯ ಮಂಗಳ ವಿಗ್ರಹದಿಂದ ಕೂಡಿದ, **ಅಮ್ಮಾನ್‌ತನ್ನೈ**=ಸರ್ವೇಶ್ವರನನ್ನು, **ಕಣ್ಣಾರ ಕಂಡು**=ಕಣ್ಣುಗಳು ತೃಪ್ತಿಯಾಗುವಂತೆ ಕಂಡು, **ಉಹಕ್ಕುಮ್**=ಆನಂದಾನುಭವ-ವನ್ನು ಮಾಡಬೇಕೆಂಬ, **ಕಾತಲ್‌ತನ್ನಾಲ್**= ಆಸೆಯಿಂದ, **ವಿಳಂಗು**=ಪ್ರಕಾಶಿ-ಸುವ, **ಕುಡೈ**= ಶ್ವೇತ ಛತ್ರಿಯನ್ನೂ, **ವಿರಿಲ್**= ಬಲಿಷ್ಠವಾದ, **ತಾನೈ**= ಸೈನ್ಯ-ವನ್ನೂ, **ಕೊಳ್**=ಜಯಪ್ರದವಾದ, **ಒಳ್**=ತೇಜಸ್ಸಿನಿಂದ ಕೂಡಿದ, **ವಾಳ್**= ಕತ್ತಿಯನ್ನೂ ಹೊಂದಿರುವ, **ಕೂಡಲರ್**= ಮಧುರೆಯಲ್ಲಿರುವ ಜನರಿಗೆ, **ಕೋ಼**= ನಿರ್ವಾಹಕರಾದ, **ಕುಡೈ**= ದಾನಶೀಲರಾದ, **ಕುಲಶೇಖರನ್**=ಶ್ರೀ ಕುಲಶೇಖರ ಆಳ್ವಾರ್ರವರು, **ಶೊಲ್‌ಶೆಯ್ದ**= ಕೃಪೆಯಿಂದ ರಚಿಸಿರುವ, **ನಡೈವಿಳಂಗು**= ಕಾವ್ಯ ಲಕ್ಷಣಗಳಿಂದ ಪ್ರಕಾಶಿಸುವ, **ತಮಿಳ್‌ಮಾಲೈ**=ತಮಿಳುಪದ್ಯ ಮಾಲಿಕೆಯ, **ಪತ್ತುಮ್**=ಈ ಹತ್ತು ಪದ್ಯಗಳನ್ನೂ, **ವಲ್ಲಾರ್**= ತಿಳಿದು ಅನುಸಂಧಾನ ಮಾಡುವವರು, **ನಲಮ್‌ತಿಹಳ್**= ಶೀಲಾದಿ ಕಲ್ಯಾಣಗುಣಪೂರ್ಣನಾದ, **ನಾರಣ್**=ಶ್ರೀಮನ್ನಾರಾಯಣನ, **ಅಡಿಕ್ಕೀಳ್**= ಪಾದಗಳ ಕೆಳಭಾಗದಲ್ಲಿಯೇ, **ನಣ್ಣುವಾರ್**=ವಾಸಿಸುತ್ತಾರೆ. ||೧||

ಈ ದಶಕದ ಕೊನೆಯಲ್ಲಿರುವ ಈ ಪದ್ಯವು ಈ ದಶಕಕ್ಕೆ ಫಲಶ್ರುತಿಯಾಗಿ ನಿಂತಿದೆ. **"ಸಹೋವಾಚ ವ್ಯಾಸಃ ಪಾರಾಶರ್ಯಃ"**– ಎಂದು ಹೇಳುವಂತೆ, ಕುಲಶೇಖರಾಳ್ವಾರ್ರವರು ಕೃಪೆ ಮಾಡಿ ತನ್ನಂತೆಯೇ ಇತರರೆಲ್ಲರೂ ಉಜ್ಜೀ-ವಿಸಲೆಂದು ನಿರ್ಮಿಸಿದರೆಂದು ಹೇಳಿದರೆ, ಆಪ್ತಪ್ರಣೀತವಾದುದೆಂದು ಎಲ್ಲರೂ ಪರಿಗ್ರಹಿಸುತ್ತಾರೆಂದೂ ಮತ್ತು ಆ ಭಗವಂತನ ಅನುಗ್ರಹ ವಿಶೇಷದಿಂದ ಐಹಿಕವಾಗಿ ತನಗೆ ಲಭ್ಯವಾಗಿರುವ ಪದವಿಯೇ ಮೊದಲಾದ ಸುಖ-ಭೋಗಗಳನ್ನೂ, ಈ ಪಾಶುರ–

ದಲ್ಲಿ ತಿಳಿಸುತ್ತಾರೆ. ಈ ಆಳ್ವಾರ್ರವರು ಕ್ಷತ್ರಿಯ ಕುಲದಲ್ಲಿ ಅವತರಿಸಿ, ಏಕಚ್ಛತ್ರಾಧಿಪತ್ಯದಿಂದ ರಾಜ್ಯವಾಳುತ್ತಿದ್ದರು. ಬಲಿಷ್ಠವಾದ ಸೈನ್ಯದಿಂದ ಕೂಡಿದ್ದರು. ಜಯಶೀಲವಾದ ಮತ್ತು ಪ್ರಕಾಶಮಾನವಾದ ಕತ್ತಿಯನ್ನು ಹೊಂದಿದ್ದರು. ಮಧುರೈಯಲ್ಲಿ ಬಹುಕಾಲ ರಾಜ್ಯಭಾರ ಮಾಡುತ್ತಿದ್ದುದರಿಂದ, ಅಲ್ಲಿನ ಜನರೆಲ್ಲರಿಗೂ ನಿರ್ವಾಹಕರಾಗಿದ್ದರು.

ಭಗವಂತನೂ ಮತ್ತು ಅವನ ದಾಸವರ್ಗದವರೂ ಬಂದಿಳಿದುಕೊಳ್ಳಲು ಸಹಾಯವಾಗುವಂತೆ ಮರಳಿನ ದಿಣ್ಣೆಗಳಿಂದ ಪ್ರಕಾಶಿಸುವ ದಡದಿಂದ ಕೂಡಿದ ಕಾವೇರಿ ನದಿಯಿಂದ ಸುತ್ತುವರಿಯಲ್ಪಟ್ಟ ಶ್ರೀರಂಗ ಕ್ಷೇತ್ರದಲ್ಲಿ ಶೇಷತಲ್ಪದಲ್ಲಿ ನಿದ್ರಿಸುತ್ತಿರುವ ಭಗವಂತನು ಸಮುದ್ರದಂತೆ ಕಂಗೊಳಿಸುತ್ತಿರುವುದರಿಂದ, 'ಕಾವೇರಿ ಮಧ್ಯದಲ್ಲಿ ಒಂದು ಸಮುದ್ರವೇ ಬಂದಿದೆಯೋ !' ಎಂಬಂತೆ ಅವನ ದಿವ್ಯ ಮಂಗಳ ವಿಗ್ರಹವು ಪ್ರಕಾಶಿಸುತ್ತಿದೆ. **"ನ ಚಕ್ಷುಷಾ ಪಶ್ಯತಿ ಕಶ್ಚನೈನಂ", "ನ ಮಾಂಸಚಕ್ಷುಃ ಅಭಿವೀಕ್ಷತೇ ತಮ್"**— ಎಂದು ಹೇಳುವಂತೆ ಸಾಮಾನ್ಯ ಮನುಷ್ಯರಿಗೆ ಚಕ್ಷುರ್ಗ್ರಾಹ್ಯನಲ್ಲದ ಅವನನ್ನು ಕಣ್ಣಾರಕಂಡು ಅನುಭವಿಸಬೇಕೆಂಬ ಅಭಿನಿವೇಶದಿಂದ ಮೇಲೆ ಹೇಳಿದಂತೆ ಚಕ್ರವರ್ತಿ ಸಾರ್ವಭೌಮರಾದ ಕುಲಶೇಖರಾಳ್ವಾರ್ರವರು ಕಾವ್ಯ ಲಕ್ಷಣ ಸರಣಿಯಲ್ಲಿ ಒಂದನ್ನೂ ಬಿಡದೆ, ಗುಣಗಳಿಂದ ಪ್ರಕಾಶಿಸುವಂತೆ ರಚಿಸಿರುವಂತಹ ತಮಿಳಿನ ಪದ್ಯಮಾಲಿಕೆಯ ಈ ಹತ್ತು ಹಾಡುಗಳನ್ನೂ ಅರ್ಥಸಹಿತ ತಿಳಿದು ಅನುಸಂಧಾನ ಮಾಡುವವರು ಸಕಲಕಲ್ಯಾಣಗುಣಪೂರ್ಣನಾದ ಶ್ರೀಮನ್ನಾರಾಯಣನ ಅಡಿದಾವರೆಯ ಛಾಯೆಯಲ್ಲಿಯೇ ಬಾಳುವಂತಾಗುತ್ತಾರೆ—ಎಂದು ಹೇಳಿ, ಈ ದಶಕದ ಅನುಸಂಧಾನದ ಫಲಶ್ರುತಿಯನ್ನು ಈ ಪದ್ಯದಲ್ಲಿ ತಿಳಿಸಿ, ಆಳ್ವಾರ್ರವರು ಪ್ರಥಮ ದಶಕವನ್ನು ಮುಗಿಸಿದ್ದಾರೆ. ॥೧೧॥

## ಪೆರುಮಾಳ್ ತಿರುಮೊಳಿ—ಎರಡನೆಯ ದಶಕ :

ಹಿಂದಿನ ದಶಕದಲ್ಲಿ ಆಳ್ವಾರ್ರವರು ತಮಗುಂಟಾದ ಭಗವದಭಿನಿವೇಶವನ್ನು ಒಂದೊಂದು ಪದ್ಯಗಳಲ್ಲಿಯೂ ನಾನಾ ಪ್ರಕಾರವಾಗಿ ವರ್ಣಿಸಿರುವರು. ಭಗವದನುಭವ ಪಡೆಯಬೇಕೆಂಬ ಆಸೆಯಾದರೋ ಭಾಗವತಾನುಭವದಲ್ಲಿ ಕೊಂಡುಹೋಗಿ ಸೇರಿಸುವುದರಿಂದಲೂ, ಪರಮಪದಕ್ಕೆ ಹೋಗಿ ಸೇರಿದರೂ —"ಅನ್ದಮಿಲ್ ಪೇರಿನ್ಬತ್ತು ಅಡಿಯರೋಡಿರುನ್ದಮೈ", ಎಂದೂ "ಅಡಿಯಾರ್‌ಕಳ್ ಕುಳಾಂಗಳೈ ಉಡ್ನ

ಕೊಡುವದೆನ್ನುಕೊಲೋ" "ಕೈಂಕರ್ಯನಿತ್ಯನಿರತೈಃ ಭವದೇಕಭೋಗ್ಯೈಃ ನಿತ್ಯೈಃ ಅನುಕ್ಷಣನವೀನ ರಸಾರ್ದ್ರಭಾವೈಃ। ನಿತ್ಯಾಭಿವಾಂಛಿತ ಪರಸ್ಪರ ನೀಚಭಾವೈಃ ಮದ್ದೈವತೈಃ ಪರಿಜನೈಸ್ತವ ಸಂಗನೀಯಃ ||"— ಎಂದು ಆಳ್ವಾರಾಚಾರ್ಯರು ಅನುಸಂಧಾನ ಮಾಡಿರುವಂತೆಯೇ ಭಾಗವತಾನುಭವವೇ ಪರಮಪುರುಷಾರ್ಥವಾಗಿರುವುದರಿಂದಲೂ, ಕುಲಶೇಖರಾಳ್ವಾರ್ರವರೂ ಈ ದಶಕದಲ್ಲಿ ಭಾಗವತಾನುಭವವನ್ನು ಪಡೆಯಬೇಕೆಂದೇ ಹಂಬಲಿಸಿದ್ದಾರೆ.

ಶ್ರೀರಂಗದಲ್ಲಿ ನಿತ್ಯ ವಾಸಮಾಡುತ್ತಾ ಶ್ರೀರಂಗನಾಥನ ದಿವ್ಯ-ಮಂಗಳ ವಿಗ್ರಹ-ವನ್ನು ದರ್ಶನಮಾಡುತ್ತಾ, ಅವನ ಗುಣಾಮೃತವನ್ನು ಪಾನಮಾಡುತ್ತಾ ಕಾಲ ವನ್ನು ಕಳೆಯುತ್ತಿರುವ ಪರಮ ಭಾಗವತರುಗಳ ಗೋಷ್ಠಿಯನ್ನು ದರ್ಶನ ಮಾಡುವುದೇ, ನಾವು ಕಣ್ಣುಗಳನ್ನು ಪಡೆದುದಕ್ಕೆ ಪ್ರಯೋಜನವಾದುದು; ಆ ಭಾಗವತರ ಪಾದಾರವಿನ್ದಗಳ ಧೂಳಿನ ಸ್ನಾನವೇ ಗಂಗಾಸ್ನಾನಾದಿಗಳಿಗಿಂತಲೂ ಮಿಗಿಲಾದುದು, ಅವರುಗಳ ತಿರುವಡಿಗಳಿಂದ ತುಳಿಯಲ್ಪಟ್ಟ ಕೆಸರೇ ನಮ್ಮ ತಲೆ-ಗಳಲ್ಲಿ ಧರಿಸಬೇಕಾಗಿರುವ (ಶಿರೋಭೂಷಣ) ಆಭರಣವು, ಅವರುಗಳಿಗೆ ಮಂಗಳಾ-ಶಾಸನವನ್ನು ಹಾಡುವುದೇ ನಮಗೆ ಕ್ಷೇಮವೆಂದೂ ನಾನಾ ಬಗೆಯಾಗಿ ಬಣ್ಣಿಸಿ- "ತ್ವದ್ಭೃತ್ಯಭೃತ್ಯ ಪರಿಚಾರಕ ಭೃತ್ಯ ಭೃತ್ಯ। ಭೃತ್ಯಸ್ಯ ಭೃತ್ಯ ಇತಿ ಮಾಂ ಸ್ಮರ ಲೋಕನಾಥ ||"— ಎಂದು ಪ್ರಾರ್ಥಿಸಬೇಕಾದ ಚರಮ ಪರ್ವನಿಷ್ಠಾ ವಿಶೇಷ ವನ್ನು ಈ ದಶಕದಲ್ಲಿ ಹೇಳಿಕೊಟ್ಟಿದ್ದಾರೆ.

ಇಡೀ ಈ ಪೆರುಮಾಳ್ ತಿರುಮೊಳಿಯಲ್ಲಿಯೇ ಈ ದಶಕವು ಸಾರತಮವಾದು-ದೆಂದು ನಮ್ಮ ಪೂರ್ವಾಚಾರ್ಯರುಗಳೆಲ್ಲರೂ ಅಭಿಪ್ರಾಯಪಟ್ಟಿದ್ದಾರೆ.

**ತೇಟ್ಟರುಮ್ ತಿರಲ್ ತೇನಿನೈತೆನ್ನರಂಗನೈತಿರುಮಾದುವಾಳ್‌ವಾಟ್ಟಮಿಲ್**
**ವನಮಾಲೈ ಮಾರ್‌ಪನೈವಾಳ್‌ತ್ತಿಮಾಲ್ ಕೊಳ್‌ಶಿಂದೈ ಯರಾಯ್**
**ಆಟ್ಟಮೇವಿಯರ್‌ಅಲನ್ದಳೈತುಅಯರ್‌ವೆಯ್‌ತುಮ್‌ಮೆಯ್ಯಡಿಯಾರ್‌ಕಳ್-**
**ತಮ್**
**ಈಟ್ಟಂ ಕಣ್ಡಿಡಕ್ಕೂಡುಮೇಲ್ ಅದುಕಾಣುಮ್ ಕಣ್‌ಪಯನಾವದೇ ||೧||**

ತೇಟ್ಟು ಅರು—ತನ್ನ ಯತ್ನದಿಂದಲೇ ತನ್ನನ್ನು ಹುಡುಕಿಕೊಂಡು ಬರುವಂತೆ

ಮಾಡಿ, **ತಿರಲ್**=ತನ್ನನ್ನು ಅನುಭವಿಸಲು ಬೇಕಾದ ಬಲವನ್ನೂ ಅನುಗ್ರಹಿಸಿ ಕೊಡುವ, **ತೇನಿನ್ನೈ** = ಜೇನುತುಪ್ಪದಂತೆ ಭೋಗ್ಯನಾಗಿರುವ, **ತೇನ್**= ಸ್ಪೃಹಣೀಯನಾದ, **ಅರಂಗನ್ನೈ**= ಶ್ರೀರಂಗನಾಥನನ್ನು, **ತಿರುಮಾತು**= ಮಹಾ-ಲಕ್ಷ್ಮಿಯು, **ವಾಳ್** = ನಿತ್ಯ ವಾಸಮಾಡುತ್ತಿರುವ, **ವಾಟ್ಟಮಿಲ್**=ಸ್ವಲ್ಪವೂ ಬಾಡದಿರುವ (ತುಳಸಿ ಮಾಲಿಕೆಗಳಿಂದಲೂ) **ವನಮಾಲೈ** =ಸುಂದರವಾದ ವನ ಮಾಲೈಯಿಂದ ಅಲಂಕರಿಸಲ್ಪಟ್ಟಿರುವ, **ಮಾರ್ಪನ್ನೈ** = ಸುಂದರವಾದ ಮತ್ತು ವಿಶಾಲವಾದ ವಕ್ಷಸ್ಥಲವುಳ್ಳ ಶ್ರೀರಂಗನಾಥನನ್ನು, **ವಾಳ್ತ್ತಿ**=(ಕಂಡು) ಮಂಗಳಾ ಶಾಸನಮಾಡಿ, **ಮಾಲ್ ಕೊಳ್**= ಅವನ ವಿಷಯದಲ್ಲಿ ವಿಶೇಷವಾದ ವ್ಯಾಮೋಹಕ್ಕೆ ಒಳಗಾಗಿ, **ಶಿನ್ದೈಯರಾಯ್** = ನಿರಂತರವಾಗಿ ಅವನನ್ನೇ ಚಿಂತಿಸುತ್ತಾ, **ಆಟ್ಟಮ್ ಮೇವಿ**=ಅವನೊಡನೆ ನರ್ತನಾದಿಗಳಿಂದ ಆಡಬೇಕೆಂದು ಆಸೆಪಟ್ಟು, **ಅಲನ್ದು ಅಳೈತ್ತು** = ಅವನ ವಿಷಯದಲ್ಲಿ ಪರವಶರಾಗಿ ಅವನ ನಾನಾ ನಾಮಗಳಿಂದ ಅವನನ್ನು ಕರೆದು, **ಅಯುರ್ ವ್ರುಎಯ್ತುಮ್**= ಅವನು ತಮ್ಮಲ್ಲಿಗೆ ಬರಬಾರದೇ ಎಂದು–ಹಾತೊರೆಯುತ್ತಾ ಇರುವ ಮನಸ್ಸಿನಿಂದ ಕೂಡಿರುವ, **ಮೆಯ್ಯಡಿ-ಯಾರ್ಕಳ್ ತಮ್**= ನಿಜವಾದ ಭಗವದ್ದಾಸರ, **ಈಟ್ಟಮ್** =ಗೋಷ್ಠಿಯನ್ನು **ಕಂಡಿಡಕ್ಕೂಡುಮೇಲ್** = ಕಣ್ಣಾರ ಕಾಣುವುದೇ ಆದರೆ, **ಅದುಕಾಣುಂ**= ಅದನ್ನು ಕಾಣುವುದೇ, **ಕಣ್ ಪಯನಾವದು** = ಕಣ್ಗಳನ್ನು ಪಡೆದುದಕ್ಕೆ ಪ್ರಯೋಜನವಲ್ಲವೇ !

ನಾವು ಎಷ್ಟೇ ಪ್ರಯತ್ನಪಟ್ಟರೂ ಭಗವಂತನ ವಿಶೇಷ ಕೃಪೆಗೆ ಪಾತ್ರರಾಗಿ ಅವನಿಂದ ವರಿಸಲ್ಪಟ್ಟರೆ ಮಾತ್ರವೇ ನಮಗೆ ಭಗವಂತನ ಸಾಕ್ಷಾತ್ಕಾರವಾಗುತ್ತದೆ. **"ಯಮೇವೈಷ ವೃಣುತೇ ತೇನ ಲಭ್ಯಃ ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಂ".** ಅವನು ಯಾರನ್ನು ವರಿಸುತ್ತಾನೆ ?— ಎಂದರೆ, ತನಗೆ ಅತ್ಯಂತ ಪ್ರಿಯರಾದವರನ್ನು ಮಾತ್ರವೇ ವರಿಸುತ್ತಾನೆ. "ಪ್ರಿಯತಮಏವಹಿ ವರಣೀಯಃ" ಆ ಪ್ರಿಯರಾದರೋ, ಬೇರಾವ ವಿಷಯವನ್ನೂ ಅಪೇಕ್ಷಿಸದೇ, ನಿರಂತರವಾಗಿ ಪರಮಾತ್ಮನ ಗುಣಾನುಭವವನ್ನೇ ಮಾಡಬೇಕೆಂದು ಆಸೆಯುಳ್ಳವರಾಗಿರುತ್ತಾರೆ. ಅವರು ಮಾತ್ರವೇ ಪರಮಾತ್ಮನಿಗೆ ಅತ್ಯಂತ ಪ್ರಿಯರು–ಪ್ರಿಯತಮರು ಆಗಿರುತ್ತಾರೆ. **"ಪ್ರಿಯೋ ಹಿ ಜ್ಞಾನಿನೋಽತ್ಯರ್ಥಂ ಅಹಂ ಸ ಚ ಮಮ ಪ್ರಿಯಃ"** (ಗೀತಾ). ಇಂತಹ ತನ್ನ ಪ್ರಿಯತಮರಿಗೆ ತನ್ನ ಪ್ರಯತ್ನದಿಂದಲೇ, ತನ್ನನ್ನು ಹುಡುಕಿಕೊಂಡು ಬರುವಂತೆ ಮಾಡಿ, ತನ್ನನ್ನು ಅನುಭವಿಸಲು ಬೇಕಾದ ಬಲವನ್ನೂ, ತಾನೇ ಅನುಗ್ರಹಿಸಿಕೊಟ್ಟು, ಅವರುಗಳಿಗೆ ಜೇನುತುಪ್ಪದಂತೆ ಭೋಗ್ಯಭೂತ,

ನಾಗಿಯೂ, ಸ್ಪೃಹಣೀಯನಾಗಿಯೂ, ಮೇಲೆ ಮೇಲೆ ಮತ್ತೆ ಮತ್ತೆ ಅವನನ್ನು ನಿರಂತರವಾಗಿ ಕಾಣುತ್ತಾ, ಅನುಭವಿಸುತ್ತಲೇ ಇರಬೇಕೆಂಬ ಆಸೆಯುಂಟಾಗುವಂತೆ ಮಾಡುವವನಾಗಿ ಶ್ರೀರಂಗದಲ್ಲಿ ತನ್ನ ಅರ್ಚಾಮೂರ್ತಿ ಸ್ವರೂಪದಲ್ಲಿ ಶ್ರೀರಂಗನಾಥ-ನಾಗಿ ಬಿಜಯಮಾಡಿಸಿದ್ದಾನೆ. ಅವನ, ಸುಂದರವಾಗಿರುವ, ಸ್ವಲ್ಪವೂ ಎಂದೂ ಬಾಡದಿರುವ ತುಳಸಿಮಾಲೆ, ವನಮಾಲೆಗಳಿಂದ ಅಲಂಕೃತವಾದ ವಿಶಾಲವಾದ ವಕ್ಷಸ್ಥಲದಲ್ಲಿ, ಮಹಾಲಕ್ಷ್ಮಿಯು "ಅಕಲಕಿಲ್ಲೇನಿರೈಯುಮಗ್" — ಎಂದು ಹೇಳುವಂತೆ ನಿರಂತರವಾಗಿ ನಿತ್ಯ ವಾಸಮಾಡುತ್ತಿದ್ದಾಳೆ. ಈ ರೀತಿ ಬಿಜಯ ಮಾಡಿಸಿರುವ ಪುರುಷಕಾರ ಭೂತಳಾದ ಮಹಾಲಕ್ಷ್ಮಿ ಸಮೇತನಾದ ಶ್ರೀರಂಗನಾಥ-ನನ್ನು ಕಣ್ಣಾರೆ ಕಂಡು ಅವನ ದಿವ್ಯ ಮಂಗಳ ವಿಗ್ರಹದ ಸೊಬಗನ್ನೂ, ಅವನ ಕಲ್ಯಾಣಗುಣಗಳನ್ನೂ ಅನುಭವಿಸುತ್ತಾ, ಆ ದಿವ್ಯ ದಂಪತಿಗಳಿಗೆ ಮಂಗಳಾಶಾಸನ-ವನ್ನು ಮಾಡಿ, ಅವನ ಅಡಿದಾವರೆಗಳಲ್ಲಿ ತಮಗೆ ನಿರಂತರವಾದ ಭಗವದನುಭವರಸ-ಪರೀವಾಹ ಉಂಟಾಗಬೇಕೆಂದೂ ಶರಣಾಗತಿ ಮಾಡುತ್ತಾರೆ. ಬಳಿಕ ನಿರಂತರವಾಗಿ ಅವನನ್ನೇ ಚಿಂತಿಸುತ್ತಾ ಅವನ ವಿಭವಾವತಾರಗಳ ನಾನಾ ಲೀಲಾಚೇಷ್ಟಿತಗಳನ್ನು ಸ್ಮರಣೆ ಮಾಡಿಕೊಂಡು, ಅವನಲ್ಲಿ ವಿಶೇಷವಾದ ವ್ಯಾಮೋಹಕ್ಕೆ ಒಳಗಾಗಿ, ಅವ-ನೊಡನೆ ತಾವೂ ಅವನ ಲೀಲಾಚೇಷ್ಟಿತಗಳನ್ನು ಅನುಭವಿಸಬೇಕೆಂದೂ, ಅವನ ಗುಣಾನುಭವದಿಂದ ಸ್ವತಃ ನರ್ತನ ಮಾಡುತ್ತಾ, ಅವನನ್ನು ಅವನ ನಾನಾ ನಾಮ ಗಳಿಂದ "ಕಮಲನಯನ! ವಾಸುದೇವ! ವಿಷ್ಣೋ! ಧರಣಿಧರ! ಅಚ್ಯುತ! ಶಂಖಚಕ್ರಪಾಣೇ! ಭವಶರಣಂ!"— ಎಂದು ಕರೆಯುತ್ತಾ, "ನಾರಾಯಣಾ! ಓ ಮಣಿವಣ್ಣಾ ನಾಕಣೈಯಾಯ್ ವಾರಾಯ್"—ಎಂದು ತಮ್ಮಲ್ಲಿಗೆ ಬರಬೇ-ಕೆಂದು ಸ್ವಾಗತಿಸುತ್ತಾ, ತಮ್ಮಲ್ಲಿಗೆ ಆ ಕೂಡಲೇ ಬಾರದಿದ್ದಾಗ, ಅಯ್ಯೋ! ನಮ್ಮಲ್ಲಿಗೆ ಬಂದು ಅನುಗ್ರಹಿಸಬಾರದೇ ಎಂದು ಕ್ಲೇಶಪಡುತ್ತಿರುವ ಭಕ್ತರುಗಳೇ ಭಗವಂತನ ನಿಜವಾದ ಭಕ್ತರುಗಳು. ಅಂತಹ ಭಕ್ತರುಗಳ ಗೋಷ್ಠಿಯನ್ನು ನಾವು ಕಾಣುವುದಾದರೆ, ಅದೇ ನಾವು ಕಣ್ಣುಗಳನ್ನು ಹೊಂದಿರುವುದಕ್ಕೆ ಸಾರ್ಥಕವಾದುದು—ಎಂದು ಭಾಗವತರ ದರ್ಶನವೇ ನಮಗೆ ಪರಮಭಾಗ್ಯವೆಂದು ಆಳ್ವಾರ್‌ರವರು ಇಲ್ಲಿ ತಿಳಿಸಿದ್ದಾರೆ. ॥೧॥

**ಶೋಡುಲಾಮಲರ್ ಮಂಗೈ ಶೋಳಿಕ್ಕೈ ಶೋಯ್‌ನ್ದದುಮ್**

**ಶುಡರ್ ವಾಳಿಯಾಲ್,**

**ನೀಡುಮಾಮರಮ್ ಶೆಟ್ರದುಮ್ ನಿರೈಮೇಮ್‌ತ್ತದುಂ ಇನ್ನೈಯೇ ನಿನ್ನೈನ್ದು,**

ಆಡಿಪ್ಪಾಡಿ ಅರಂಗವ್ನೋ ! ಎನ್ರಳೈಕ್ಕುಂ ತೊಂಡರಪ್ಪೊಡಿ
ಆಡನಾಂಪೆರಿಲ್, ಕಂಗೈನೀರ್‌ಕುಡೈನ್ದಾ ವೇಟ್ಕೈಯೆನ್ನಾವದೇ ॥೨॥

**ತೋಡುಉಲಾವ್** = ಕೇಸರಗಳು ಅಧಿಕವಾಗಿ ಪ್ರಕಾಶಿಸುವ, **ಮಲರ್** = ತಾವರೆಯ ಹೂವಿನಲ್ಲಿ, **ಮಂಗೈ** = ಅವತರಿಸಿದ ಮಹಾಲಕ್ಷ್ಮಿಯಾದ ಸೀತೆಯ, **ತೋಳಿಣೈ** = ತೋಳುಗಳೊಡನೆ, **ತೋಯ್‌ನ್ದದುವ್** = ಸಂಶ್ಲೇಷ ಹೊಂದಿದುದೂ, **ಶುಡರ್** = ತೇಜಸ್ಸಿನಿಂದ ಕೂಡಿದ, **ವಾಳಿಯಾಲ್** = ಬಾಣ ವಿಶೇಷದಿಂದ, **ನೀಡು** = ಮಹತ್ತರವಾದ, **ಮಾಮರಮ್** = ಸಪ್ತ ಸಾಲವೃಕ್ಷಗಳನ್ನೂ, **ಶೆಟ್ರದುಂ** = ಒಂದೇ ಸಮಯದಲ್ಲಿ ಭೇದಿಸಿದುದೂ, **ನಿರೈ** = ಹಸುಗಳ ಸಮೂಹವನ್ನು, **ಮೇಯ್‌ತ್ತದುವ್** = ಮೇಯಿಸಿದುದೂ, **ಇನ್ನೈಯೇ** = ಇದೇ ಮೊದಲಾದ ಭಗವಂತನ ಗುಣಗಳನ್ನು. **ನಿನ್ನೈನ್ದು** = ಸ್ಮರಣೆಮಾಡಿಕೊಂಡು, **ಆಡಿ** = ಸಂಭ್ರಮದಿಂದ ನರ್ತನಮಾಡುತ್ತಾ, **ಪಾಡಿ** = ಎಲ್ಲೆಯಿಲ್ಲದ ಆನಂದದಿಂದ ಹಾಡುತ್ತಾ, **ಓಅರಙ್ಗಾ ! ಎನ್ರು** = 'ಎಲೈ !' ರಂಗನಾಥನೇ-ಎಂದು, **ಅಳೈಕುಮ್** = ಕೂಗಿಡುವ, **ತೊಂಡರ್** = ದಾಸಭೂತರಾದ ಶ್ರೀ ವೈಷ್ಣವರ, **ಅಡಿಪ್ಪೊಡಿ** = ತಿರುವಡಿ ಧೂಳಿನಲ್ಲಿ, **ನಾಮ್** = ನಾವು, **ಆಡಪ್ಪೆರಿಲ್** = ಅವಗಾಹನಮಾಡುವ ಭಾಗ್ಯವನ್ನು ಪಡೆದರೆ, **ಗಂಗೈನೀರ್** = ಗಂಗಾತೀರ್ಥದಲ್ಲಿ, **ಕುಡೈನ್ದು** = ಅವಗಾಹನಮಾಡಿ, **ಆಡುಮ್** = ಸ್ನಾನಮಾಡುವುದರಿಂದುಂಟಾಗುವ **ವೇಟ್ಕೈ** = ಆಸೆಯಾದರೋ, **ಎನ್ ಆವತು** = ಯಾವ ಪ್ರಯೋಜನವನ್ನು ತಾನೇಉಂಟುಮಾಡುತ್ತದೆ.

**"ದೇವತ್ವೇ ದೇವದೇಹೇಯಂ ಮನುಷ್ಯತ್ವೇ ಚ ಮಾನುಷೀ ।**
**ವಿಷ್ಣೋ ದೇಹಾನುರೂಪಾಂ ವೈ ಕರೋತ್ಯೇ ಷಾತ್ಮನಸ್ತನೂಮ್ ॥**
**ರಾಘವತ್ವೇ ಭವೇತ್ಸೀತಾ ರುಕ್ಮಿಣೀ ಕೃಷ್ಣ ಜನ್ಮನೀ ।**
**ಅನ್ಯೇಷು ಚಾವತಾರೇಷು ವಿಷ್ಣೋಃ ಶ್ರೀರನಪಾಯಿನೀ ॥"—**

ಎಂದು ಹೇಳುವಂತೆ, ಕೇಸರಗಳು ಅಧಿಕವಾಗಿ ಪ್ರಕಾಶಿಸುವ ತಾವರೆಯ ಹೂವಿನಲ್ಲಿ ಅವತರಿಸಿದ ಮಹಾಲಕ್ಷ್ಮಿಯಾದರೋ, ಪರಮಾತ್ಮನು ಶ್ರೀರಾಮಚಂದ್ರನಾಗಿ ಅವತರಿಸಿದಾಗ, ಸೀತಾದೇವಿಯಾಗಿ ಅವತರಿಸಿದಳು. ಆಗ ಅವಳನ್ನು ಪಡೆಯುವ ಸಲುವಾಗಿ ಶಿವಧನುರ್ಭಂಗವೆಂಬ ಒಂದು ಕನ್ಯಾಶುಲ್ಕ ವ್ಯಾಜ್ಯದಿಂದ ಆಕೆಯನ್ನು ವಿವಾಹವಾಗಿ ಅವಳ ತೋಳುಗಳ ಸಂಶ್ಲೇಷವನ್ನು ಪರಮಾತ್ಮನು

ಪಡೆದನು. ಮುಂದೆ ಸೀತೆಯನ್ನು ರಾವಣನು ಅಪಹರಿಸಿಕೊಂಡು ಹೋದಾಗ, ಆಕೆಯ ವಿರಹ ವ್ಯಥೆಯಲ್ಲಿ ತೊಳಲುತ್ತಾ, ಆಕೆಯನ್ನು ಪಡೆಯಬೇಕೆಂದು, "ಲೋಕನಾಥಃ ಪುರೋ ಭೂತ್ವಾ ಸುಗ್ರೀವಂ ನಾಥಮಿಚ್ಛತಿ"— ಎಂದು ಲಕ್ಷ್ಮಣನು ಹೇಳಿದಂತೆ ಕಪಿಗಳ ಅಧಿಪತಿಯಾದ ಸುಗ್ರೀವನೊಡನೆ ಅವನ ಅಣ್ಣನಾದ ವಾಲಿಯನ್ನು ಕೊಂದು, ಅವನ ರಾಜ್ಯವನ್ನೂ ಪತ್ನಿಯನ್ನೂ ಮತ್ತೆ ಅವನು ಪಡೆಯು-ವಂತೆ ಮಾಡುತ್ತೇನೆಂದು ಮಾತುಕೊಟ್ಟು ಸ್ನೇಹ ಬೆಳೆಸಿಕೊಂಡನು. ಆಗ ಆ ಸುಗ್ರೀವನಾದರೋ ವಾಲಿಯ ಪರಾಕ್ರಮವನ್ನೂ, ಶ್ರೀರಾಮಚಂದ್ರನ ಸೌಕುಮಾರ್ಯ-ವನ್ನೂ ಕಂಡು, ಇವನು ವಾಲಿಯನ್ನು ಕೊಲ್ಲಲಾರನು– ಎಂದು ಸಂದೇಹಕ್ಕೊಳ-ಗಾದಾಗ, ಶ್ರೀರಾಮನು ತನ್ನ ತೇಜಸ್ಸೇ ಮೂರ್ತಿವೆತ್ತಂತಿದ್ದ ತೀಕ್ಷ್ಣವಾದ ಒಂದೇ ಬಾಣದಿಂದ ಸಪ್ತ ಸಾಲವೃಕ್ಷಗಳನ್ನೂ ಭೇದಿಸಿ ತನ್ನ ವೀರ್ಯ–ಪರಾಕ್ರಮಗಳನ್ನು ಪ್ರಕಾಶಪಡಿಸಿಕೊಂಡನು.

ಅಂತೆಯೇ ಪರತ್ವಗುಣದಿಂದ ಕೂಡಿದ ಪರಮಾತ್ಮನು, ತನ್ನ ಸೌಲಭ್ಯ ಗುಣ-ದಿಂದ ಗೊಲ್ಲರ ಜಾತಿಯಲ್ಲಿ ಅವತರಿಸಿ ಪಶುಗಳನ್ನು ಮೇಯಿಸಿದನು—ಎಂದು ಇದೇ ಮೊದಲಾದ ಅವನ ಗುಣಗಳನ್ನೇ ನೆನೆನೆನೆದು ಪರವಶರಾಗಿ ಸಂಭ್ರಮದಿಂದ ನರ್ತನ ಮಾಡುತ್ತಾ ಎಲ್ಲೆಯಿಲ್ಲದ ಆನಂದದಿಂದ ಹಾಡುತ್ತಾ, "ಎಲೈ ! ರಂಗನಾಥನೇ !" —ಎಂದು ಅವನನ್ನು ಸಂಬೋಧಿಸಿ ಕೂಗುತ್ತಾ ತಮ್ಮಲ್ಲಿಗೆ ಬರಬೇಕೆಂದು ಕರೆಯುವ ಭಕ್ತರೇ– ನಿಜವಾದ ಭಗವಂತನಿಗೆ ದಾಸಭೂತರಾದ ಶ್ರೀವೈಷ್ಣವರು.

**"ಮಾಯನ್ ತಮರಡಿ ನೀರುಕೊಂಡು ಅಣಿಯುಮುಯಲಿಲ್ ಮಟ್ರಿಲ್ಲೈ ಕಂಡೀರಿವ್ವಣಂಗುಕ್ಕೆ"**—ಎಂದು ಹೇಳುವಂತೆ, ಭಾಗವತರ ಶ್ರೀಪಾದ ಧೂಳಿಯಾದರೋ ಸರ್ವವಿಧವಾದ ಆಧಿವ್ಯಾಧಿಯನ್ನೂ ಹೋಗಲಾಡಿಸುವ ಸರ್ವೋತ್ತಮ ಭೇಷಜವಾದುದರಿಂದಲೂ ಮತ್ತು "ಸಮಸ್ತ ಸಂಪತ್ ಸಮವಾಪ್ತಿ-ಹೇತವಃ ಸಮುತ್ಥಿತಾಪತ್ಕುಲಧೂಮ ಕೇತವಃ । ಅಪಾರಸಂಸಾರಸಮುದ್ರ ಸೇತವಃ ಪುನಂತು ಮಾಂ ಬ್ರಾಹ್ಮಣಪಾದಪಾಂಸವಃ ॥"— ಎಂದು ಹೇಳುವಂತೆ ಬ್ರಾಹ್ಮಣರ ಪಾದಧೂಳಿಯಾದರೋ, ಸರ್ವವಿಧವಾದ ಐಶ್ವರ್ಯವನ್ನೂ ಉಂಟು-ಮಾಡುವ, ವಿಪತ್ತುಗಳ ಸಮೂಹವನ್ನೇ ನಾಶಪಡಿಸುವ ಧೂಮಕೇತುವಿನಂತಿರುವ, ಮತ್ತೊಂದು ದಡವೇ ಕಾಣದ ಸಂಸಾರಸಾಗರವನ್ನು ದಾಟಲು ಸೇತುವೆಯಂತಿರು-ತ್ತದೆ. ಆದುದರಿಂದ ಮೇಲೆ ಹೇಳಿರುವಂತಿರುವ ಭಗವದ್ದಾಸರ ಪಾದಧೂಳಿನಲ್ಲಿ ಸ್ನಾನಮಾಡುವ ಭಾಗ್ಯವು ನಮಗೆ ಲಭಿಸಿದುದೇ ಆದರೆ, ಅದು ಗಂಗಾಸ್ನಾನ ಫಲಕ್ಕಿಂತಲೂ ಮಿಗಿಲಾದುದು. ಆದುದರಿಂದ, ಗಂಗಾತೀರ್ಥದಲ್ಲಿ ಅವಗಾಹನೆಮಾಡಿ

ಸ್ನಾನ ಮಾಡುವುದರಿಂದುಂಟಾಗುವ ಆಶಾಪೂರ್ತಿಯು ಯಾವ ಪ್ರಯೋಜನವನ್ನು ತಾನೇ ಉಂಟುಮಾಡೀತು ? ಅಂದರೆ ಗಂಗಾಸ್ನಾನ ಮಾಡಬೇಕೆಂಬ ಆಸೆಯು ಬೇಡವೆಂದು ಹೇಳಿದಂತಾಯಿತು. ಆದರೆ, ಇಲ್ಲಿ ಗಂಗಾಸ್ನಾನ ನಿಷಿದ್ಧವಾದುದೆಂಬ ಆಶಯುವಲ್ಲ. ಭಾಗವತರ ಶ್ರೀಪಾದಧೂಳಿ ಸ್ನಾನವು- ಗಂಗಾಸ್ನಾನ ಫಲಕ್ಕೆ ಸಮಾನವಾದುದೆಂಬ ಅಭಿಪ್ರಾಯದಿಂದ ಆಳ್ವಾರರು ಹೀಗೆ ಹೇಳಿದ್ದಾರೆ. ||೨||

**ಏರಡರ್ತದುಂ ಏನಮಾಯ್ ನಿಲಂಕೀಂಡದುಂ ಮುನ್ನಿರಾಮನಾಯ್**
**ಮಾರಡರ್ತದುಂಮಣ್ಣಳನ್ದದುಂಶೊಲ್ಲಿಪ್ಪಾಡಿ ವಣ್ ಪೊನ್ನಿನ್ ಪ್ಪೇರಾರುಪೋಲ್**
**ವರುಂ ಕಣ್ಣನೀರ್ ಕೊಂಡು ಅರಂಗನ್ ಕೋಯಿಲ್ ತಿರು ಮುಟ್ರಮ್,**
**ಶೇರುಶೆಯ್ ತೊಂಡರ್ ಶೇವಡಿಚ್ಚೆಟ್ರಮ್ ಶೇರೆನ್ ತೆನ್ನಿಕ್ಕಣಿವನೇ** ||೨||

**ಏರು**= ಸಪ್ತ ವೃಷಭಗಳನ್ನು, **ಅಡರ್ತ್ತದುಮ್** = (ನಪ್ಪಿನ್ನೈಗಾಗಿ) ಅಡಗಿಸಿದುದೂ, **ಏನಮಾಯ್**= ವರಾಹನಾಗಿ ಅವತರಿಸಿ, **ನಿಲಮ್**=(ಸಮುದ್ರದ ಅಡಿಯಲ್ಲಿ ಕೆಸರಿನಲ್ಲಿ ಹೂತಿದ್ದ) ಭೂಮಿಯನ್ನು, **ಕೀಂಡದುಮ್**= ಕೆಸರಿನಿಂದ ಬೇರ್ಪಡಿಸಿದುದೂ, **ಮುನ್**= ಹಿಂದೊಮ್ಮೆ ರಾವಣನಿಂದ (ದುಷ್ಟ ಕ್ಷತ್ರಿಯರಿಂದ) ಲೋಕಕ್ಕೇ ಹಿಂಸೆಯುಂಟಾದಾಗ, **ರಾಮನಾಯ್**= ಶ್ರೀರಾಮಚಂದ್ರನಾಗಿ (ಪರಶುರಾಮನಾಗಿ) ಅವತರಿಸಿ, **ಮಾರು**= ಶತ್ರುವಾದ ರಾವಣನನ್ನು (ದುಷ್ಟ-ಕ್ಷತ್ರಿಯರನ್ನು) **ಅಡರ್ತ್ತತುಮ್**= ಅಡಗಿಸಿದುದೂ ಮತ್ತು **ಮಣ್**= ಮಹಾ-ಬಲಿಯ ವಶವಾಗಿದ್ದ ಭೂಮಿಯನ್ನು, **ಅಳನ್ದದುಂ**= ಅಳೆದುಕೊಂಡು ತನ್ನ ವಶವಾಗಿಸಿಕೊಂಡು ತನ್ನಲ್ಲಿ ಶರಣಾಗತನಾದ ಇಂದ್ರನಿಗೆ ಕೊಟ್ಟ ಬಗೆಯನ್ನೂ, **ಶೊಲ್ಲಿಪ್ಪಾಡಿ**= ಇದೇ ಮೊದಲಾದ ಭಗವಂತನ ಲೀಲಾಚೇಷ್ಟಿತಗಳನ್ನು ಹೇಳುತ್ತಾ ಅವನ ಮೇಲಿನ ಪ್ರೀತಿ ಪ್ರಕರ್ಷದಿಂದ ಹಾಡುತ್ತಾ, **ವಣ್**= ಅತ್ಯಧಿಕವಾದ ಪ್ರವಾಹದಿಂದ ಕೂಡಿದ, **ಪೆರು**= ದೊಡ್ಡದಾದ, **ಪೊನ್ನಿ ಆರುಪೋಲ್**= ಕಾವೇರಿ ನದಿಯಂತೆ, **ವರುಂ**= ಪ್ರವಹಿಸುವ, **ಕಣ್ಣನೀರ್ ಕೊಂಡು**= ಆನಂದ ಬಾಷ್ಪದ ಕಣ್ಣೀರಿನಿಂದ, **ಅರಂಗನ್**= ಶ್ರೀರಂಗನಾಥನ, **ಕೊಯಿಲ್**= ದೇವಸ್ಥಾನದ, **ತಿರುಮುಟ್ರಂ**= ಪವಿತ್ರವಾದ ಮುಂದುಗಡೆಯ ಆವರಣವನ್ನು, **ಶೇರಶೆಯ್**= ಕೆಸರಾಗುವಂತೆ ಮಾಡುವ, **ತೊಂಡರ್**= ದಾಸಭೂತರಾದ ಶ್ರೀವೈಷ್ಣವರ, **ಶೇಅಡಿ**=ತಿರುವಡಿಗಳಿಂದ ತುಳಿಯಲ್ಪಟ್ಟ, **ಶೆಳುಶೇರು**= ಸುಂದರವಾದ ಕೆಸರನ್ನು **ಎನ್ ಶೆನ್ನಿಕ್ಕಣಿವರ್**= ನನ್ನ ಶಿರಸ್ಸಿನಲ್ಲಿ ಧರಿಸುತ್ತೇನೆ.

ಜನಕಮಹಾರಾಜನು ಸೀತಾ ವಿವಾಹಕಾಲದಲ್ಲಿ, ಶಿವಧನುರ್ಭಂಗ ಮಾಡುವು-ದನ್ನು ಕನ್ಯಾಶುಲ್ಕವಾಗಿಟ್ಟಂತೆ, ಕುಂಭನೆಂಬುವನು ತನ್ನ ಮಗಳಾದ ನಪ್ಪಿನ್ನೈಯ ವಿವಾಹಕಾಲದಲ್ಲಿ ಬಲಿಷ್ಠವಾದ ಕೊಬ್ಬಿದ ಏಳು ಗೂಳಿಗಳ ದರ್ಪವನ್ನು ಅಡಗಿಸುವಿಕೆಯನ್ನು ಕನ್ಯಾಶುಲ್ಕವಾಗಿಟ್ಟಿದ್ದನು. ಕೃಷ್ಣಾವತಾರ ಕಾಲದಲ್ಲಿ ಭಗವಂತನು ತನ್ನನ್ನೇ ವಿವಾಹವಾಗಬೇಕೆಂದಿದ್ದ ಆ ನಪ್ಪಿನ್ನೈಯನ್ನು ವಿವಾಹವಾಗಲು ಆ ಏಳು ಗೂಳಿಗಳ ದರ್ಪವನ್ನೂ ಅಡಗಿಸಿ ಆಕೆಯನ್ನು ವಿವಾಹವಾದನು. ಅಂತೆಯೇ ತನ್ನ ಪತ್ನಿಯಾದ ಭೂದೇವಿಯನ್ನು ಹಿರಣ್ಯಾಕ್ಷನು ಅಪಹರಿಸಿಕೊಂಡು ಹೋಗಿ ಸಮುದ್ರದ ಅಡಿಯ ಕೆಸರಿನಲ್ಲಿ ಹೂತಿಟ್ಟಿದ್ದನು. ಆಗ ಆಕೆಯ ಪ್ರಾರ್ಥನೆಯ ಮೇರೆಗೆ ಒಂದು ಹಂದಿಯ ರೂಪವನ್ನು ಪಡೆದು ಹಿರಣ್ಯಾಕ್ಷನನ್ನು ಸಂಹರಿಸಿ, ಭೂಮಿಯನ್ನು ಮೇಲಕ್ಕೆತ್ತಿ ಸಂಹರಿಸಿದನು. ಹಿಂದೊಂಮ್ಮೆ ಇಡೀ ಲೋಕಕ್ಕೆ ಕಂಟಕಪ್ರಾಯರಾದ ದುಷ್ಟ ಕ್ಷತ್ರಿಯರ ಸೊಕ್ಕನ್ನು ಮುರಿಯಲು ಪರಶುರಾಮನಾಗಿ ಅವತರಿಸಿ, ಅವರ ದರ್ಪವನ್ನಡಗಿಸಿ ಶಿಷ್ಟರನ್ನು ರಕ್ಷಿಸಿದನು. ಅಂತೆಯೇ ಶ್ರೀರಾಮಾವತಾರ ಕಾಲದಲ್ಲಿ ಲೋಕಕಂಟಕನಾದ ರಾವಣನನ್ನು ಕೊಂದು, ತನ್ನಲ್ಲಿ ಶರಣಾಗತರಾದ ಮಹರ್ಷಿ-ಗಳಿಗೂ ವಿಭೀಷಣಾದಿಗಳಿಗೂ ರಕ್ಷಣೆಯನ್ನು ನೀಡಿದನು. ಅಹಂಕಾರದಿಂದ ಮೆರೆದ ಇಂದ್ರನ ರಾಜ್ಯವನ್ನು ಮಹಾಬಲಿಯು ವಶಪಡಿಸಿಕೊಂಡಾಗ, ತನ್ನ ರಾಜ್ಯವನ್ನು ತನಗೆ ಕೊಡಿಸಿಕೊಡಬೇಕೆಂದು ಇಂದ್ರನು ಶರಣಾಗತಿ ಮಾಡಿದಾಗ, ಭಗವಂತನು ವಾಮನನಾಗಿ ಅವತರಿಸಿ, ಮಹಾಬಲಿಯಿಂದ ಮೂರು ಹೆಜ್ಜೆಯಿಡುವಷ್ಟು ಜಾಗವನ್ನು ಭಿಕ್ಷೆ ಬೇಡಿ, ತ್ರಿವಿಕ್ರಮನಾಗಿ ಬೆಳೆದು ಇಡೀ ಬ್ರಹ್ಮಾಂಡವನ್ನೇ ತನ್ನ ಕಾಲಿನಿಂದ ಅಳೆದುಕೊಂಡು, ತನ್ನ ವಶಮಾಡಿಕೊಂಡು, ತನ್ನಲ್ಲಿ ಶರಣಾಗತನಾದ ಇಂದ್ರನಿಗೆ ಅವನ ರಾಜ್ಯವನ್ನು ಹಿಂತಿರುಗಿಸಿಕೊಟ್ಟನು—ಎಂಬ ಇದೇ ಮೊದಲಾದ ಭಗವಂತನಾದ ಶ್ರೀರಂಗನಾಥನ ಆಶ್ರಿತವ್ಯಾಮೋಹ ಮತ್ತು ಶರಣಾಗತರಕ್ಷಣ ಗುಣವನ್ನು ಹೇಳುತ್ತಾ ಪ್ರೇಮಪ್ರಕರ್ಷದಿಂದ ಹಾಡುತ್ತಾ (ಶ್ರೀರಂಗನ ದರ್ಶನಮಾಡುತ್ತಾ) ಆನಂದಾನುಭವದಿಂದ ಕಾವೇರಿಯಪ್ರವಾಹದಂತೆಕಣ್ಣೀರ್ಗರೆಯುತ್ತಾ, ಶ್ರೀರಂಗನಾಥನ ದೇವಾಲಯದ ಆವರಣದಲ್ಲೆಲ್ಲಾ ಕೆಸರುಂಟುಮಾಡಿ, ತಾವೂ ಅದರಲ್ಲಿ ನಡೆದುಬರುವ ಭಗವಂತನ ದಾಸಭೂತರಾದ, ಆ ಭಗವದ್ಭಕ್ತರ ಪಾದಸ್ಪರ್ಶದಿಂದ ಪವಿತ್ರೀಕೃತವಾದ ಸುಂದರವಾದ ಆ ಕೆಸರನ್ನು ನನ್ನ ತಲೆಯಮೇಲೆ ಧರಿಸುತ್ತೇನೆ— ಎಂದು ಆಳ್ವಾರವರು ಈ ಪಾಶುರದಲ್ಲಿ, ತಾವು ಚಕ್ರವರ್ತಿಯಾಗಿ ಕಿರೀಟದಾರಿಗಳಾಗಿದ್ದರೂ ಅದರಿಂದ ತಮಗೆ ಹಿರಿಮೆಯಿಲ್ಲವೆಂದೂ, ಅದೇ ಆ ಕಿರೀಟದ ಸ್ಥಾನದಲ್ಲಿ ಭಾಗವತರ ಪಾದಸ್ಪರ್ಶದಿಂದ ಪೂತವಾದ ಕೆಸರನ್ನು ಧರಿಸುವುದೇ ನಿಜವಾಗಿಯೂ ತನ್ನ ಶಿರಸ್ಸಿಗೆ ಭೂಷಣವೆಂದೂ ಹೇಳಿಕೊಂಡಿದ್ದಾರೆ. ॥೨॥

**ತೋಯ್‍ತ್ತ ಕಣ್‍ತಯಿರ್‍ವೆಣ್ಣೆಯ್ ಪಾಲುಡ ನುಂಡಲುಮುಡನ್ರಾಯ್‍ಚ್ಚಿ-
ಕಂಡು, ಆರ್ತತೋಳುಡೈಯೆಂಬಿರಾನೆನ್ರರಂಗನುಕ್ಕು ಅಡಿಯಾರ್‍ಕಳಾಯ್
ನಾತ್ತತ್ತಳುಂಬೆಳ ನಾರಣಾವೆನ್ರಳೈತ್ತು ಮೆಯ್‍ತ್ತಳುಮ್ಬ ತೊಳುದೇತ್ತಿ
ಇನ್ಬುರುಂ ತೊಂಡರ್ ಶೇವಡಿ ಯೇತ್ತಿ ವಾಳ್‍ತ್ತುಂ ಎನ್ನೆಂಜಮೇ ॥೪॥**

**ತೋಯ್‍ತ್ತ**= ಹೆಪ್ಪುಹಾಕಿದ, **ತಣ್**= ತಣ್ಣಗಿರುವ, **ತಯಿರ್**= ಮೊಸರನ್ನು, **ವೆಣ್ಣೈ**= ಬೆಣ್ಣೆಯನ್ನೂ, **ಪಾಲ್**= ಹಾಲನ್ನೂ, **ಉಡನ್**= ಒಟ್ಟಿಗೆ ಒಂದೇಸಮಯದಲ್ಲಿ, **ಉಂಡಲುಂ**= ಭುಜಿಸಿದ ಸಮಯದಲ್ಲಿ,**ಆಯ್‍ಚ್ಚಿ**= ಗೊಲ್ಲಗಿತ್ತಿಯಾದ ಯಶೋದೆಯು, **ಕಂಡು**= ನೋಡಿ, **ಉಡನ್ರು**= ಕೋಪಿಸಿ-ಕೊಂಡು, **ಆರ್‍ತ್ತ**= ಹಿಡಿದು ಕಟ್ಟಿಹಾಕಿದ, **ತೋಳುಡೈ**= ತೋಳುಗಳನ್ನು ಹೊಂದಿರುವ, **ಎಂಬಿರಾನ್**= (ಆದರಿಂದಲೇ) ನನ್ನನ್ನು ಅನನ್ಯಾರ್ಹ ಶೇಷನ-ನ್ನಾಗಿಸಿದ, **ಎನ್**= ನನಗೆ ಶೇಷಿಯಾದ, **ಅರಂಗನುಕ್ಕು**= ರಂಗನಾಥನಿಗೆ, **ಅಡಿಯಾರ್‍ಗಳಾಯ್**= ಶೇಷಭೂತರಾಗಿ, **ನಾ**= ನಾಲಿಗೆಯಾದರೋ, **ತಳುಮ್ಬೆಳ**= ಶಕ್ತಿಹೀನವಾಗುವಂತೆ, **ನಾರಣಾವೆನ್ರು**= 'ನಾರಾಯಣ !' ಎಂದು (ಅವನ ಹಲವಾರು ನಾಮಗಳನ್ನು) **ಅಳೈತ್ತು**= ಉಚ್ಚರಿಸುತ್ತಾ, **ಮೆಯ್**= ಶರೀರವಾದರೋ, **ತಳುಮ್ಬ**= ಶಕ್ತಿಗುಂದುವಂತೆ, **ತೊಳುದು**= ಪ್ರಣಾಮಮಾಡಿ, **ಏತ್ತಿ**= ಅವನನ್ನೇ ಸ್ತೋತ್ರಮಾಡಿ, **ಇನ್ಬುರುಮ್**= ನಿರಂತರ ಆನಂದವನ್ನು ಹೊಂದಿರುವ, **ತೊಂಡರ್**= ಶ್ರೀವೈಷ್ಣವ ಭಕ್ತರುಗಳ, **ಶೇಅಡಿ**= ಶ್ರೀಪಾದ-ಗಳನ್ನು, **ಎನ್‍ನೆಂಜಮ್**= ನನ್ನ ಮನಸ್ಸಾದರೋ, **ಏತ್ತಿ**= ಸೋತ್ರಮಾಡಿ **ವಾಳ್‍ತ್ತುಂ**= ಮಂಗಳಾ ಶಾಸನವನ್ನು ಮಾಡುತ್ತದೆ. ॥೪॥

ಶ್ರೀರಂಗನಾಥನು ಕೃಷ್ಣಾವತಾರ ಕಾಲದಲ್ಲಿ, ಬಾಲ್ಯದಲ್ಲಿ ಅವನ ಮನೆಯಲ್ಲಿ ಅವನ ತಾಯಿಯಾದ ಯಶೋದೆಯು ಹೆಪ್ಪುಹಾಕಿ ಇಟ್ಟಿದ್ದ ತಣ್ಣಗಿದ್ದ ಮೊಸರನ್ನೂ, ಕಡೆದು ತೆಗೆದಿಟ್ಟಿದ್ದ ಹಾಲನ್ನೂ, ಒಂದಕ್ಕೊಂದಕ್ಕೆ ಮಧ್ಯದಲ್ಲಿ ಕಾಲಾವಕಾಶ-ವಿಲ್ಲದಂತೆ ಎಲ್ಲವನ್ನೂ ಒಟ್ಟಿಗೆ ಭುಜಿಸಿದುದನ್ನು ಅವನ ತಾಯಿಯಾದ ಯಶೋದೆಯು ಕಂಡಳು. ಆಗ ಅವಳಿಗೆ ಈತ ತಿಂದುದರಲ್ಲಿ ದುಃಖವಿಲ್ಲ. ಆದರೆ ಅಷ್ಟು ಚಿಕ್ಕ ಮಗು ಎಲ್ಲವನ್ನೂ ಏಕಕಾಲದಲ್ಲಿ ತಿಂದು ಎಲ್ಲಿ ಅಜೀರ್ಣವಾಗಿ ಆರೋಗ್ಯ ಕೆಟ್ಟು ಹೋದೀತೋ–ಎಂದು, ಅವನ ಮೇಲೆ ಅತಿಯಾದ ಕೋಪದಿಂದ ಕೂಡಿ ಓಡಿಬಂದು,

ಆತನನ್ನು ಹಿಡಿದುಕೊಂಡು ಅವನ ತೋಳುಗಳನ್ನು ಕಟ್ಟಿಹಾಕಿದಳು. ಈ ವೃತ್ತಾಂತ ವನ್ನು ನೆನೆಯುವ ಭಾಗವತರಾದರೋ– ಲೀಲಾವಿಭೂತಿ ಮತ್ತು ನಿತ್ಯವಿಭೂತಿ ಎರಡಕ್ಕೂ ನಾಯಕನಾಗಿರುವ ಪರಮಪದದಲ್ಲಿ ನಿತ್ಯ ಮುಕ್ತರಿಂದ ಆರಾಧಿಸಲ್ಪಡು–ತ್ತಿರುವ ನಮ್ಮ ಸ್ವಾಮಿಯು, ಸೌಲಭ್ಯ ಸೌಶೀಲಾದಿಗುಣಗಳು ಪ್ರಕಾಶಿಸಲೆಂದು, ಗೊಲ್ಲಗೇರಿಯಲ್ಲಿ ಅವತರಿಸಿ, ಅಲ್ಲಿ ಒಬ್ಬ ಗೊಲ್ಲತಿಯಿಂದ ಕಟ್ಟಲ್ಪಟ್ಟನಲ್ಲಾ—ಅವನ ಸೌಶೀಲ್ಯಾದಿ ಗುಣಗಳು ಎಂತಹುದು'– ಎಂದು ಪರಮಾತ್ಮನ ಸೌಲಭ್ಯ ಸೌಶೀಲ್ಯ ಗುಣಗಳಿಗೆ ಮನಸೋತು, ಆ ಗುಣಗಳನ್ನೇ ಹಾಡುವಂತೆ ಮಾಡುವ ತನ್ನ ಗುಣ–ಗಳಿಂದಲೇ ನನ್ನ ಮನಸ್ಸನ್ನೂ ಸೆಳೆದು, ನನ್ನನ್ನು ಅನನ್ಯಾರ್ಹನನ್ನಾಗಿಸಿದ, ನನಗೆ ಶೇಷಿ ಯಾದ ಆ ರಂಗನಾಥನಿಗೇ ನಾವು ದಾಸಭೂತರಾಗಿದ್ದೇವೆ–ಎಂದು ಹೇಳುತ್ತಾ, ನಾಲಿಗೆ ಯಾದರೋ ನಿರಂತರವಾಗಿ ಆತನ ನಾರಾಯಣಾದಿ ನಾಮಗಳನ್ನು ಉಚ್ಚರಿಸುತ್ತಾ ಶಕ್ತಿಗುಂದುವಂತೆಯೂ, ದೇಹವಾದರೋ ನಿರಂತರವಾಗಿ ಅವನಿಗೆ ದೀರ್ಘದಂಡ ಪ್ರಣಾಮಗಳನ್ನು ಮಾಡುತ್ತಾ ಶಕ್ತಿಗುಂದುವಂತಾಗಿ, ಅವನನ್ನು ನಿರಂತರವಾಗಿ ಸ್ತೋತ್ರ ಮಾಡುತ್ತಾ ನಿರತಿಶಯವಾದ ಆನಂದವನ್ನು ಹೊಂದಿರುತ್ತಾರೆ. ಈ ರೀತಿ ಭಗವದ್ಗುಣಾನುಭವದಲ್ಲಿ ಎಲ್ಲಾ ಕಾಲದಲ್ಲಿಯೂ ಮುಳುಗಿರುವ ಭಗವದ್ಭಕ್ತರ ಶ್ರೀಪಾದಗಳನ್ನೇ ನನ್ನ ಮನಸ್ಸು ಸ್ತೋತ್ರಮಾಡಿ ಮಂಗಳಾಶಾಸನ ಮಾಡುತ್ತದೆ. ॥೪॥

**ಪೊಯ್ ಶಿಲೈಕ್ಕುರಲೇರು ಎರುತ್ತ ಮಿರುತ್ತು ಪೋರರರ ವೀರ್ತಕೋನ್,**
**ಶೆಯ್ ಶಿಲೈಚ್ಚುಡರ್ ಶೂಳೊಳಿ ತಿಣ್ಣಮಾಮಾದಿಳ್ ತೆನ್ನರಂಗನಾವ್,**
**ಮೆಯ್ ಶಿಲೈ ಕರುಮೇಗ ಮೊನ್ರು ತನ್ನೆಂಜಿಲ್ ನಿನ್ರು ತಿಕಳಪ್ಪೋಯ್**
**ಮೆಯ್ ಶಿಲಿರ್ಪವರ್ ತಮ್ಮೈಯೇ ನಿನೈನ್ದು ಎನ್ಮನಂ ಮೆಯ್ ಶಿಲಿರ್ಕುಮೇ ॥೫॥**

ಪೊಯ್= ಕೃತ್ರಿಮವಾದ, ಶಿಲೈ=ಕೋಪವನ್ನು ಹೊಂದಿದುದಾಗಿಯೂ, **ಕುರಲ್**= ಘೋರವಾದ ಧ್ವನಿಯನ್ನೂ ಹೊಂದಿದುದಾಗಿಯೂ ಇರುವ, **ಏರು**= (ಸಪ್ತ) ವೃಷಭಗಳ, **ಎರುತ್ತಮ್** =ಹಿಣಿಲುಗಳನ್ನೂ, **ಇರುತ್ತು**= ಮುರಿದು, **ಪೋರ್**= ಯುದ್ಧೋನ್ಮುಖನಾದ, **ಅರವು**= ಕಾಳಿಂಗ ಸರ್ಪವನ್ನು, **ಈರ್ತ**= ನಿರಸನಮಾಡಿ, **ಕೋನ್**= ಈಗ ನಮ್ಮೆಲ್ಲರಿಗೂ ಸ್ವಾಮಿಯಾಗಿ, ಶಿಲೈ=ಕಲ್ಲಿನಿಂದ, **ಶೆಯ್**= ಕಟ್ಟಲ್ಪಟ್ಟ, **ಶುಡರೊಳಿ**= ಅತ್ಯಧಿಕವಾದ ತೇಜಸ್ಸಿನಿಂದ ಕೂಡಿರುವ,

**ತಿಣ್ಣಮ್** = ದೃಢವಾಗಿಯೂ, **ಮಾ** = ಎತ್ತರವಾಗಿಯೂ ಇರುವ, **ಮದಿಳ್** = (ಸಪ್ತ) **ಪ್ರಾ**ಕಾರಗಳಿಂದ, **ಶೂಳ್** = ಸುತ್ತುವರಿಯಲ್ಪಟ್ಟ, **ತೆನ್** = (ಸ್ಪೃಹಣೀಯ ವಾದ) ದಕ್ಷಿಣ ದಿಕ್ಕಿನಲ್ಲಿರುವ, **ಅರಂಗನಾಂ** = ಶ್ರೀರಂಗದಲ್ಲಿ ನಿತ್ಯ ವಾಸಮಾಡುವ ಶ್ರೀರಂಗನಾಥನ, **ಮೆಯ್** = ದೇಹದಲ್ಲಿ, ಶಿಲೈ = ಧನುಸ್ಸಿನೊಡನೆ ಕೂಡಿದ, **ಕರು** = ಕಪ್ಪಾದ, **ಮೇಗಂ ಒನ್ರು** = ಒಂದು ಮೇಘವಾದರೋ (ಇಂದ್ರನಧನುಸ್ಸಿನಂತೆ ಸುಂದರ ವಾಗಿ ಬಾಗಿರುವ ಕಣ್ಣಿನ ಮೇಲಿನ ಹುಬ್ಬುಗಳಿಂದ ಕೂಡಿ ನೀಲಮೇಘಶ್ಯಾಮನಾದ ಶ್ರೀರಂಗನಾಥನಾದರೋ) **ತನ್‌ನೆಂಜಿನ್** = ತನ್ನ ಮನಸ್ಸಿನಲ್ಲಿ, **ನಿನ್ರು** = ನಿಲೈ-ನಿಂತು, **ಪೋಯ್‌ತಿಕುಳ್** = ಅದು ಇನ್ನೂ ಅಧಿಕವಾಗಿ ಪ್ರಕಾಶಿಸಲು, (ಆ ದಿವ್ಯ ಮಂಗಳಮೂರ್ತಿಯನ್ನೇ ಧ್ಯಾನಿಸುತ್ತಾ) **ಮೆಯ್ ಶಿಲಿರ್ಪವರ್ ತಮ್ಮೈಯೇ** = ಪುಳಕಿತ ಗಾತ್ರರಾದ ಭಾಗವತರನ್ನೇ, **ನಿನೈಂದು** = ಸ್ಮರಣೆ ಮಾಡಿಕೊಂಡು, **ಎನ್‌ಮನಂ** = ನನ್ನ ಮನಸ್ಸಾದರೋ, **ಮೆಯ್‌ಶಿಲಿರ್ಕ್ಕುಮ್** = ರೋಮಾಂಚ-ಗೊಳ್ಳುತ್ತಿದೆ.

ಭಗವಂತನು ಕೃಷ್ಣಾವತಾರ ಕಾಲದಲ್ಲಿ ತನ್ನ ಭಕ್ತಳಾದ ನಪ್ಪಿನ್ನೈ ಪಿರಾಟ್ಟಿ-ಯನ್ನು ವಿವಾಹವಾಗುವ ಸಮಯದಲ್ಲಿ, ಇವನನ್ನು ಎದುರಿಸಿನಿಂತು, ಕೃತ್ರಿಮವಾದ ಕೋಪದಿಂದ ಕೂಡಿ, ಭಯಂಕರವಾಗಿ ಗುಟರುಹಾಕಿ ಕೂಗಿಡುತ್ತಿದ್ದ ಏಳು ವೃಷಭಗಳ ಹಿಣಿಲುಗಳನ್ನೂ ಮುರಿದುಹಾಕಿದನು. ಅಂತೆಯೇ ತನ್ನ ಭಕ್ತರಾದ ಗೋಪ ಬಾಲಕರ ಮತ್ತು ಗೋವುಗಳ ವಿಷಯದಲ್ಲಿ ಅಪರಾಧವನ್ನೆಸಗಿದ ಕಾಳಿಂಗನನ್ನು ದಮನಮಾಡಲು ಹೋದಾಗ, ಅವನು ಯುದ್ಧೋನ್ಮುಖನಾದರೂ ಅವನನ್ನೂ ಅಡಗಿಸಿ ತನ್ನನ್ನಾಶ್ರಯಿಸಿದವರಿಗೆ ಅಭಯಪ್ರದಾನ ಮಾಡಿ ರಕ್ಷಿಸಿದನು. ಈ ರೀತಿಯೆಲ್ಲಾ ಸಪ್ತವೃಷಭಗಳೊಡನೆ, ಕಾಳಿಂಗನೊಡನೆ ಹೋರಾಡಿದಾಗ ಆದ ಆಯಾಸವನ್ನು ಹೋಗಲಾಡಿಸಿಕೊಳ್ಳಲೆಂದೇ ಈ ಕಲಿಯುಗದಲ್ಲಿ ವಿಶೇಷವಾಗಿ ನಮ್ಮೆಲ್ಲರಿಗೂ ತನ್ನ ಅರ್ಚಾಮೂರ್ತಿ ಸ್ವರೂಪದಲ್ಲಿ ದರ್ಶನಭಾಗ್ಯವನ್ನು ಕೊಡಬೇಕೆಂದೇ ಇರುವ ನಮ್ಮ ಸ್ವಾಮಿಯು, ಶ್ರೀರಂಗ ಕ್ಷೇತ್ರದಲ್ಲಿ ಕಲ್ಲುಗಳಿಂದಲೇ ನಿರ್ಮಿತವಾಗಿ, ದೃಢವಾಗಿಯೂ ಎತ್ತರವಾಗಿಯೂ ಇದ್ದು ಪ್ರಕಾಶಮಯವಾದ ಸಪ್ತಪ್ರಾಕಾರಗಳಿಂದ ಸುತ್ತುವರಿಯ-ಲ್ಪಟ್ಟ ದೇವಸ್ಥಾನದಲ್ಲಿ ಆದಿಶೇಷನ ಮೇಲೆ ಶಯನಿಸಿಕೊಂಡು ಯೋಗನಿದ್ರೆಯಿಂದ ಕೂಡಿದ್ದಾನೆ. ಇವನ ದೇಹವಾದರೋ ನೀಲಮೇಘದಂತೆ ಕಾಂತಿಯುತವಾಗಿದೆ. ಇವನ ಮುಖಮಂಡಲದಲ್ಲಿರುವ ಬಾಗಿರುವ ಎರಡು ಹುಬ್ಬುಗಳೂ, ಮೇಘದ ಮಧ್ಯ ದಲ್ಲಿ ಕಾಣಿಸಿಕೊಳ್ಳುವ ಕಾಮನಬಿಲ್ಲಿನಂತೆ, ಪ್ರಕಾಶಮಯವಾಗಿವೆ. ಈ ರೀತಿಯಾದ ರಂಗನಾಥನನ್ನು ಭಗವದ್ಭಕ್ತರು ಬಾಹ್ಯ ಚಕ್ಷುಸಿನಿಂದ ದರ್ಶನಮಾಡಿ, ತಮ್ಮ ಹೃದಯಕಮಲದಲ್ಲಿ ನಿರಂತರವಾಗಿ ಕಾಣಬೇಕೆಂದು ಅವನನ್ನೇ ಪ್ರಾರ್ಥಿಸಿ ಧ್ಯಾನ

ಮಾಡಿದಾಗ, ಅವರ ಹೃದಯಕಮಲದಲ್ಲಿ ಈ ಭಗವಂತನ ದಿವ್ಯಮಂಗಳಮೂರ್ತಿಯು ನಿಲ್ಲೆನಿಲ್ಲುತ್ತದೆ. ಆಗ ಅಲ್ಲಿ ಅವನನ್ನು ದರ್ಶನಮಾಡಿದ ಅವರು ತಮಗಾದ ಆನಂದಾತಿ- ರೇಕದಿಂದ ಪುಲಕಿತಗಾತ್ರರಾಗುತ್ತಾರೆ. ಅಂತಹ ಭಕ್ತರನ್ನು ಧ್ಯಾನಿಸುವುದರಿಂದ ಕುಲಶೇಖರಾಳ್ವಾರ್ರವರು ರೋಮಾಂಚಿತರಾಗುತ್ತಾರೆ— ಎಂದು ಈ ಹಾಡಿನಲ್ಲಿ ತಿಳಿಸಿದ್ದಾರೆ. ಈ ಹಾಡಿನ ಮುಖಾಂತರ ಭಗವದ್ಗುಣಾನುಭವಕ್ಕಿಂತಲೂ ಭಾಗವತ- ಗುಣಾನುಭವವೇ ಪ್ರಧಾನವೆಂಬುದನ್ನು ಆಳ್ವಾರರು ತಿಳಿಸಿಕೊಟ್ಟಿದ್ದಾರೆ. ॥೫॥

**ಆದಿಯನ್ದಮನನ್ದಮರ್ಬುದಮಾನ, ವಾನವರ್ ತಮ್ ಪಿರಾನ್**
**ಪಾದಮಾಮಲರ್ ಶೂಡುಮ್ ಪತ್ತಿಯಿಲಾದ ಪಾವಿಕಳುಯ್‍ನ್ದಿಡ**
**ತೀದಿಲ್ ನನ್ನೆರಿಕಾಟ್ಟಿ ಯೆಂಗುಮ್ ತಿರಿನ್ದರಂಗ ನೆಮ್ಮಾನುಕ್ಕೇ**
**ಕಾದಲ್ ಶೆಯ್ ತೊಂಡರ್ಕೆಪ್ಪಿಲುಂ ಕಾದಲ್ ಶೆಯ್ಯುಮೆನ್ನೆಂಜಮೇ ॥೬॥**

ಅದಿ ಆನ = ಜಗತ್ಕಾರಣಭೂತನಾಗಿಯೂ, ಅನ್ದಮ್ ಆನ = ಪ್ರಳಯ ಕಾಲದಲ್ಲಿ ಚಿದಚಿತ್ತಗಳನ್ನು ತನ್ನಲ್ಲಿ ಅಡಗಿಸಿಕೊಳ್ಳುವ ಸದಾತ್ಮಕನಾಗಿಯೂ, **ಅನನ್ದಮ್ ಆನ** = ಕಾರ್ಯಕಾರಣಗಳೆರಡರಲ್ಲಿಯೂ ವ್ಯಾಪಿಸಿ, **ಅರ್ಪುದಮಾನ** = ಆಶ್ಚರ್ಯಭೂತನಾದ, **ವಾನವರ್ ತಂಬಿರಾನ್** = ದೇವತೆಗಳಿಗೂ ಅಧಿಪತಿಯಾದ ಸರ್ವೇಶ್ವರನ, **ಮಾಮಲರ್** = ಶ್ಲಾಘ್ಯವಾದ ತಾವರೆ ಹೂವಿನಂತಿರುವ, **ಪಾದಮ್** = ತಿರುವಡಿಗಳನ್ನು, **ಶೂಡುಮ್** = ತಮ್ಮ ತಲೆಯಲ್ಲಿ ಧರಿಸುವುದಕ್ಕೆ ಬೇಕಾದ, **ಪತ್ತಿಯಿಲ್ಲಾದ** = ಭಕ್ತಿಯಿಲ್ಲದ, **ಪಾವಿಗಳ್** = ಪಾಪಿಗಳೂ, **ಉಯ್‍ನ್ದಿಡ** = ಉಜ್ಜೀವಿಸುವಂತೆ, **ಎಂಗುಂ** = ದೇಶಾದ್ಯಂತ ಎಲ್ಲೆಲ್ಲಿಯೂ, **ತಿರಿನ್ದು** = ಒಳ್ಳೆಯ ಮಾರ್ಗವನ್ನು ಸೇರಲನುವಾಗುವ ಧರ್ಮಗಳನ್ನು, **ಕಾಟ್ಟಿ** = ತಮ್ಮ ಆಚರಣೆಗಳಿಂದ ಅನುಷ್ಠಿಸಿ ತೋರಿಸಿ, **ಎಮ್ಮಾನ್** = ನಮ್ಮ ಸ್ವಾಮಿಯಾದ, **ಅರಂಗನುಕ್ಕು** = ಶ್ರೀರಂಗನಾಥನ ವಿಷಯದಲ್ಲಿಯೇ, **ಕಾತಲ್ ಶೆಯ್** = ಪ್ರೀತ್ಯತಿಶಯವಾದ ಭಕ್ತಿ- ಯನ್ನು ಹೊಂದಿರುವ, **ತೊಂಡರ್ಕು** = ಭಗವದ್ಭಕ್ತರುಗಳಿಗೇ, **ಎನ್ ನೆಂಜಂ** = ನನ್ನ ಮನಸ್ಸು, **ಎಪ್ಪಿರಪ್ಪಿಲುಂ** = ಎಂದೆಂದಿಗೂ ಅನೇಕ ಜನ್ಮಗಳನ್ನೆತ್ತಿ, **ಕಾದಲ್ ಶೆಯ್ಯುಂ** = ಕೈಂಕರ್ಯವನ್ನು ಮಾಡಬೇಕೆಂದು ಆಸೆಪಡುತ್ತದೆ. ॥೬॥

"ಯತೋ ವಾ ಇಮಾನಿ ಭೂತಾನಿ ಜಾಯಂತೇ"— ಎಂದು ಹೇಳಿರುವಂತೆ, ಜಗತ್ಕಾರಣಭೂತನಾಗಿಯೂ, "ಯತ್ಪ್ರಯನ್ತ್ಯಭಿಸಂವಿಶನ್ತಿ"— ಎಂದು ಹೇಳಿರು ವಂತೆ ಪ್ರಳಯಕಾಲದಲ್ಲಿ ಎಲ್ಲ ಚಿದಚಿತ್ತುಗಳನ್ನೂ ತನ್ನಲ್ಲಿ ಅಡಗಿಸಿಕೊಳ್ಳುವ ಸದಾತ್ಮಕನಾಗಿಯೂ, ಕಾರ್ಯಕಾರಣಗಳೆಲ್ಲವನ್ನೂ ವ್ಯಾಪಿಸಿ ಆಶ್ಚರ್ಯಭೂತನಾದ

ನಿತ್ಯಮುಕ್ತಾತ್ಮರಿಗೂ, ದೇವರುಗಳಿಗೂ ಎಲ್ಲರಿಗೂ ಸ್ವಾಮಿಯಾದ ಸರ್ವೇಶ್ವರನ, ಶ್ಲಾಘ್ಯವಾದ ತಾವರೆ ಹೂವಿನಂತಿರುವ ತಿರುವಡಿಗಳನ್ನು, ಮನಸ್ಸಿನಲ್ಲಿ ಚಿಂತಿಸಿ, ತಮ್ಮ ತಲೆಯಲ್ಲಿ ಧರಿಸಲು ಬೇಕಾದ ಭಕ್ತಿಯಿಲ್ಲದ ಪಾಪಿಗಳೂ, ಉಜ್ಜೀವಿಸುವಂತೆ, "ತೀರ್ಥೀ ಕುರ್ವಂತಿ ತೀರ್ಥಾನಿ" ಎಂದೂ, "ಪೇರ್‌ತ್ತಕರನಾನ್ಗ್ಗೈಯಾನ್ ಪೇರೋದಿ ಪ್ಪೇಡ್ವೈಕಾಳ್ ತೀರ್ಥತ್ತ ಕರರಾಮಿನ್ ತಿರಿನ್ದು"-ಎಂದು ಪೂರ್ವಾಚಾರ್ಯ-ಪ್ರವರು ವಿಧಿಸಿರುವಂತೆಯೇ ದೇಶಾದ್ಯಂತ ಎಲ್ಲೆಲ್ಲಿಯೂ ಸಂಚರಿಸಿ, "ಸತ್ಯಂ ವದ, ಧರ್ಮಂಚರ, ಸ್ವಾಧ್ಯಾಯಾನ್ಮಾಪ್ರಮದಃ" — ಎಂಬ ನಿರ್ದಿಷ್ಟವಾದ ಶಾಸ್ತ್ರ ಸಿದ್ಧವಾದ ಧರ್ಮಗಳನ್ನು ಉಪದೇಶ ಮಾಡುವುದರಿಂದಲೂ, ತಮ್ಮ ಆಚರಣೆ-ಗಳಿಂದಲೂ ಅನುಷ್ಠಿಸಿ ತೋರಿಸಿ, ಎಲ್ಲ ಚೇತನರನ್ನೂ ಸನ್ಮಾರ್ಗಕ್ಕೆ ಸೆಳೆಯುವವ-ರಾಗಿಯೂ, ಶ್ರೀರಂಗನಾಥನ ವಿಷಯದಲ್ಲಿಯೇ ಪ್ರೀತ್ಯತಿಶಯರೂಪವಾದ ಭಕ್ತಿಯನ್ನು ಹೊಂದಿರುವವರೂ ಆದ ಭಗವದ್ಭಕ್ತರುಗಳ ಕೈಂಕರ್ಯವನ್ನೇ ಎಷ್ಟೇ ಜನ್ಮಗಳ ನ್ನೆತ್ತಿದರೂ, ಆಯಾ ಕಾಲದಲ್ಲೆಲ್ಲಾ ಮಾಡಬೇಕೆಂಬ ಆಸೆಯನ್ನು ನನ್ನ ಮನಸ್ಸು ಹೊಂದಿರುತ್ತದೆ— ಎಂದು ಹೇಳಿ ಆಳ್ವಾರರು ಈ ಹಾಡಿನಲ್ಲಿ ಭಗವತ್ಕೈಂಕರ್ಯವು ಭಾಗವತ ಕೈಂಕರ್ಯದಲ್ಲಿಯೇ ಪರ್ಯವಸಾನಗೊಳ್ಳಬೇಕೆಂದು ತಿಳಿಸಿದ್ದಾರೆ. ||೬||

**ಕಾರಿನಮ್ ಪುರೈಮೇನಿ ನರ್ಕದಿರ್ ಮುತ್ತ ವೆಣ್ಣಗೈ ಚ್ಚೆಯ್ಯವಾಯ್**
**ಆರಮಾರ್ಪ ಅರಂಗನೆನ್ನುಂ ಅರುಮ್ ಪೆರುಮ್ ಶುಡರೊನ್ರಿನ್ನೈ**
**ಶೇರುಂ ನೆಂಜಿನರಾಗಿ ಕಚ್ಚೇರ್‌ನ್ದು ಕಶಿರ್‌ನ್ದಿಕಿನ್ದ ಕಣ್ಣೀರ್‌ಗಳಾಲ್**
**ವಾರನಿರ್ಪವರ್ ತಾಳಿಣೈಕ್ಕು ಒರುವಾರಮಾಗುಂ ಎನ್ನೆಞ್ಜಮೇ ||೭||**

**ಕಾರಿನಮ್‌ಪುರೈ**=ಮೇಘ ಸಮೂಹವನ್ನು ಹೋಲುವ, **ಮೇನಿ**=ದೇಹ-ವನ್ನು ಹೊಂದಿ, **ನಲ್**=ಒಳ್ಳೆಯ, **ಕತಿರ್**—ತೇಜಸ್ಸುಳ್ಳ, **ಮುತ್ತಮ್**= ಮುತ್ತುಗಳಂತಿರುವ, **ವೆಣ್**=ಬಿಳುಪಾದ, **ನಕೈ**=ಆಭರಣಪ್ರಾಯವಾದ ಮಂದಹಾಸವನ್ನು ಹೊಂದಿ, **ಶೆಯ್ಯ**=ಕೆಂಪಾದ, **ವಾಯ್**=(ಅಧರ) ತುಟಿ-ಗಳನ್ನು ಹೊಂದಿದವನಾಗಿಯೂ, **ಆರಮ್**=ಮುಕ್ತಾಹಾರವನ್ನೂ ಧರಿಸಿರುವ, **ಮಾರ್‌ಪನ್**=ವಕ್ಷಸ್ಥಲವುಳ್ಳ, **ಅರಂಗನೆನ್ನುಮ್**=ರಂಗನಾಥನೆಂಬ ನಾಮವನ್ನು ಹೊಂದಿರುವ, **ಅರುಮ್ ಪೆರುಂಶುಡರ್**=ನಿರವಧಿಕವಾದ ತೇಜೋರೂಪನಾಗಿಯೂ **ಒನ್ರಿನ್ನೈ**=ಅದ್ವಿತೀಯನಾಗಿಯೂ ಇರುವ ಭಗವಂತನನ್ನು, **ಶೇರುಮ್**= ತಮ್ಮ ಹತ್ತಿರಸೇರಬೇಕೆಂದು, **ನೆಂಜಿನರಾಕಿ**=ಮನವನ್ನು ಹೊಂದಿದವರಾಗಿ, **ಶೇರ್‌ನ್ದು**= ಮನಸಾರ ಸೇರಿ, (ಆನಂದ-ದುಃಖಗಳು ಸೇರಿ) **ಕಶಿನ್ದುವಳಿನ್ದ**=ನಿರಂತರವಾಗಿ

ಪ್ರವಹಿಸಿದ, **ಕಣ್‌ನೀರ್‌ಗಳ್**=ಆನಂದಬಾಷ್ಪವೂ, ದುಃಖಾಶ್ರುವೂ, **ವಾರ-ನಿರ್ಪವರ್**=ಹರಿಯುವಂತೆ ನಿಂತಿರುವ ಭಗವದ್ಭಕ್ತರ, **ತಾಳಿಣೈಕ್ಕು**=ತಿರುವಡಿಗಳ ವಿಷಯದಲ್ಲಿ, **ಎನ್ ನೆಂಜಮ್**=ನನ್ನ ಮನಸ್ಸಾದರೋ, **ಒರುವಾರಮಾಕುಮ್**=ಒಂದೇ ತರಹದ ಭಕ್ತಿಯನ್ನು ಹೊಂದಿರುತ್ತದೆ. ||೭||

ಮೇಘಸಮೂಹದಂತೆ ದೇಹಕಾಂತಿಯನ್ನು ಹೊಂದಿದವನಾಗಿ, ಒಳ್ಳೆಯ ಕಾಂತಿಯುಕ್ತವಾದ ಮುತ್ತುಗಳಂತಿರುವ ದಂತಪಂಕ್ತಿಯನ್ನು ಹೊಂದಿ ಮಂದಹಾಸವನ್ನು ಬೀರುತ್ತಿರುವ, ಕೆಂತುಟಿಗಳನ್ನು ಹೊಂದಿರುವ, "ವಕ್ಷಃಸ್ಥಲ್ಯಾಂ ತುಲಸಿ ಕಮಲಾಕೌಸ್ತುಭೈರ್ವೈಜಯಂತೀ ಸರ್ವೇಶತ್ವಂ ಕಥಯತಿ ತರಾಮ್"–ಎಂದು ಹೇಳುವಂತೆ, ಸುಂದರವಾದ ವನಮಾಲೆಯಿಂದ ಅಲಂಕೃತವಾದ ವಕ್ಷಸ್ಥಲದಿಂದ ಕೂಡಿರುವ ರಂಗನಾಥನು, "ಪರಂಧಾಮಃ ಪರಂಜ್ಯೋತಿಃ"–ಎಂದು ಹೇಳುವಂತೆ ಅದ್ವಿತೀಯವಾದ ಕಾಂತಿಯಿಂದ ಕೂಡಿದವನಾಗಿ, ಶ್ರೀರಂಗ ಕ್ಷೇತ್ರದಲ್ಲಿ ಬಿಜಯ ಮಾಡಿಸಿದ್ದಾನೆ. ಇವನನ್ನು ತಮ್ಮ ಹತ್ತಿರ ಕಾಣಬೇಕೆಂದು ಆಸೆಯುಳ್ಳ ಭಗವದ್ಭಕ್ತರು, ತಮ್ಮ ಹೃದಯಕಮಲದಲ್ಲಿ ಧ್ಯಾನಿಸಿದಾಗ, ಪರಮಾತ್ಮನು ಅವರಿಗೆ ತನ್ನ ಅಂತರ್ಯಾಮ್ಯವತಾರ ಸ್ವರೂಪದಿಂದ ದರ್ಶನ ಸಮಾನಾಕಾರನಾಗಿ ಹೃದಯ-ಗುಹೆಯಲ್ಲಿ ಕಾಣಿಸಿಕೊಳ್ಳುತ್ತಾನೆ. ಆಗ ಅವರಿಗೆ ಆ ಪರಮಾತ್ಮನನ್ನು ಕಂಡುದುದ-ರಿಂದ ಅತಿಯಾದ ಸಂತೋಷವಾಗಿದ್ದರೂ, ತಮ್ಮ ಬಾಹ್ಯೇಂದ್ರಿಯಗಳಿಂದ ಆತನನ್ನು ಕಾಣುವ ಭಾಗ್ಯ ದೊರೆಯಲಿಲ್ಲವಲ್ಲಾ ಎಂದು ದುಃಖವೂ ಆಗುತ್ತದೆ. ಈ ರೀತಿಯಾಗಿ ಆನಂದ-ದುಃಖಗಳ ಅತಿರೇಕದಿಂದ ಆನಂದಬಾಷ್ಪ ದುಃಖಾಶ್ರುಗಳು ಮಿಶ್ರವಾಗಿ ನಿರಂತರವಾಗಿ ಪ್ರವಾಹದಂತೆ ಕಣ್ಣೀರ್ಗರೆಯುತ್ತಾರೆ. ಈ ರೀತಿಯಾಗಿ ಭಗವದನು-ಭವಾಕಾಂಕ್ಷಿಗಳಾದ ಭಾಗವತರ ವಿಷಯದಲ್ಲಿಯೇ ಐಕಾಂತ್ಯ ಭಕ್ತಿಯನ್ನು ಹೊಂದಿ-ರುವ ನನ್ನ ಮನಸ್ಸು, ಪಕ್ಷಪಾತವನ್ನು ಹೊಂದಿರುತ್ತದೆ,"

ಆಳ್ವಾರರ, ಈ ಪಾಶುರದ ಅಭಿಪ್ರಾಯವೇ, ಅವರ ತನಿಯನ್ (ಬಿಡಿ ಪದ್ಯದ) "ಅವರ್‌ಗಳುಕ್ಕೆ ವಾರಮ್ ಕೊಡು"—ಎಂಬ ವಾಕ್ಯದಲ್ಲಿ ಹೇಳಲ್ಪಟ್ಟಿದೆ. ||೭||

ಮಾಲ್ಯೆಯುಟ್ರು ಕಡಲ್‌ಗಿಡನ್ದವನ್ ವಣ್ಡುಕಿಣ್ಣು ನರುನ್ತುಳಾಯ್
ಮಾಲ್ಯೆಯುಟ್ರವರ್ಕೈ ಪ್ಪೆರುಮ್ ತಿರುಮಾರ್‌ಪನ್ನೈ ಮಲರ್‌ಕಣ್ಣನ್ನೈ
ಮಾಲ್ಯೆಯುಟ್ರೆಳುನ್ದಾಡಿಪ್ಪಾಡಿ ತಿರಿನ್ದರಂಗನೆಮ್ಮಾನುಕ್ಕೇ
ಮಾಲ್ಯೆಯುಟ್ರಿಡು ನ್ದೊಣ್ಡರ್ ವಾಳ್‌ವುಕ್ಕು,
ಮಾಲ್ಯೆಯುತ್ತದೆನ್ನೆಂಜಮೇ ||೮||

**ಮಾಲೈಯುಟ್ರು** = ಮೇಲಿ ಮೇಲಿ ಬರುವ ಅಲೆಗಳ ಪರಂಪರೆಯಿಂದ ಕೂಡಿರುವ, **ಕಡಲ್** = ಕ್ಷೀರಾಬ್ಧಿಯಲ್ಲಿ, **ಕಿಡನ್ದವನ್** = ಶಯನಿಸಿರುವವನೂ, **ವಂಡು**=ದುಂಬಿಗಳು, **ಕಿಣ್ಡು**=ಕೊಡೆಯೋಪಾದಿಯಲ್ಲಿ ಮುತ್ತಿಕೊಂಡಿರುವ, **ನರು** = ಪರಿಮಳಗೊಂಡ, **ತುಳಾಯ್‌ಮಾಲೈಉಟ್ರು** = ತುಳಸಿಮಾಲೈಯಿಂದ ಕೂಡಿ, **ವರೈ**=ಪರ್ವತದಂತೆ, **ಪೆರು**=ಉಬ್ಬಿಯೂ ವಿಶಾಲವಾಗಿಯೂ ಇರುವ, **ತಿರುಮಾರ್‌ಪನ್ಮೈ** = ವಕ್ಷಸ್ಥಲವುಳ್ಳ, **ಮಲರ್** = ಸುಂದರವಾದ ಕೆಂದಾವರೆ ಯಂತಿರುವ, **ಕಣ್ಣನೈ** = ಕಣ್ಣನ್ನು ಹೊಂದಿರುವ ರಂಗನಾಥನ ವಿಷಯದಲ್ಲಿ, **ಮಾಲೈಯುಟ್ರು**=ಭಕ್ತಿಯನ್ನು ಹೊಂದಿದವರಾಗಿ, **ಎಳುನ್ದಾಡಿ**=ಭಕ್ತಿಪಾರ-ವಶ್ಯದಿಂದ ಒಂದೇ ಸ್ಥಳದಲ್ಲಿ ಕೂರಲಾಗದೆ, ಎದ್ದು ನರ್ತನಮಾಡುತ್ತಾ, **ಪಾಡಿ**= ಪ್ರೀತ್ಯತಿಶಯದಿಂದ ಅವನ ಗುಣಗಳನ್ನು ಹಾಡುತ್ತಾ, **ತಿರಿನ್ದು**=ಸಂಚರಿಸುತ್ತಾ, **ಅರಂಗನ್**=ಶ್ರೀರಂಗಕ್ಷೇತ್ರದಲ್ಲಿ ಬಿಜಯಮಾಡಿಸಿರುವ, **ಎಮ್ಮಾನುಕ್ಕೇ**=ನಮ್ಮ ಸ್ವಾಮಿಯಾದ ರಂಗನಾಥನ ವಿಷಯದಲ್ಲಿಯೇ, **ಮಾಲೈಯುಟ್ರುಡುಮ್**=ಭಕ್ತಿ ಪಾರವಶ್ಯರಾಗಿ ವ್ಯಾಮೋಹಕ್ಕೆ ಒಳಗಾಗಿರುವ, **ತೊಂಡರ್**=ಭಕ್ತರುಗಳ, **ವಾಳ್ವುಕ್ಕು**=ಬಾಳ್ವಿಕೆಗೆ ಕಾರಣವಾದ ಶ್ರೀವೈಷ್ಣವಶ್ರೀಯ ವಿಷಯದಲ್ಲಿಯೇ, **ಎನ್ನೆಂಜಮ್** = ನನ್ನ ಮನಸ್ಸು, **ಮಾಲೈಉಟ್ರುದು** = ವ್ಯಾಮೋಹದಿಂದ ಕೂಡಿದೆ. ||೮||

ಭಗವಂತನು, ತನ್ನ ವ್ಯೂಹ ಸ್ವರೂಪದಿಂದ, ಮೇಲಿ ಮೇಲಿ ಪರಂಪರೆಯಾಗಿ ಏಳುತ್ತಿರುವ ಅಲೆಗಳಿಂದ ಕೂಡಿದ ಕ್ಷೀರಾಬ್ಧಿಯಲ್ಲಿ ಶೇಷತಲ್ಪದಲ್ಲಿ ನಿದ್ರಿಸುತ್ತಿದ್ದಾನೆ. ಅದೇ ಪರಮಾತ್ಮನು ತನ್ನ ಅರ್ಚಾಮೂರ್ತಿಸ್ವರೂಪದಲ್ಲಿ ಶ್ರೀರಂಗಕ್ಷೇತ್ರದಲ್ಲಿ ಬಿಜಯ ಮಾಡಿಸಿದ್ದಾನೆ. ಇವನು ಪರ್ವತದಂತೆ ಉಬ್ಬಿರುವ ವಿಶಾಲವಾದ ವಕ್ಷಸ್ಥಲವನ್ನು ಹೊಂದಿದ್ದಾನೆ. "ತೋಳಿಣೈಮೇಲುಂ ನನ್ಮಾರ್‌ಪಿನ್ ಮೇಲುಂ ಶುಡರ್ ಮುಡಿ ಮೇಲುಂ ತಾಳಿಣೈಮೇಲುಂ ಪುನೈನ್ದ ತಣ್ಣನ್ದುಳಾಯ್"—ಎಂದು ನಮ್ಮಾಳ್ವಾರವರು ಹಾಡಿರುವಂತೆ, ತನ್ನ ದಿವ್ಯದೇಹದಲ್ಲಿ ವಿಶೇಷವಾಗಿ ಪರಿಮಳವನ್ನು ಸೂಸುವ ತುಳಸಿಮಾಲಿಕೆಗಳಿಂದ ಅಲಂಕೃತನಾಗಿದ್ದಾನೆ. ಅದರ ಪರಿಮಳದಿಂದ ಆಕರ್ಷಿತಗಳಾಗಿ ತುಳಸಿಯಲ್ಲಿನ ಮಧುವನ್ನು ಪಾನಮಾಡಲೆಂದು ಅಸಂಖ್ಯಾತವಾದ ದುಂಬಿಗಳು ಪರಮಾತ್ಮನ ಎದೆಯ ಮೇಲ್ಭಾಗದ ಅಂತರಾಳದಲ್ಲಿ ಕೂಡಿಕೊಂಡಿರು ವಿಕೆಯು ಅವನಿಗೆ ಛತ್ರಿಯೋಪಾದಿಯಲ್ಲಿದೆ. ಪರಮಾತ್ಮನು "ಕಪ್ಯಾಸಂ ಪುಂಡರೀಕ-ಮೇವಮಕ್ಷಿಣೀ"—ಎಂದು ಉಪನಿಷತ್ತು ಉದ್ಘೋಷಿಸುವಂತೆ ಅರಳಿದ ಕೆಂದಾವರೆ ಯಂತಿರುವ ಕಣ್ಣುಗಳಿಂದ ಕೂಡಿದ್ದಾನೆ. ಈ ತರಹದ ಭಗವಂತನ ಮೂರ್ತಿಯನ್ನು ತಮ್ಮ ಅಂತರಂಗದಲ್ಲಿ ಕಂಡು, ಅವನಲ್ಲಿನ ಭಕ್ತಿ ಪಾರವಶ್ಯದಿಂದ ಒಂದೇ ಸ್ಥಳದಲ್ಲಿ ಕೂರಲಾಗದೆ, ಎದ್ದು ನರ್ತನಮಾಡುತ್ತಾ ಪ್ರೀತ್ಯತಿಶಯದಿಂದ ಅವನ ಗುಣಗಳನ್ನು

ಹಾಡುತ್ತಾ, ಅವನ ವಿಶೇಷಸಾನ್ನಿಧ್ಯದಿಂದ ಕೂಡಿರುವ ಕ್ಷೇತ್ರಗಳನ್ನು ಸಂಚರಿಸುತ್ತಾ, ಕೊನೆಯಲ್ಲಿ ನಮ್ಮ ಸ್ವಾಮಿಯಾದ ರಂಗನಾಥನ ವಿಷಯದಲ್ಲಿಯೇ ಭಕ್ತಿಪಾರವಶ್ಯರಾಗಿ ವ್ಯಾಮೋಹಕ್ಕೆ ಒಳಗಾಗಿರುವ ಭಕ್ತರುಗಳ ಬಾಳ್ವಿಕೆಗಳಿಗೆ ಕಾರಣವಾದ ಶ್ರೀವೈಷ್ಣವ ಶ್ರೀಯಾದ ಶ್ರೀರಂಗಶ್ರೀಯ ವಿಷಯದಲ್ಲಿಯೇ ನನ್ನ ಮನಸ್ಸು ವ್ಯಾಮೋಹದಿಂದ ಕೂಡಿದೆ—ಎಂದು ಆಳ್ವಾರರು ತಮ್ಮ ಅಭಿಪ್ರಾಯವನ್ನು ತಿಳಿಸಿದರು. ಇದನ್ನೇ ಭಗವದ್ರಾಮಾನುಜರೂ—"ಶ್ರೀರಂಗನಾಥೋ ಜಯತು ಶ್ರೀರಂಗಶ್ರೀಶ್ಚವರ್ಧತಾಂ"- ಎಂದು ನಾವೆಲ್ಲರೂ ಭಗವಂತನಲ್ಲಿ ಪ್ರಾರ್ಥಿಸಬೇಕೆಂದು ಕಟ್ಟಳೆಯಿಟ್ಟಿದ್ದಾರೆ ||೮||

**ಮೊಯ್ತ್ತುಕಣ್ ಪನಿಶೋರ ಮೆಯ್‌ಗಳ್‌ಶಿಲಿರ್ಪ ವೇಂಗಿಯಿಳೈತ್ತುನಿನ್ರು**
**ಎಯ್‌ತ್ತುಕ್ಕುಮ್ಬಿಡುನಟ್ಟಮಿಟ್ಟಳುನ್ದಾಡಿಪ್ಪಾಡಿಯಿರೈಂಜಿ, ಎನ್**
**ಅತ್ತನಚ್ಚನರಂಗನುಕ್ಕು ಅಡಿಯಾರ್‌ಗಳಾಗಿಯವನುಕ್ಕೇ—ಪಿತ್ತರಾಮವರ್**
**ಪಿತ್ತರಲ್ಲರ್‌ಹಳ್ ಮತ್ತೈಯಾರ್‌ಮುಟ್ಟುಮ್ ಪಿತ್ತರೆ ||೯||**

**ಕಣ್‌ಪನಿ** = ಆನಂದಬಾಷ್ಪವು, **ಮೊಯ್ತ್ತುಶೋರ** = ನಿರಂತರವಾಗಿ ಪ್ರವಹಿಸಲು, **ಮೆಯ್‌ಕಳ್**=ಶರೀರಗಳು, **ಶಿಲಿರ್ಪ**=ರೋಮಾಂಚಿತವಾಗಿರಲು, **ವೇಂಗಿ** = ವಿಲಕ್ಷಣವಾದ ವಿಷಯಗಳನ್ನು ಸ್ಮರಣೆಮಾಡಿಕೊಂಡು, **ಎಳೈತ್ತು** = ತೂಗಾಡುತ್ತಾ, **ಇಯ್‌ತ್ತು**=ಶಿಥಿಲರಾಗಿ, **ಎಟುನ್ದುನಿನ್ರು**=ಸ್ತಬ್ಧರಾಗಿ ನಿಂತು, **ಕುಂಬಿಡು ನಟ್ಟಮಿಟ್ಟು** ಆಡಿ=ಸಂಭ್ರಮದಿಂದ ನರ್ತನಮಾಡಿ, **ಪಾಡಿ**=ಪ್ರೀತ್ಯತಿ-ಶಯದಿಂದ ಹಾಡಿ, **ಇರೈಂಜಿ**=ದೀರ್ಘಪ್ರಣಾಮವನ್ನು ಮಾಡಿ, **ಎನ್**=ನನಗೆ, **ಅತ್ತನ್** = ತಂದೆಯಾಗಿಯೂ, **ಅಚ್ಚನ್** = ಸ್ವಾಮಿಯಾಗಿಯೂ ಇರುವ, **ಅರಂಗನುಕ್ಕು** = ಶ್ರೀರಂಗನಾಥನಿಗೆ, **ಅಡಿಯಾರ್‌ಕಳ್** = ದಾಸಭೂತರಾದ ಶ್ರೀವೈಷ್ಣವರುಗಳಿಗೆ, **ಆಕಿ**=ದಾಸಭೂತರಾಗಿ, **ಅವರುಕ್ಕೇ**=ಅವರುಗಳ ವಿಷಯದಲ್ಲಿಯೇ, **ಪಿತ್ತರಾಮವರ್**=ವ್ಯಾಮೋಹದಿಂದ ಹುಚ್ಚರಂತೆ ಅಲೆಯುವವರಾದರೋ, **ಪಿತ್ತರಲ್ಲರ್‌ಕಳ್**=ನಿಜವಾದ ಹುಚ್ಚರಲ್ಲ, **ಮಟ್ರೈಯಾರ್ ಮುಟ್ರುಂ**=ಆ ಭಾಗವತರ ವಿಷಯದಲ್ಲಿ ಭಕ್ತಿಯಿಲ್ಲದವರೆಲ್ಲರೂ, **ಪಿತ್ತರೇ**=ಹುಚ್ಚರೇಸರಿ ||೯||

ಭಗವದ್ಗುಣಾನುಭವವೆಂಬ ಆನಂದ ಸಾಗರದಲ್ಲಿ ಮುಳುಗಿದ ಭಕ್ತರು ನಿರಂತರ ವಾಗಿ ಆನಂದ ಬಾಷ್ಪವನ್ನು ಸುರಿಸುತ್ತಿರುತ್ತಾರೆ. ಭಗವದನುಭವದಿಂದ ಅವರ ದೇಹದ ಸರ್ವೇಂದ್ರಿಯಗಳೂ ಪುಳಕಿತವಾಗುತ್ತವೆ. ಭಗವಂತನ ವಿಲಕ್ಷಣವಾದ ಲೀಲಾಚೇಷ್ಟಿತಗಳ ವಿಷಯಗಳನ್ನು ಸ್ಮರಣೆಮಾಡಿಕೊಂಡು ಅತ್ತ ಇತ್ತ ತೂಗಾಡುತ್ತಾ ಶಿಥಿಲರಾಗಿ ಸ್ತಬ್ಧರಾಗಿ ನಿಂತು, ಕೆಲವೇಳೆ ಸಂಭ್ರಮದಿಂದ ನರ್ತನಮಾಡಿ, ಪ್ರೀತ್ಯತಿಶಯದಿಂದ ಹಾಡಿ, ಅವನಿಗೆ ದೀರ್ಘಪ್ರಣಾಮವನ್ನು ಮಾಡಿ, ತಂದೆಯಾಗಿಯೂ, ಸ್ವಾಮಿಯಾಗಿಯೂ ಇರುವ ಶ್ರೀರಂಗನಾಥನಿಗೆ ದಾಸಭೂತರಾಗಿರುತ್ತಾರೆ. ಈ ಅನುಭವ

ವನ್ನು ಪಡೆಯದಿರುವ, ಈ ಭಕ್ತರ ವಿಷಯದಲ್ಲಿ ಭಕ್ತಿವಿಶ್ವಾಸವಿಲ್ಲದ ಜನರಿಗೆ, ಇವರ ಚೇಷ್ಟಿತಗಳನ್ನು ಕಂಡಾಗ ಇವರು ಹುಚ್ಚರಂತೆ ಕಾಣುತ್ತಾರೆ. ಈ ಮೇಲೆ ಹೇಳಿದಂತೆ "ದಾಸಭೂತರಾದವರಿಗೆ ಮಾತ್ರವೇ ಅನುಗ್ರಹಮಾಡುವವನು ನಮ್ಮ ರಂಗನಾಥನೆಂಬ ಹುಚ್ಚ"—(ಇತ್ತನ್ನೈ ಅಡಿಯರಾನಾರ್ಕ್ಕು ಇರಂಗುಮ್ ನಮ್ ಅರಂಗನಾಯ ಪಿತ್ತನ್) —ಎಂದು ತೊಂಡರಡಿಪ್ಪೊಡಿ ಆಳ್ವಾರ್ರವರು ಹೇಳಿದಂತೆ, ರಂಗನಾಥನು ಅವನ ದಾಸರ ವಿಷಯದಲ್ಲಿ ಹುಚ್ಚನಾದರೆ, ದಾಸರು ಅವನ ವಿಷಯದಲ್ಲಿ ಹುಚ್ಚರಂತಿರುತ್ತಾರೆ. ಮತ್ತೆ ಕೆಲವರು ಆ ದಾಸರ ವಿಷಯದಲ್ಲಿ ಅತ್ಯಧಿಕವಾದ ವ್ಯಾಮೋಹದಿಂದ ಹುಚ್ಚರಂತಾಗಿ ಅಲೆಯುತ್ತಿರುತ್ತಾರೆ. ಇವರನ್ನು ಕಂಡು ಇತರರು ಇವರನ್ನೂ ಹುಚ್ಚರೆನ್ನುತ್ತಾರೆ. ಆದರೆ ವಾಸ್ತವಿಕವಾಗಿ ನೋಡಿದರೆ, ಅವರು ಹುಚ್ಚರಲ್ಲ. ಭಾಗವತರ ವಿಷಯದಲ್ಲಿ ಭಕ್ತಿಯಿಲ್ಲದವರಾಗಿ, ಆ ಭಾಗವತರನ್ನು ಹುಚ್ಚರೆನ್ನುವ ಜನರು ನಿಜವಾದ ಹುಚ್ಚರು. ||೯||

**ಅಲ್ಲಿಮಾಮಲರ್ಮಂಗೈನಾಥನರಂಗನ್ ಮೆಯ್ಯಡಿಯಾರ್ಕಳ್ತಮ್**
**ಎಲ್ಲೈಯಿಲಡಿಮೈತಿರತ್ತಿನಿಲೆನ್ರುಮೇವುಮನತ್ತನಾವ್**
**ಕೊಲ್ಲಿಕಾವಲನ್ ಕೂಡಲ್ ನಾಯಕರ್ ಕೋೞಿಕ್ಕೋನ್ ಕುಲಶೇಖರನ್**
**ಶೊಲ್ಲಿಲ್ ಇನ್ತಮಿೞ್ ಮಾಲೈವಲ್ಲವರ್ ತೊಂಡರ್**
**ತೊಂಡರ್ಗಳಾವರೇ ||೧೦||**

**ಮಾ**=ಶ್ಲಾಘ್ಯವಾದ, **ಅಲ್ಲಿಮಲರ್**=ಕೇಸರಗಳಿಂದ ಕೂಡಿದ ಕಮಲಪುಷ್ಪದಲ್ಲಿ, ಅವತರಿಸಿದ, **ಮಂಗೈ**=ರಂಗನಾಯಕಿ ತಾಯಿಗೆ, **ನಾಥನ್**=ಒಡೆಯನಾದ, **ಅರಂಗನ್** = ರಂಗನಾಥನ ವಿಷಯದಲ್ಲಿ, **ಮೆಯ್ಯಡಿಯಾರ್ಕಳ್** = ಅನನ್ಯ ಪ್ರಯೋಜನರಾಗಿ ನಿಜವಾದ ದಾಸಭೂತರಾದ, **ತಮ್** = ಶ್ರೀವೈಷ್ಣವರ, ಎಲ್ಲೈಯಿಲ್ = ಅಳವಿಲ್ಲದ, **ಅಡಿಮೈತಿರತ್ತಿನಿಲ್** = ಶೇಷವೃತ್ತಿಯಲ್ಲಿ, **ಎನ್ರುಮ್ಮೇವುಂ**=ಎಂದೂ ಕೂಡಿಕೊಂಡಿರುವ, **ಮನತ್ತನಾಂ**=ಮನಸ್ಸುಳ್ಳವರಾದ, **ಕೊಲ್ಲಿ** = 'ಕೊಲ್ಲಿ'-ಎಂಬ ನಗರಕ್ಕೆ, **ಕಾವಲನ್**=ರಕ್ಷಕನಾದ, **ಕೂಡಲ್** =ಮಧುರೆಗೆ, **ನಾಯಕನ್** = ಸ್ವಾಮಿಯಾದ, **ಕೋೞ್** = ಉರೈಯೂರಿಗೆ, **ಕೋನ್** = ರಾಜನಾದ, **ಕುಲಶೇಖರನ್** = ಕುಲಶೇಖರಪ್ಪೆರುಮಾಳ್ ಎಂದು ಪ್ರಸಿದ್ಧರಾದ ಈ ಆಳ್ವಾರ್ರವರು ರಚಿಸಿದ, **ಇನ್**=ಇಂಪಾದ, **ಶೊಲ್**=ಶಬ್ದರೂಪವಾದ, **ತಮಿೞ್ಮಾಲೈ**=ದ್ರಾವಿಡ ಪದ್ಯಮಾಲಿಕೆಯ ಈ ಹತ್ತು ಹಾಡುಗಳನ್ನೂ, **ವಲ್ಲವರ್**=ಅಭ್ಯಾಸಮಾಡುವವರು, **ತೊಂಡರ್**=ಶ್ರೀರಂಗನಾಥನಿಗೆ ದಾಸಭೂತರಾದ ಭಕ್ತರಿಗೆ, **ತೊಂಡರ್ಕಳಾವರ್**=ದಾಸಭೂತರಾಗುತ್ತಾರೆ ||೧೦||

ಕುಲಶೇಖರಾಳ್ವಾರ್ರವರು ಕೊಲ್ಲಿ ಎಂಬ ನಗರಕ್ಕೆ ರಕ್ಷಕನಾಗಿ, ಮಧುರೆಗೆ ನಾಯಕನಾಗಿ, ಉರೈಯೂರಿನ ರಾಜನಾಗಿ, ಕುಲಶೇಖರಪ್ಪೆರುಮಾಳ್ ಎಂದು

ಹೆಸರುವಾಸಿಯಾಗಿ, ನಾನಾ ವಿಧವಾದ ಸ್ಥಾನಮಾನಗಳನ್ನು ಪಡೆದಿದ್ದರೂ, ಅವೆಲ್ಲವೂ ತುಚ್ಛವಾದುದೆಂದೂ, ಅವೆಲ್ಲವುಗಳಿಗೂ ಮಿಗಿಲಾದ,—'ಶ್ಲಾಘ್ಯವಾದ ಕೇಸರಗಳಿಂದ ಕೂಡಿದ ಕಮಲಪುಷ್ಪದಲ್ಲಿ ಅವತರಿಸಿದ ರಂಗನಾಯಕಿ ತಾಯಿಗೆ ಭರ್ತಾವಾದ, ರಂಗನಾಥನ ವಿಷಯದಲ್ಲಿಯೇ ಅನನ್ಯ ಪ್ರಯೋಜನರಾಗಿ ನಿಜವಾದ ದಾಸಭೂತರಾದ ಶ್ರೀ ವೈಷ್ಣವರ ಅಳವಿಲ್ಲದ ಶೇಷವೃತ್ತಿಯಲ್ಲಿಯೇ'— ಎಂದೂ ಕೂಡಿಕೊಂಡಿರುವ ಮನಸ್ಸುಳ್ಳವರಾಗಿದ್ದಾರೆ. ಈ ರೀತಿ ಭಾಗವತ ಭಕ್ತಿಯ ಪರಾಕಾಷ್ಠೆಯಿಂದ ಈ ದಶಕದಲ್ಲಿ ಇವರು ಹಾಡಿರುವ ಹತ್ತು ಪದ್ಯಗಳನ್ನೂ ಯಾರು ಅಭ್ಯಾಸ ಮಾಡುವರೋ ಅವರು, ಚರಮಪರ್ವನಿಷ್ಠೆಯಾದ, ಭಗವದ್ಭಕ್ತರಿಗೆ ದಾಸಭೂತರಾಗಿರುವಿಕೆಯನ್ನು ಹೊಂದುತ್ತಾರೆ—ಎಂದು ಆಳ್ವಾರ್ರವರು ಈ ಪದ್ಯದಲ್ಲಿ ಈ ದಶಕದ ಅನುಸಂಧಾನದ ಫಲಶ್ರುತಿಯನ್ನು ಹಾಡಿದ್ದಾರೆ. ||೧೦||

## ಪೆರುಮಾಳ್ ತಿರುಮೊಳಿ–ಮೂರನೆಯ ದಶಕ

ಶಾಸ್ತ್ರಗಳೆಲ್ಲವೂ ತ್ಯಾಜ್ಯ ಮತ್ತು ಉಪಾದೆಯವಾದ ವಿಷಯಗಳನ್ನು ನಿಷ್ಕರ್ಷಿಸಿ ತಿಳಿಸುತ್ತವೆ. ಅದರಲ್ಲಿ ಪ್ರಧಾನವಾಗಿ ಅವೈಷ್ಣವರ ಸಹವಾಸವು ತ್ಯಾಜ್ಯವಾದುದು. ವೈಷ್ಣವರ ಸಹವಾಸವು ಉಪಾದೇಯವಾದುದು. ಅದರಲ್ಲಿಯೂ ಒಂದು ವೇಳೆ ವೈಷ್ಣವರ ಸಹವಾಸವು ಲಭಿಸದಿದ್ದರೂ ಅವೈಷ್ಣವಸಹವಾಸವನ್ನು ಮಾತ್ರ ಮಾಡಬಾರದು. "ವರಂ ಹುತವಹಜ್ವಾಲಾ ಪಂಜರಾನ್ತರ್ವ್ಯವಸ್ಥಿತಿಃ | ನ ಶೌರಿಚಿನ್ತಾ-ವಿಮುಖ ಜನಸಂವಾಸವೈಶಸಮ್"—"ಭಗವಂತನ ಚಿಂತೆಯಿಂದ ವಿಮುಖರಾದ ಜನಗಳೊಡನೆ ಸಹವಾಸ ಮಾಡುವುದಕ್ಕಿಂತಲೂ, ಉರಿಯುತ್ತಿರುವ ಬೆಂಕಿಯ ಜ್ವಾಲೆಯ ಮಧ್ಯದಲ್ಲಿರುವಿಕೆಯೇ ಲೇಸು"—ಎಂದು ಅಭಿಜ್ಞರು ಹೇಳುತ್ತಾರೆ. "ಕಡಲ್ ಮಲ್ಲೈತ್ತಲಶಯನತ್ತುರೈವಾರೈ ಎಣ್ಣಾದೇ ಇರುಪ್ಪಾರೈ ಇರೈಪ್ಪೊಳುದಂ ಎಣ್ಣೋಮೇ"—"ಭಗವಂತನನ್ನು ಚಿಂತಿಸದಿದ್ದರೂ, ಅವನನ್ನು ಚಿಂತಿಸದ ಪಾಪಿಗಳು ನಮ್ಮ ಸ್ಮರಣೆಗೆ ಬಾರದಿದ್ದರೆ, ಅದೇ ನಮಗೆ ಭಗವಂತನ ಚಿಂತೆಗಿಂತಲೂ ಮಿಗಿಲಾದುದು"—ಎಂದು ತಿರುಮಂಗೈಯಾಳ್ವಾರ್ರವರೂ ಅಭಿಪ್ರಾಯ ಪಟ್ಟಿದ್ದಾರೆ. ಅಂತೆಯೇ ಕುಲಶೇಖರಾಳ್ವಾರ್ರವರೂ, ಈ ದಶಕದಲ್ಲಿ ವಿಶೇಷವಾಗಿ ಭಗವಚ್ಚಿನ್ತನ ವಿಮುಖರೊಡನೆ ಕೂಡಿ ಇರುವುದಿಲ್ಲವೆಂದು—ತಿಳಿಸಿದ್ದಾರೆ.

**ಮೆಯ್ಯಿಲ್ ವಾಳ್ಕೈಯೈ ಮೆಯ್ಯೆನಕ್ಕೊಳ್ಳುಮ್**
**ಇವ್ವೈಯತ್ತನ್ನೊಡುಂ ಕೂಡುವದಿಲ್ಲೈಯಾರ್**
**ಐಯನೇ ! ಅರಂಗಾ ! ಎನ್ರಳೈಕ್ಕಿನ್ರೇನ್**
**ಮೈಯಲ್ ಕೊಂಡೊಳಿನ್ದೇನ್ ಎನ್ರನ್ ಮಾಲುಕ್ಕೇ ||೧||**

**ಮೆಯ್ಯಿಲ್** = ಪ್ರಾಕೃತಿಕವಾದ ಪಾಂಚಭೌತಿಕದೇಹದಲ್ಲಿಯೂ, **ವಾಳ್-ಕ್ಕೈಯ್ಯೈ** = ಪ್ರಾಕೃತಭೋಗಗಳಲ್ಲಿಯೂ, **ಮೆಯ್ಯೆನಕ್ಕೊಳ್ಳುಮ್** = (ಅವುಗಳೇ) ನಿತ್ಯವಾದುವೆಂಬ ಅಭಿಮಾನವನ್ನು ಹೊಂದಿರುವ, **ಇವ್ವೈಯತ್ತೊಡುಂ** = ಈ ಪ್ರಕೃತಿಮಂಡದಲ್ಲಿರುವ ಜನರೊಡನೆ, **ಮಾನ್** = ದೇಹಾತ್ಮಾಭಿಮಾನವನ್ನು ತೊರೆದಿರುವ ನಾನು, **ಕೂಡುವದಿಲ್ಲೈ** = ಸೇರುವುದಿಲ್ಲ, **ಐಯನೇ** = ನಿರುಪಾಧಿಕ ಬಂಧುವೆ, **'ಅರಂಗಾ' ಎನ್ರು** = ಶ್ರೀರಂಗನಾಥನೇ-ಎಂದು, **ಅಳೈಕ್ಕಿನ್ರೇನ್** = ಅವನನ್ನು ಕೂಗುತ್ತೇನೆ, **ಎನ್ರನ್** = ನನ್ನ ವಿಷಯದಲ್ಲಿ, **ಮಾಲುಕ್ಕು** = ವ್ಯಾಮೋಹದಿಂದ ಕೂಡಿ ಹುಚ್ಚನಂತಿರುವ ರಂಗನಾಥನ ವಿಷಯದಲ್ಲಿ, **ಮೈಯಲ್-ಕೊಂಡೊಳಿನ್ದೇನ್** = ನಾನೂ ವ್ಯಾಮೋಹದಿಂದ ಹುಚ್ಚನಂತೆಯೇ ಇರುತ್ತೇನೆ. ||೧||

ಪ್ರಾಕೃತಿಕವಾದ ಪಾಂಚಭೌತಿಕ ದೇಹದಲ್ಲಿಯೂ, ಪ್ರಾಕೃತಿಕ ಭೋಗ ಗಳಲ್ಲಿಯೂ, ಅವುಗಳೇ ನಿತ್ಯವಾದುವೆಂಬ ಅಭಿಮಾನದಿಂದ ಕೂಡಿರುವ ದೇಹಾತ್ಮ ಭ್ರಮೆ ಅಥವಾ ಪ್ರಪಂಚಾತ್ಮಭ್ರಮದಿಂದ ಕೂಡಿದ ಜನರೊಡನೆ, ದೇಹಾತ್ಮಾಭಿಮಾನ ವನ್ನು ತೊರೆದು ಪ್ರಾಕೃತಿಕ ಭೋಗಗಳಲ್ಲಿ ನಿರಾಸಕ್ತನಾದ ನಾನು ಸೇರುವುದಿಲ್ಲ. ಸದಾಕಾಲದಲ್ಲಿಯೂ ನನ್ನ ಸ್ವಾಮಿಯನ್ನು—ಸರ್ವಲೋಕಶರಣ್ಯ ! ಶ್ರೀರಂಗನಾಥ ! ಮೊದಲಾದ ನಾಮಗಳಿಂದ ಕರೆಯುತ್ತಲೇ ಇರುತ್ತೇನೆ. ಭಗವದ್ಗೀತೆಯಲ್ಲಿ— "ಪ್ರಿಯೋಹಿ ಜ್ಞಾನಿನೋಽತ್ಯರ್ಥಂ ಅಹಂ ಸಚ ಮಮ ಪ್ರಿಯಃ"—ಜ್ಞಾನಿಗೆ ನಾನು ಅತ್ಯರ್ಥಪ್ರಿಯನು. ಆ ಜ್ಞಾನಿಯು ನನಗೆ ಅತ್ಯರ್ಥಪ್ರಿಯನು."—ಎಂದು ಕೃಷ್ಣನೇ ಹೇಳಿರುವಂತೆ ನನ್ನ ವಿಷಯದಲ್ಲಿ ವಿಶೇಷವಾದ ವ್ಯಾಮೋಹದಿಂದ ಕೂಡಿ ಹುಚ್ಚ ನಂತಿರುವ ನಮ್ಮ ಭಗವಂತನ ವಿಷಯದಲ್ಲಿ ವಿಶೇಷವಾದ ವ್ಯಾಮೋಹವನ್ನು ಹೊಂದಿ ನಾನೂ ಹುಚ್ಚನಂತಿರುತ್ತೇನೆ. ||೧||

**ನೂಲಿನೇರಿಡೈಯಾರ್ ತಿರತ್ತೇನಿರ್ಕುಮ್**
**ಞಾಲಮ್ ತನ್ನೊಡುಂ ಕೂಡುವದಿಲ್ಲೈಯಾ‌ರ್**
**ಆಲಿಯಾವಳೈಯಾವರಂಗಾವೆನ್ರು**
**ಮಾಲೆಳುನ್ದೊಳಿನ್ದೇನ್ ಎನ್ರನ್ ಮಾಲುಕ್ಕೇ ||೨||**

**ನೂಲಿನೇರ್** = ನೂಲಿನಂತೆ ಸೂಕ್ಷ್ಮವಾದ ತೆಳ್ಳಗಿರುವ, **ಇಡೈಯಾರ್** = ನಡುವಿನಿಂದ ಕೂಡಿದ ಸ್ತ್ರೀಯರ, **ತಿರತ್ತು** = ವಿಷಯದಲ್ಲಿ, **ನಿರ್ಕುಮ್** = ಇಟ್ಟ ಮನಸ್ಸನ್ನು ಹಿಂತಿರುಗಿಸದೇ ನಿಂತಿರುವ, **ಞಾಲಮ್ ತನ್ನೊಡುಂ** = ಪ್ರಾಕೃತಿಕ ರೊಡನೆ, **ಯಾನ್** = ಉತ್ತಮವಾದ ವಿಷಯದಲ್ಲಿ ಸ್ಥಿರವಾಗಿ ನಿಂತಿರುವ ಮನಸ್ಸುಳ್ಳ ನಾನು, **ಕೂಡುವುದಿಲ್ಲೈ** = ಸೇರುವುದಿಲ್ಲ. (ನಾನು) **ಅಲಿಯಾ** = ಭಗವಂತ

ನಲ್ಲಿರುವ ಪ್ರೀತಿಪ್ರಕರ್ಷದಿಂದ ಸಂಭ್ರಮದಿಂದ ನರ್ತನಮಾಡಿ, **ಅರಂಗಾವೆನ್ರು**= ಶ್ರೀರಂಗನಾಥ! ಎಂದು ಭಗವಂತನ ನಾಮಗಳನ್ನು ಹೇಳುತ್ತಾ, **ಅಳೈಯಾ**= ಅವನನ್ನು ಕರೆಯುತ್ತಾ, **ಎನ್ರನ್ ಮಾಲುಕ್ಕು**=ನನ್ನ ವಿಷಯದಲ್ಲಿ ವಿಶೇಷವಾಗಿ ವ್ಯಾಮೋಹದಿಂದ ಕೂಡಿರುವ ನಮ್ಮ ಭಗವಂತನ ವಿಷಯದಲ್ಲಿಯೇ, **ಮಾಲೆಳು-ನ್ದೊಳಿನ್ದೇನ್**=ವ್ಯಾಮೋಹದಿಂದ ಹುಚ್ಚನಂತಿದ್ದೇನೆ. ||೨||

"ಸಂಜ್ಞಾಸುಂದರಮಂಘ್ರಿಸುಂದರಮಹೋ ಭಾಸ್ವತ್ಕಟೀ ಸುಂದರಂ |
ಭೂಷಾಸುಂದರಮಿಂದಿರಾಲಯಲಸದ್ವಕ್ಷಸ್ಥಲೀ ಸುಂದರಂ |
ಕಾಂತಾಸ್ರಗ್ಭುಜಸುಂದರಂ ಸ್ಮಿತಲಸತ್ ಚ್ಛ್ರೀಶಾಲಿದೃಕ್ಸುಂದರಂ
ಕಿಂ ಪ್ರತ್ಯಂಗಮುಪಾಸ್ಮಹೇ ವನಗಿರೌ ಸರ್ವಾತ್ಮನಾ ಸುಂದರಂ"—ಎಂದೂ "ಎನ್ನರಂಗತ್ತಿನ್ನಮುದರ್ ಕುಳಲಳಕರ್ ವಾಯಳಕರ್ ಕಣ್ಣಳಕರ್ ಕೊಪ್ಪೂಳಿಲೆಳಿ ಕಮಲಪ್ಪೂವಳಕರೆಮ್ಮಾನಾರ್"–ಎಂದೂ ಸರ್ವವಿಧವಾದ ಸೌಂದರ್ಯವೂ ಏಕೀಭವಿಸಿ ಮೂರ್ತಿವೆತ್ತಂತಿರುವ ನಮ್ಮ ಶ್ರೀರಂಗನಾಥನ ಸೌಂದರ್ಯವನ್ನು ನೋಡಿ ಅನುಭವಿ-ಸುವುದನ್ನು ಬಿಟ್ಟು, ತುಚ್ಛವಾಗಿರುವ ಓರ್ವ ಪೆಣ್ಮಣಿಯ ತೆಳ್ಳಗಿರುವ ನಡುವನ್ನು ನೋಡಿ, 'ಅದೆಂತಹ ಸೌಂದರ್ಯದಿಂದ ಕೂಡಿದ್ದಾಳೆ'–ಎಂದು ಆ ವಿಷಯದಲ್ಲಿಯೇ ಲಯಹೊಂದಿದ ಮನಸ್ಸುಳ್ಳವರಾಗಿ ಪರಸ್ಪರ ಮಾತನಾಡಿಕೊಳ್ಳುವ ಪ್ರಾಕೃತಿಕ ಜನರೊಡನೆ, ಉತ್ಕೃಷ್ಟವಾದ ಭಗವದ್ವಿಷಯದಲ್ಲಿ ಸ್ಥಿರಗೊಂಡ ಮನಸ್ಸುಳ್ಳ ನಾನು, ಸೇರುವುದಿಲ್ಲ. ನಮ್ಮ ಭಗವಂತನ ಗುಣಾನುಭವವನ್ನು ಮಾಡುತ್ತಾ, ಅವನ ಮೇಲಣ ಪ್ರೀತಿಪ್ರಕರ್ಷದಿಂದ ಭಕ್ತಿಪರವಶನಾಗಿ ಸಂಭ್ರಮದಿಂದ ನರ್ತನಮಾಡುತ್ತಾ, ರಂಗನಾಥನ ನಾಮಗಳನ್ನು "ಮುಡಿಯಾನೇ! ಮೂವುಲಕುಂ ತೊಳುದೇತ್ತುಂ ಶೀರಡಿಯಾನೇ! ಅರಂಗನೇ!"–ಎಂದು ಹೇಳುವಂತೆ, ಪರಮಪದದವರೆವಿಗೂ ಕೇಳುವಂತೆ ಗಟ್ಟಿಯಾಗಿ ಕೂಗುತ್ತಾ, 'ಪತಿಂ ವಿಶ್ವಸ್ಯ'–ಎಂದು ವಿಶ್ವಕ್ಕೆ ಪತಿಯಾಗಿದ್ದರೂ ನನ್ನ ಮೇಲೆ ವಿಶೇಷ ವ್ಯಾಮೋಹವನ್ನು ಹೊಂದಿ—"ಯಮೇವೈಷ ವೃಣುತೇ ತೇನ ಲಭ್ಯಃ ತಸ್ಯೈಷ ಆತ್ಮಾ ವಿವೃಣತೇ ತನೂಂಸ್ವಾಂ"—ಎಂದು ಉಪನಿಷತ್ತು ಹೇಳುವಂತೆ, ತನ್ನ ದಿವ್ಯಮಂಗಳ ವಿಗ್ರಹದ ಸೊಬಗನ್ನು ನಾನು ಅನುಭವಿಸುವಂತೆ ಮಾಡಿರುವ ನನ್ನ ಸ್ವಾಮಿಯ ವಿಷಯದಲ್ಲಿ, ಅತ್ಯಧಿಕವಾದ ವ್ಯಾಮೋಹವನ್ನು ಹೊಂದಿ ಹುಚ್ಚ-ನಂತಿದ್ದೇನೆ. ||೨||

**ಮಾರನಾರ್ ವರಿವೆಂಜಿಲೈಕ್ಕಾಳ್‌ಚೆಯ್ಯುಮ್**
**ಪಾರಿನಾರೊಡುಂ ಕೂಡುವದಿಲ್ಲೈಯಾ**
**ಆರಮಾರ್ವನರಂಗನನನ್ದ್, ನಲ್**
**ನಾರಣ ನರಕಾನ್ತಕ ಪಿತ್ತನೇ ||೩||**

**ಮಾರನಾರ್**=ಮನ್ಮಥನ, **ವರಿ**=ದರ್ಶನೀಯವಾದ, **ವೆವ್**=ಲಕ್ಷ್ಯ ತಪ್ಪದಂತಿರುವ, **ಶಿಲೈಕ್ಕು**=ಧನುಸ್ಸಿಗೆ, **ಆಳ್‌ಶೆಯ್ಯುವ್**=ಕಿಂಕರರಾಗಿರುವ, **ಪಾರಿವಾರೊಡುಂ**=ಭೂಲೋಕದಲ್ಲಿರುವ ಪ್ರಾಕೃತಿಕರೊಡನೆ, **ಯಾನ್**=ನಾನು, **ಕೂಡುವುದಿಲ್ಲೈ**=ಸೇರುವುದಿಲ್ಲ. **ಆರಮ್**=ಮುಕ್ತಾಹಾರದಿಂದ ಪ್ರಕಾಶಿಸುವ, **ಮಾರ್ಪನ್**=ವಕ್ಷಸ್ಥಲವನ್ನು ಹೊಂದಿರುವ, **ಅವನ್ದನ್**=ಅಪರಿಚ್ಛೇದ್ಯವಾದ ಸ್ವರೂಪ ಸ್ವಭಾವಗಳುಳ್ಳ, **ನಲ್‌ನಾರಣನ್**=ಸರ್ವಸ್ವಾಮಿಯಾಗಿ, **ನರಕಾನ್ದ-ಕನ್**=ತನ್ನನ್ನು ಆಶ್ರಯಿಸಿದವರನ್ನು, ನರಕಕ್ಕೆ ಹೋಗದಂತೆ ಕಾಪಾಡುವ, ನರಕಾಸುರ ಸಂಹಾರವನ್ನು ಮಾಡಿದ, **ಅರಂಗನ್**=ರಂಗನಾಥನ ವಿಷಯದಲ್ಲಿಯೇ, **ಪಿತ್ತನ್**=ನಾನು ಹುಚ್ಚನಾಗಿರುತ್ತೇನೆ. ||೩||

"ಮಾರಯತೀತಿ ಮಾರಃ"—ಲೋಕದಲ್ಲಿನ ಜನರೆಲ್ಲರನ್ನೂ ಕೊಲ್ಲುವವನು, ಎಂಬ ಅರ್ಥದಿಂದ 'ಮಾರ'ನೆಂದು ಪ್ರಸಿದ್ಧನಾದ ಮನ್ಮಥನ ಬಾಣಕ್ಕೆ ತುತ್ತಾಗಿ, ಕಾಮಪೀಡಿತರಾಗಿ, ಇಂದ್ರಿಯ ವಿಷಯಗಳನ್ನು ಹುಡುಕುತ್ತಾ ಅಲೆಯುತ್ತಿರುವ ಪ್ರಾಕೃತಿಕ ಜನರೊಡನೆ ನಾನು ಸೇರುವುದಿಲ್ಲ.

"ಕೋಲಮಾಮಣಿಯಾರಮುಮ್ ಮುತ್ತುತ್ತಾಮುಮ್ ಮುಡಿವಿಲ್ಲ-ದೋರೆಳಿಲ್, ನೀಲಮೇನಿ ಅಯ್ಯೋ! ನಿರೈಕೊಂಡದೆನ್ನೆಂಜಿನ್ನೈಯೇ!" ಎಂದು ಹೇಳಲಾಗುವ, ಮುಕ್ತಾಹಾರದಿಂದ ಪ್ರಕಾಶಿಸುವ ವಕ್ಷಸ್ಥಲವನ್ನು ಹೊಂದಿರುವ, "ಸತ್ಯಂ ಜ್ಞಾನಂ ಅನಂತಂ ಬ್ರಹ್ಮ"–ಎಂದು ಉಪನಿಷದ್ವಾಣಿಯು ಉದ್ಘೋಷಿಸುವಂತೆ, ಅಳಿಯಲಾರದ ಸ್ವರೂಪ ಸ್ವಭಾವಗಳನ್ನು ಹೊಂದಿ 'ಅನಂತ'ನೆಂದು ಕರೆಯಲ್ಪಡುವ, ಸರ್ವಸ್ವಾಮಿಯಾಗಿ ನಾರಾಯಣಶಬ್ದವಾಚ್ಯನಾದ ತನ್ನನ್ನು ಆಶ್ರಯಿಸಿದವರನ್ನು ನರಕಕ್ಕೆ ಹೋಗದಂತೆ ಕಾಪಾಡುವ, ನರಕಾಸುರನನ್ನು ಸಂಹಾರಮಾಡಿದ, ರಂಗನಾಥನ ವಿಷಯದಲ್ಲಿಯೇ ವಿಶೇಷವಾದ ವ್ಯಾಮೋಹದಿಂದ ನಾನು (ಲೋಕದಲ್ಲಿನ ಜನರ ಕಣ್ಣಿಗೆ) ಹುಚ್ಚನಂತಿರುತ್ತೇನೆ. ||೩||

**ಉಂಡಿಯೇಯುಡೈಯೇ ಯುಗನ್ದೋಡುಮ್, ಇ**
**ಮ್ಮಣ್ಡಲತ್ತೊಡುಂ ಕೂಡುವದಿಲ್ಲೈಯಾನ್**
**ಅಣ್ಡವಾಣನರಂಗನ್ ವನ್ ಪೇಯ್‌ಮುಲೈ**
**ಉಣ್ಡವಾಯನ್ರನುನ್ಮತ್ತನ್ ಕಾಣ್ಮಿನೇ** ||೪||

**ಉಂಡಿ**=ಆಹಾರವನ್ನೂ, **ಉಡೈ**=ವಸ್ತ್ರವನ್ನೂ, **ಉಕನ್ದು ಓಡುಂ**=ಪಡೆಯಬೇಕೆಂದು ಕ್ಲೇಶವನ್ನೂ ಲಕ್ಷ್ಯಮಾಡದೆ ಸಂತೋಷದಿಂದಲೇ ಓಡುತ್ತಾ ತಿರಿಯುವ, **ಇಮ್ಮಂಡಲತ್ತೊಡುಂ**=ಈ ಭೂಮಂಡಲದಲ್ಲಿರುವವರೊಡನೆ,

**ಯಾನ್**=ನಾನು, **ಕೂಡುವುದಿಲ್ಲೈ**=ಸೇರುವುದಿಲ್ಲ. **ಅಣ್ಡಂ**=ಅಂಡಾಂತ-ರ್ವರ್ತಿಗಳಾದ ಬ್ರಹ್ಮಾದಿಗಳಿಗೂ, **ವಾಣನ್**=ನಿರ್ವಾಹಕನಾದ, **ವಲ್**=ವಿಷ ಪೂರಿತವಾದ, **ಪೇಯ್**=ಪೂತನಿಯ, **ಮುಲೈ**=ಮುಲೈಹಾಲನ್ನು, **ಉಂಡ**= (ಅವಳ ಪ್ರಾಣಸಹಿತ) ಕುಡಿದ, **ವಾಯನ್**=ಬಾಯಿನಿಂದ ಕೂಡಿದ, **ಅರಂಗನ್-ತನ್**=ಶ್ರೀರಂಗನಾಥನ ವಿಷಯದಲ್ಲಿಯೇ, **ಉನ್ಮತ್ತನ್‌ಕಾಣ್ಮಿನ್** = ನಾನು ಹುಚ್ಚನಾಗಿರುವುದನ್ನು ಕಾಣಿರಿ. ||೪||

ಉಣ್ಣಾನಾಳ್ ಪಶಿಯಾವದೊನ್ರಿಲ್ಲೈ ಓವಾದೇ ನಮೋ ನಾರಣಾವೆನ್ರು, ಎಣ್ಣಾನಾಳುಂ ಋಗ್ಯಜುಸ್ಸಾಮವೇದಂ – ಎನ್ರುನಾಣ್ಮಲರ್‌ಕೊಂಡು ಉನಪಾದಂ ನಣ್ಣಾನಾಳ್ ಅನ್ರು ಎನಕ್ಕು ಅವೈಪಟ್ಟಿಣಿನಾಳೇ"—(ಊಟಮಾಡದ ದಿನವು ನನಗೆ ಹಸಿವಿನಿಂದಿರುವ ದಿನವಲ್ಲ, 'ಓಂ ನಮೋ ನಾರಾಯಣಾಯ'–ಎಂದು ಹೇಳದೇ, ಋಗ್ಯಜುಸ್ಸಾಮ ಅಥರ್ವ ವೇದಗಳ ನಾಲ್ಕು ಮಂತ್ರಪುಷ್ಪಗಳನ್ನು ಭಗವಂತನ ಅಡಿದಾವರೆಯಲ್ಲಿ ಸಮರ್ಪಿಸದ ದಿನವೇ ನನಗೆ ಹಸಿವಿನಿಂದ ಕೂಡಿದ ದಿನ) ಎಂದು **ಪೆರಿಯಾಳ್ವಾರ್**ರವರು ಹೇಳಿದಂತೆಯೂ; "ಉಣ್ಣುಂ ಶೋರು ಪರುಕು ನೀರ್ ತಿನ್ನುಂ ವೆತ್ತಿಲೈಯುಮ್ ಎಲ್ಲಾಂ ಕಣ್ಣನ್"—(ಧಾರಕವಾಗಿ ತಿನ್ನುವ ಅನ್ನವೂ, ಪೋಷಕವಾಗಿ ಕುಡಿಯುವ ತೀರ್ಥವೂ, ಭೋಗ್ಯವಸ್ತುವಾಗಿ ಸೇವಿಸುವ ತಾಂಬೂಲವೂ—ಎಲ್ಲವೂ ಪರಮಾತ್ಮನೇ ಆಗಿದ್ದಾನೆ) ಎಂದು ನಮ್ಮಾಳ್ವಾರವರು ಹೇಳಿದಂತೆಯೂ ಇರುವ ನಾನು, ಕೇವಲ ಪ್ರಾಕೃತಿಕವಾದ ಅನ್ನಾಹಾರಗಳನ್ನೂ ವಸ್ತುಗಳನ್ನೂ ಸಂಪಾದಿಸಬೇಕೆಂದು ಹುಡುಕುತ್ತಾ ಅಲೆಯುವ ಪ್ರಾಕೃತಿಕ ಜನರೊಡನೆ ಸೇರುವುದಿಲ್ಲ.

ಬ್ರಹ್ಮಾದಿಗಳಿಗೂ ನಿರ್ವಾಹಕನಾದ, ವಿಷಮಿಶ್ರಿತವಾದ ಪೂತನಿಯ ಮುಲೈ-ಹಾಲನ್ನು ಅವಳ ಪ್ರಾಣಸಹಿತ ಪಾನಮಾಡಿದ ವದನಾರವಿಂದದಿಂದ ಕೂಡಿದ, "ಸ್ತನ್ಯೇನ ಕೃಷ್ಣಃ ಸಹಪೂತನಾಯಾಃ ಪ್ರಾಣಾನ್ ಪಫೌ ಲುಪ್ತಪುನರ್ಭವಾಯ | ಯದದ್ಭುತಂ ಭಾವಯತಾಂ ಜನಾನಾಂ ಸ್ತನಂಧಯತ್ವಂ ನ ಪುನರ್ಬಭೂವ ||" —ಎಂಧು ಹೇಳಿದಂತೆ, ಈ ವೃತ್ತಾಂತವನ್ನು ಸ್ಮರಿಸುವವರಿಗೂ ಪುನರ್ಜನ್ಮವಿಲ್ಲದಂತೆ ಮಾಡುವ, ಶ್ರೀರಂಗನಾಥನ ವಿಷಯದಲ್ಲಿಯೇ ನಾನು ವ್ಯಾಮೋಹದಿಂದ ಹುಚ್ಚ-ನಾಗಿರುತ್ತೇನೆ. ||೪||

**ತೀದಿಲ್ ನನ್ನೆರಿನಿರ್ಕವಲ್ಲಾದುಶೆಯ್**
**ನೀದಿಯಾರೊಡುಮ್ ಕೂಡುವುದಿಲ್ಲೈಯಾನ್**
**ಆದಿಯಾಯ ನರಂಗ ನನ್ವಾದಮರ್ತ್ತೆ**
**ಪೇದೈಮಾವಣವಾಳನ್ರನ್ ಪಿತ್ತನೇ** ||೫||

**ತೀದಿಲ್**=ದೋಷರಹಿತವಾಗಿ ಭಗವತ್ಪ್ರಾಪ್ತಿಗೆ ಕಾರಣವಾಗುವ, **ನನ್ನೆರಿ**= ಒಳ್ಳೆಯ ದಾರಿಯು, **ನಿರ್ಕ**=ಇರುವಲ್ಲಿ, **ಅಲ್ಲಾದುಶೆಯ್**=ಆ ಭಗವತ್ಪ್ರಾಪ್ತಿಗೆ ಕಾರಣವಾಗದ, ಕ್ಷುದ್ರಪುರುಷಾರ್ಥಗಳನ್ನು ಬಯಸಿ ನಿಂತಿರುವ, **ನೀದಿಯಾ-ರೊಡುಂ**=ಪ್ರಾಕೃತರೊಡನೆ, **ಯಾನ್**=ನಾನು, **ಕೂಡುವ್ವದಿಲ್ಲೈ**= ಸೇರುವುದಿಲ್ಲ. **ಆದಿ**=ಜಗತ್ಕಾರಣಭೂತನಾದ, **ಆಯನ್**=ಕೃಷ್ಣನಾಗಿ ಅವತರಿಸಿ ಸರ್ವಸುಲಭನಾದ, **ಅವ್**=ಸುಂದರವಾದ, **ತಾಮರ್ಶೈ**=ತಾವರೆಯ ಹೂವಿನಲ್ಲಿ ವಾಸಮಾಡುವ, **ಪೇತೈ**=ಮಹಾಲಕ್ಷ್ಮಿಗೆ, **ಮಾಮಣವಾಳನ್**=ವಲ್ಲಭನಾದ, **ಅರಂಗನ್‌ತನ್**=ಶ್ರೀರಂಗನಾಥನ ವಿಷಯದಲ್ಲಿ, **ಪಿತ್ತನ್**=ವ್ಯಾಮೋಹದಿಂದ ಹುಚ್ಚನಾಗಿದ್ದೇನೆ. ||೫||

ಪರಮಕಾರುಣಿಕನಾದ ಸರ್ವೇಶ್ವರನು "ಹರ್ತುಂ ತಮಸ್ಸದಸತೀ ಚ ವಿವೇಕ್ತು-ಮೀಶೋ ಮಾನಂ ಪ್ರದೀಪಮಿವ ಕಾರುಣಿಕೋ ದದಾತಿ ||"—ಎಂದು ಹೇಳುವಂತೆ, ಕತ್ತಲೆಯಲ್ಲಿರುವವರಿಗೆ ಕೈದೀಪದಂತೆ, ಅಜ್ಞಾನದಲ್ಲಿ ಮುಳುಗಿದವರಿಗೆ ಜ್ಞಾನವನ್ನು ತೋರುವ ಶಾಸ್ತ್ರವೆಂಬ ದೀಪಗಳನ್ನು ಕೊಟ್ಟು, ಅದರಿಂದ 'ಭಗವಂತನನ್ನು ಸೇರುವು ದೊಂದನ್ನುಳಿದು ಬೇರೆ ಎಲ್ಲ ವಿಧವಾದ ಆಸೆಗಳೂ ಕ್ಷುದ್ರವಾದುದು, ಈ ಚೇತನಾ-ಚೇತನ ವರ್ಗಕ್ಕೆಲ್ಲ ಅವನೇ ಸ್ವಾಮಿ, ಆದುದರಿಂದ ನಮ್ಮದೆಂದು ಹೇಳಲಾಗುವ ಚೇತನಾಚೇತನ ವರ್ಗವೆಲ್ಲದರ ರಕ್ಷಾಭಾರವನ್ನೂ ಅವನಿಗೆ ಒಪ್ಪಿಸುವುದೇ ನಮಗೆ ಸ್ವರೂಪ, ಕ್ಷೇಮಕರವಾದುದು, ಆ ರೀತಿ ಒಪ್ಪಿಸಿದಾಗ ಮಾತ್ರವೇ ನಾವು ನಿರ್ಭರರೂ ನಿರ್ಭಯರೂ ಆಗಿ ಪರಿಪೂರ್ಣವಾದ ಆನಂದದಿಂದಿರಬಹುದು. ಲೋಕದಲ್ಲಿ ಆಪಾತತಃ ಆನಂದವೆಂದು ತೋರುವುದೆಲ್ಲವೂ, ಕೇವಲ ತೋರಿಕೆ ಮಾತ್ರ, ಅವು ದುಃಖದಲ್ಲಿಯೇ ಪರ್ಯವಸಾನವಾಗುತ್ತದೆ'—ಎಂದು ಶಾಸ್ತ್ರವಚನಗಳಿಂದ ಸ್ಪಷ್ಟವಾಗಿ ಕರತಲಾ-ಮಲಕವಾಗಿ ತತ್ತ್ವವನ್ನು ತೋರಿಕೊಟ್ಟರೂ, ಭಗವತ್ಪ್ರಾಪ್ತಿಗೆ ಆಸೆಪಡದೆ, ತದ್ವಿರುದ್ಧವಾದ ಕ್ಷುದ್ರಪುರುಷಾರ್ಥಗಳನ್ನು ಬಯಸಿ ನಿಂತಿರುವ ಪ್ರಾಕೃತ ಜನರೊಡನೆ ನಾನು ಸೇರುವುದಿಲ್ಲ.

"ಏಕೋ ಹವೈ ನಾರಾಯಣ ಆಸೀತ್"– ಎಂದು ಹೇಳುವಂತೆ, ಸಕಲ ಜಗತ್ತಿಗೂ ಕಾರಣಭೂತನಾಗಿದ್ದರೂ, ತನ್ನ ಸೌಲಭ್ಯ ಸೌಶೀಲ್ಯಗುಣಗಳಿಂದ ಕೃಷ್ಣನಾಗಿ ಅವತರಿಸಿದ, ಭಕ್ತರುಗಳ ರಕ್ಷಣೆಯ ವಿಷಯದಲ್ಲಿ ಪುರುಷಾಕಾರ-ಭೂತಳಾದ, ತಾವರೆಯ ಪುಷ್ಪದಲ್ಲಿ ವಾಸಿಸುವ ಮಹಾಲಕ್ಷ್ಮಿಯ ವಲ್ಲಭನಾದ ರಂಗನಾಥನ ವಿಷಯದಲ್ಲಿಯೇ ಅತಿಯಾದ ವ್ಯಾಮೋಹದಿಂದ ಕೂಡಿದವನಾಗಿ ನಾನು ಹುಚ್ಚನಂತಿದ್ದೇನೆ. ||೫||

ಎಮ್ಬರತ್ತರಲ್ಲಾರೊಡುಮ್ ಕೂಡಲನ್
ಉಮ್ಬರ್ವಾಳ್ವೈಯೊನ್ರಾಗಕ್ಕರುದಿಲನ್
ತಮ್ಬಿರಾನ ಮರ್ಕರಂಗನಕರ್
ಎಮ್ಬಿರಾನುಕ್ಕೆಳುಮ್ಮೈಯುಮ್ ಪಿತ್ತನೆ ||೬||

**ಎಮ್ಬರತ್ತರಲ್ಲಾರೊಡುಮ್**=ನನ್ನ ಹಾಗೆ ಅನನ್ಯ ಪ್ರಯೋಜನರಲ್ಲಾದವರೊಡನೆ, **ಕೂಡಲನ್** = ನಾನು ಸೇರುವುದಿಲ್ಲ. **ಉಮ್ಬರ್** = ದೇವತೆಗಳ, **ವಾಳ್ವೈ**=ಸ್ವರ್ಗಾದಿ ಭೋಗಗಳನ್ನೂ, **ಒನ್ರಾಕ**=ಒಂದು ಪುರುಷಾರ್ಥವಾಗಿ, **ಕರುದಿಲನ್**=ಪರಿಗಣಿಸುವುದಿಲ್ಲ. **ಅಮರರ್ಕು**=ನಿತ್ಯಸೂರಿಗಳಿಗೂ, **ತಮ್ಬಿರಾನ್**=ಸ್ವಾಮಿಯಾಗಿ, **ಅರಂಗನಕರ್**=ಸಂಸಾರಿಗಳಿಗೂ ಸುಲಭನಾಗಿ ಶ್ರೀರಂಗ ಕ್ಷೇತ್ರದಲ್ಲಿ ಬಿಜಯಮಾಡಿಸಿರುವ, **ಎಮ್ಬಿರಾನಕ್ಕು**=ನನಗೆ ಉಪಕಾರಕನಾದ ನನ್ನ ಸ್ವಾಮಿಯ ವಿಷಯದಲ್ಲಿ, **ಎಳುಮ್ಮೈಯುಮ್**=ಎಂದೆಂದಿಗೂ, ಕಾಲತತ್ತ್ವವಿರುವವರೆವಿಗೂ, **ಪಿತ್ತನ್**=ವ್ಯಾಮುಗ್ಧನಾಗಿ ಹುಚ್ಚನಾಗಿಯೇ ಇರುತ್ತೇನೆ. ||೬||

"ಮಾತಾ ಪಿತಾ ಭ್ರಾತಾ ನಿವಾಸಃ ಶರಣಂ ಸುಹೃದ್ಗತಿಃ ನಾರಾಯಣಃ" —ಎಂದು ಹೇಳುವಂತೆ ನಾರಾಯಣನನ್ನು ಸಕಲವಿಧ ಬಂಧುವರ್ಗವಾಗಿಯೂ ಉಪಾಯ ಉಪೇಯವಾಗಿಯೂ, ಅನನ್ಯಪ್ರಯೋಜನನಾಗಿ, ಆಶ್ರಯಿಸಿರುವ ನಾನು, ಈ ರೀತಿ ಪರಮಾತ್ಮನನ್ನು ಆಶ್ರಯಿಸದ ಜನರೊಡನೆ ಸೇರುವುದಿಲ್ಲ. ದೇವತೆಗಳ ಭೋಗಗಳನ್ನೂ ಒಂದು ಪುರುಷಾರ್ಥವಾಗಿ ಪರಿಗಣಿಸುವುದಿಲ್ಲ. ನಿತ್ಯಸೂರಿಗಳಿಗೂ ನಾಯಕನಾದ ಶ್ರೀಮನ್ನಾರಾಯಣನು, ಸಂಸಾರಿಚೇತನರಿಗೂ ಸುಲಭನಾಗಿ ದರ್ಶನೀಯನಾಗಿ ಶ್ರೀರಂಗಕ್ಷೇತ್ರದಲ್ಲಿ ಬಿಜಯಮಾಡಿ ನನಗೆ ಉಪಕಾರಕನಾಗಿರುವುದರಿಂದ, ಆ ನನ್ನ ಸ್ವಾಮಿಗೆ ಎಂದೆಂದಿಗೂ ಕಾಲತತ್ತ್ವವಿರುವವರೆವಿಗೂ, ಅವನ ಮೇಲಿನ ವ್ಯಾಮೋಹದಿಂದ ಹುಚ್ಚನಾಗಿಯೇ ಇರುತ್ತೇನೆ. ||೬||

ಎತ್ತಿರತ್ತಿಲುಂ ಯಾರೊಡುಮ್ ಕೂಡುಮ್, ಅ
ಚ್ಚಿತ್ತಂತನ್ನೈತ್ತವಿರ್ತ್ತ ನನ್ ಶೆಂಗಣ್‌ಮಾಲ್
ಅತ್ತನೇ ಅರಂಗಾವೆನ್ರಳೈಕ್ಕಿನ್ರೇನ್
ಪಿತ್ತನಾಯೊಳಿನ್ದೇನ್ ಎಂಬಿರಾನುಕ್ಕೇ ||೭||

**ಎತ್ತಿರತ್ತಿಲುಂ**=(ಸಂಸಾರಿಗಳ ಸಂಸರ್ಗದಿಂದ)ಯಾವ ತರಹದ ಪುರುಷಾರ್ಥಗಳು ಲಭಿಸುವುದೆಂದರೂ, **ಯಾರೊಡುಮ್** = ಅದಕ್ಕೆ ಸಹಾಯಕರಾದ ಯಾರೊಬ್ಬರ ಜೊತೆಯಲ್ಲಿಯೂ, **ಕೂಡುಮ್**=ಸೇರಲು, **ಅಚ್ಚಿತ್ತಂತನ್ನೈ**= ಬೇಕಾದ (ತಕ್ಕುದಾದ) ಮನಸ್ಸನ್ನು, **ಶೆಂಗಣ್‌ಮಾಲ್**=ಪುಂಡರೀಕಾಕ್ಷನಾಗಿ ವ್ಯಾಮೋಹಕ್ಕೆ ಒಳಗುಮಾಡುವ ಶ್ರೀರಂಗನಾಥನು, **ತವಿರ್ತ್ತನನ್**=ತಪ್ಪಿಸಿದನು.

(ಆದುದರಿಂದಲೇ ಸದಾಕಾಲದಲ್ಲಿಯೂ ಅವನನ್ನೇ) **ಅತ್ತನೇ** = ಸರ್ವಸ್ವಾಮಿ ಯಾದವನೇ !, **ಅರಂಗಾ**=ಭಕ್ತರಿಗೆ ಅನುಗ್ರಹ ಮಾಡಬೇಕೆಂದು, ಶ್ರೀರಂಗ ಕ್ಷೇತ್ರದಲ್ಲಿ ಬಿಜಯ ಮಾಡಿಸಿರುವವನೇ ! **ಎನ್ರು**=ಎಂದೂ, **ಅಳೈಕ್ಕಿನ್ರೇನ್**= ಅವನನ್ನೇ ಕೂಗುತ್ತಿರುತ್ತೇನೆ. (ಈ ರೀತಿ ಕೂಗುತ್ತಿದ್ದರೆ ಇತರರು ನಿನ್ನನ್ನು ಹುಚ್ಚ-ನೆನ್ನುವುದಿಲ್ಲವೇ ?–ಎಂದರೆ) **ಎಂಬಿರಾನುಕ್ಕು** = ಮೇಲೆ ಹೇಳಿದಂತೆ ತುಚ್ಛ ವಿಷಯದಲ್ಲಿ ಮನಸ್ಸು ಹೋಗದಂತೆ ಮಾಡಿ ಉಪಕರಿಸಿದ ನನ್ನ ಸ್ವಾಮಿಯ ವಿಷಯದಲ್ಲಿ, **ಪಿತ್ತನಾಯೊಳಿನ್ದೇನ್** = ವ್ಯಾಮುಗ್ಧನಾಗಿ ಹುಚ್ಚನಾಗಿಯೇ ಇರುತ್ತೇನೆ. ||೭||

ಪರಮಾತ್ಮನು ತನ್ನನ್ನೇ ಸೇರಬೇಕೆಂದಿರುವ ಭಕ್ತರನ್ನು ಅನುಗ್ರಹಿಸುವ ಸಲುವಾಗಿಯೇ ಶ್ರೀರಂಗಕ್ಷೇತ್ರದಲ್ಲಿ, ಪುಂಡರೀಕಾಕ್ಷನಾಗಿ, ಸರ್ವಾಂಗಸುಂದರನಾಗಿ ತನ್ನ ಅರ್ಚಾಮೂರ್ತಿಸ್ವರೂಪದಲ್ಲಿ ಬಿಜಯಮಾಡಿಸಿದ್ದಾನೆ. ಇವನು ನನ್ನನ್ನು ತನ್ನ ಬಳಿಗೆ ಕರೆದುಕೊಂಡು ತನ್ನ ಕಣ್ಣುಗಳ ಸೌಂದರ್ಯವನ್ನು ತೋರಿ ನನ್ನ ಮನಸ್ಸನ್ನು ಸೆಳೆದುಕೊಂಡು ಬೇರಾವ ವಸ್ತುವಿನಲ್ಲಿ ನನಗೆ ಆಸೆಯುಂಟಾಗದಂತೆ ಮಾಡಿದ್ದಾನೆ. ಆದುದರಿಂದಲೇ ಪರಮಾತ್ಮನ ವಿಷಯದಿಂದ ದೂರರಾಗಿರುವ ಸಂಸಾರಿ ಚೇತನರು, ಯಾವ ತರಹವಾದ ಪುರುಷಾರ್ಥಗಳು ಲಭಿಸುವುದೆಂದು ಹೇಳಿದರೂ, ಅದಕ್ಕೆ ಕಾರಣರಾದ ಯಾವ ಒಬ್ಬ ಚೇತನನೊಡನೆ ಸೇರಲೂ ತಕ್ಕುದಾದ ಮನಸ್ಸನ್ನು ನಾನು ಹೊಂದಿಲ್ಲ. ನನ್ನ ಮನಸ್ಸು ಸದಾ ಆ ಪರಮಾತ್ಮನನ್ನೇ ಕುರಿತು ಹಾತೊರೆಯು ತ್ತಿರುವುದರಿಂದ, ಎಲ್ಲ ಕಾಲದಲ್ಲಿಯೂ ಅವನನ್ನೇ—'ಸರ್ವ ಸ್ವಾಮಿಯಾದವನೇ !' ಸರ್ವಸುಲಭನಾಗಿ ಶ್ರೀರಂಗದಲ್ಲಿ ಬಿಜಯಮಾಡಿಸಿರುವವನೆ !—ಎಂದು ನಾನಾ ಬಗೆಯಾಗಿ ಗಟ್ಟಿಯಾಗಿ ಕೂಗುತ್ತಿರುತ್ತೇನೆ. ಈ ರೀತಿ ಅರಚುವುದರಿಂದ ನನ್ನ ಸ್ಥಿತಿಯನ್ನರಿಯದ ಇತರರು ನನ್ನನ್ನು ಹುಚ್ಚನೆಂದರೂ ಸರಿಯೆ. ಮೇಲೆ ಹೇಳಿದಂತೆ, ನನಗೆ ತುಚ್ಛ ವಿಷಯಗಳಲ್ಲಿ ಅಭಿಲಾಷೆಯುಂಟಾಗದಂತೆ ಉಪಕರಿಸಿದ ನನ್ನ ಸ್ವಾಮಿಯ ವಿಷಯದಲ್ಲಿ ವಿಶೇಷವಾದ ವ್ಯಾಮೋಹದಿಂದ ಎಂದೆಂದಿಗೂ ಹುಚ್ಚ ನಾಗಿಯೇ ಇರುತ್ತೇನೆ—ಎಂದು ಆಳ್ವಾರರು ಹೇಳಿದ್ದಾರೆ. ||೭||

**ಪೇಯರೇ ಯೆನಕ್ಕು ಯಾವರುಂ ಯಾನುಮೋರ್**
**ಪೇಯನೇ ಯೆವರ್ಕ್ಕುಮಿದುಪೇಶಿಯೆನ್**
**ಆಯನೇಅರಂಗಾ ವೆನ್ರಳೈಕ್ಕಿನ್ರೇನ್**
**ಪೇಯನಾಯೊಳಿನ್ದೇನ್ ಎಂಬೆರುಮಾನುಕ್ಕೇ ||೮||**

**ಯಾವರುಂ**=ಅಲ್ಪ ಅಸ್ಥಿರ ಫಲಗಳನ್ನು ಆಸೆಪಡುವವರೆಲ್ಲರೂ, **ಎನಕ್ಕು**= ಪರಮಪುರುಷಾರ್ಥವನ್ನೇ ಆಸೆಪಡುವ ನನಗೆ, **ಪೇಯರ್** = ಹುಚ್ಚರಂತೆ

ಕಾಣುತ್ತಾರೆ. **ಯಾನುಮ್** = ಆ ರೀತಿ ಇರುವ ನಾನೂ, **ಎವರ್ಕುಮ್** = ಆ ಎಲ್ಲರಿಗೂ, **ಓರ್ ಪೇಯನ್** = ಒಬ್ಬ ಹುಚ್ಚನಂತೆಯೇ ಇದ್ದೇನೆ. **ಇತು** = ಈ ವಿಷಯವನ್ನು, **ಪೇಶಿ** = ಇತರರಿಗೆ ತಿಳಿಯುವಂತೆ ಹೇಳುವುದರಿಂದ, **ಎನ್** = ಏನು ಪ್ರಯೋಜನ? **ಆಯನೇ** = ಕೃಷ್ಣನಾಗಿ ಅವತರಿಸಿ ಸುಲಭನಾಗಿದ್ದವನೇ, **ಅರಂಗಾವೆನ್ರು** = ಈ ಕಲಿಯುಗದಲ್ಲಿ ಜನ್ಮವೆತ್ತಿರುವ ಚೇತನರಿಗೂ ಸರ್ವಸುಲಭನಾಗಿ ಶ್ರೀರಂಗದಲ್ಲಿ ಬಿಜಯ ಮಾಡಿಸಿರುವ ರಂಗನಾಥನೇ!—ಎಂದು ಕೂಗುತ್ತಲೇ ಇರುತ್ತೇನೆ. (ಈ ರೀತಿ) **ಎಂಬಿರಾನುಕ್ಕು** = ನನಗೆ ಉಪಕಾರಕನಾದ ಆ ಭಗವಂತನ ವಿಷಯದಲ್ಲಿ, **ಪೇಯನಾಯೊಳಿನ್ದೇನ್** = ವ್ಯಾಮುಗ್ಧನಾಗಿ ಹುಚ್ಚನಾಗಿಯೇ ಇರುತ್ತೇನೆ. ||೮||

"ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ | ಯಸ್ಯಾಂ ಜಾಗ್ರತಿ ಭೂತಾನಿ ಸಾ ನಿಶಾ ಪಶ್ಯತೋ ಮುನೇಃ ||"—ಎಂದು ಗೀತಾಚಾರ್ಯನು ಹೇಳಿರುವಂತೆ, ಪರಮಪುರುಷಾರ್ಥದ ವಿಷಯವನ್ನೇ ಅರಿಯದಿರುವ ಮತ್ತು ಅಲ್ಪಾ-ಸ್ಥಿರ ಫಲಗಳನ್ನೇ ಆಸೆಪಡುವವರೆಲ್ಲರೂ, ಪರಮ ಪುರುಷಾರ್ಥವನ್ನೇ ಬಯಸುವ, ತುಚ್ಛವಾದ ವಿಷಯಗಳನ್ನೇ ಅರಿಯದಿರುವ ನನ್ನ ಕಣ್ಣುಗಳಿಗೆ ಹುಚ್ಚರಂತೆ ಕಾಣುತ್ತಾರೆ. ನಾನೂ ಅವರ ಕಣ್ಣುಗಳಿಗೆ ಹುಚ್ಚನಂತಿದ್ದೇನೆ. ["ಊಮ್ಮೈಯ-ರೋಡುಶೆವಿಡರ್ ವಾರ್ತೈರ್"—"ಘೋರ್ಕಲ್ಲ ಮೇಲೆ ಮಳೆ ಸುರಿದಂತೆ"—ಎಂದು ಹೇಳುವಂತೆ] ಈ ನನ್ನ ವಿಷಯದಲ್ಲಿ ಸ್ವಲ್ಪವೂ ತಿಳಿಯಬೇಕೆಂಬ ಆಸೆಯೇ ಇಲ್ಲದಿರುವವರಿಗೆ ಇದರ ಮರ್ಮವನ್ನು ಪ್ರಕಾಶಪಡಿಸುವುದರಿಂದೇನು ಪ್ರಯೋಜನ. ಅದಕ್ಕಿಂತಲೂ ಮಿಗಿಲಾಗಿ ನನ್ನ ಸ್ವಾಮಿಯನ್ನೇ—ಕೃಷ್ಣನಾಗಿ ಅವತರಿಸಿ ಸುಲಭನಾಗಿದ್ದವನೇ!—ಈ ಕಲಿಯುಗದಲ್ಲಿರುವ ಸರ್ವಚೇತನರಿಗೂ ಸುಲಭನಾಗಿ ಶ್ರೀರಂಗದಲ್ಲಿ ಬಿಜಯಮಾಡಿಸಿರುವ ಶ್ರೀರಂಗನಾಥನೇ—ಎಂದು ನಾನಾ ನಾಮಗಳಿಂದ ಘಟ್ಟಿಯಾಗಿ ಕೂಗುತ್ತೇನೆ. ಈ ರೀತಿ ಅರಚುವುದರಿಂದ ನನ್ನನ್ನು ಇತರರು ಹುಚ್ಚನೆಂದರೂ ಸರಿಯೇ. ನನಗೆ ಉಪಕಾರಕನಾದ ಆ ಭಗವಂತನ ವಿಷಯದಲ್ಲಿ ಅತಿಯಾದ ವ್ಯಾಮೋಹದಿಂದ ಹುಚ್ಚನಾಗಿಯೇ ಇರುತ್ತೇನೆ — ಎಂದು ಹೇಳಿದ್ದಾರೆ. ||೮||

**ಅಂಗ್ಕೈಯಾಳ್ಯರಂಗನಡಿಯಿಣೈ**
**ತಂಗುಶಿನ್ದೈತನಿಪ್ಪೆರುಂ ಪಿತ್ತನಾಯ್**
**ಕೊಂಗರ್ ಕೋನ್ ಕುಲಶೇಖರನ್ ಶೊನ್ನಶೊಲ್**
**ಇಂಗುವಲ್ಲವರ್ಕ್ಕು ಏದಮೊನ್ರಿಲ್ಲೈಯೇ ||೯||**

**ಅವ್**=ಸುಂದರವಾದ, **ಕೈ**=ಕೈಯಲ್ಲಿ, **ಆಳಿ್**=ಚಕ್ರಾಯುಧವನ್ನು ಧರಿಸಿರುವ, **ಅರಂಗನ್** = ಶ್ರೀರಂಗನಾಥನ, **ಅಡಿಯಿಣ್ಣೈ** = ತಿರುವಡಿಗಳಲ್ಲಿ, **ತಂಗು**=ಯೋಗ್ಯವಾದ (ಸ್ಥಿರವಾದ), **ಶಿನ್‌ದೈ** = ಮನಸ್ಸನ್ನು ಹೊಂದಿರುವ, **ತನಿ** = ಅದ್ವಿತೀಯವಾದ, **ಪೆರುಮ್**=ಅತ್ಯಧಿಕವಾದ, **ಪಿತ್ತನಾಯ್**= ವ್ಯಾಮೋಹವನ್ನು ಹೊಂದಿರುವ, **ಕೊಂಗರ್**=ಕೊಂಗುನಾಡಿನಲ್ಲಿ ವಾಸಿಸುವವರಿಗೆ, **ಕೋನ್** = ಸ್ವಾಮಿಯಾದ, **ಕುಲಶೇಖರನ್** = ಕುಲಶೇಖರಾಳ್ವಾರವರು, **ಶೊನ್ನ**=ಹೇಳಿದ, **ಶೊಲ್**=ಈ ಹತ್ತು ಹಾಡುಗಳನ್ನೂ, **ವಲ್ಲವರ್‌ಕು**= ಅಭ್ಯಾಸ ಮಾಡುವವರಿಗೆ, **ಇಂಗು**=ಈ ಲೋಕದಲ್ಲಿಯೂ, **ಏತಮ್ ಒನ್ರು**= ಭಗವತ್ಪ್ರಾಪ್ತಿಗೆ ವಿರೋಧಿಯಾದ ಯಾವ ಒಂದು ದುಃಖವೂ, **ಇಲ್ಲೈ**=ಉಂಟಾಗುವುದಿಲ್ಲ. ||೯||

"**ಎಪ್ಪೋದುಂ ಕೈಕಳಿಲಾನೇಮಿಯಾನ್ ನಮ್ಮೇಲ್ ವಿನೈಕಡಿವಾನ್**" ಎಂದೂ "ಪಾತು ಪ್ರಣತರಕ್ಷಾಯಾಂ ವಿಲಂಬಮಸಹನ್ನಿವ | ಸದಾ ಪಂಚಾಯುಧೀಂ ಭಿಭ್ರತ್ ಸ ವಃ ಶ್ರೀರಂಗನಾಯಕಃ ||"—ಎಂದು ಆಳ್ವಾರಾಚಾರ್ಯರು ಹೇಳಿರುವಂತೆ ತನ್ನಲ್ಲಿ ಶರಣಾಗತರಾದ ಚೇತನರನ್ನು ರಕ್ಷಿಸುವ ವಿಷಯದಲ್ಲಿ ವಿಳಂಬವನ್ನು ಸಹಿಸದ ರಂಗನಾಥನು, ಶರಣಾಗತರ ದುರಿತಗಳನ್ನು ಕೂಡಲೇ ದೂರಮಾಡಲು ಸದಾ ಯಾವಾಗಲೂ ಪಂಚಾಯುಧವನ್ನು ಧರಿಸಿಕೊಂಡೇ ಇರುತ್ತಾನೆ. ಅದರಲ್ಲೂ ವಿಶೇಷವಾಗಿ ತನ್ನ ಸುಂದರವಾದ ಬಲಗೈಯಲ್ಲಿ, ಅಜ್ಞಾನಾಂಧಕಾರವನ್ನು ಹೋಗಲಾಡಿಸುವ ಚಕ್ರವನ್ನು ಧರಿಸಿದ್ದಾನೆ. ಈ ರೀತಿಯಾದ ರಂಗನಾಥನ ತಿರುವಡಿಗಳಲ್ಲಿ ಯೋಗ್ಯವಾದ, ಸ್ಥಿರವಾದ ಮನಸ್ಸುಳ್ಳ ಅದ್ವಿತೀಯವಾದ, ಅತ್ಯಧಿಕವಾದ ವ್ಯಾಮೋಹವನ್ನು ಹೊಂದಿರುವ, ಕೊಂಗುನಾಡಿನಲ್ಲಿ ವಾಸಿಸುವವರಿಗೆ ಸ್ವಾಮಿಯಾದ, ಕುಲಶೇಖರಾಳ್ವಾರವರು ಹೇಳಿರುವ, ಈ ಹತ್ತು ಪದ್ಯಗಳನ್ನೂ ಅಭ್ಯಾಸಮಾಡು-ವವರಿಗೆ ಈ ಲೋಕದಲ್ಲಿರುವಲ್ಲಿಯೇ ಭಗವತ್ಪ್ರಾಪ್ತಿಗೆ ವಿರೋಧಿಯಾದ—ದೇಹಾತ್ಮ-ಭ್ರಮ, ಸ್ವತಂತ್ರಾತ್ಮಭ್ರಮ, ಅನ್ಯಶೇಷತ್ವಭ್ರಮ (ತನ್ನ ರಕ್ಷಣೆಯನ್ನು ತಾನೇ ಮಾಡಿಕೊಳ್ಳಲು ಸಮರ್ಥ ಎಂಬ) ಸ್ವರಕ್ಷಣೇಸ್ವಾನ್ವಯಭ್ರಮ, ನಿಜವಾದ ಬಂಧುವಾದ ಪರಮಾತ್ಮನನ್ನುಳಿದು, ಬಂಧುಗಳೆಂದು ತೋರುವ ಜನರಲ್ಲಿ ಉಂಟಾಗುವ ಬಾಂಧವಭ್ರಮ, ವಿಷಯಾನ್ತರಗಳಲ್ಲಿ ಭ್ರಮವೇ ಮೊದಲಾದುವುವು ಸಂಭವಿಸದೆ, ತಮ್ಮ ಹಾಗೆಯೇ ಭಗವಂತನ ವಿಷಯದಲ್ಲಿ ಮಾತ್ರ ಅತ್ಯಧಿಕವಾದ ವ್ಯಾಮೋಹವು ಏರ್ಪಡುತ್ತದೆ—ಎಂದು ಆಳ್ವಾರರು ಈ ದಶಕಕ್ಕೆ ಫಲಶ್ರುತಿಯನ್ನು ಈ ಪದ್ಯದಲ್ಲಿ ಹೇಳಿ ದಶಕವನ್ನು ಮುಗಿಸಿದ್ದಾರೆ. ||೯||

# ಪೆರುಮಾಳ್ ತಿರುಮೊಳಿ_ನಾಲ್ಕನೆಯ ದಶಕ

ಲೋಕದಲ್ಲಿ ಪ್ರತಿಯೊಬ್ಬರೂ ಒಂದೊಂದು ತರಹದ ಉತ್ಕರ್ಷವನ್ನು ಪಡೆಯು ಬೇಕೆಂಬ ಆಸೆಯನ್ನು ಹೊಂದಿರುತ್ತಾರೆ. ಕೆಲವರು ಅತ್ಯಧಿಕವಾದ ಧನವನ್ನು ಸಂಪಾದಿಸಿ ಧನಿಕರಲ್ಲಿ ನಾವು ಉತ್ಕೃಷ್ಟರಾಗಬೇಕೆಂದು ಆಸೆಪಡುತ್ತಾರೆ. ಮತ್ತೆ ಕೆಲವರು ವಿದ್ಯೆಯನ್ನು ಚೆನ್ನಾಗಿ ಅಧಿಕರಿಸಿ ಉತ್ಕೃಷ್ಟರಾಗಬೇಕೆನ್ನುತ್ತಾರೆ. ಕೆಲವರು ನವಯೌವನಾದಿ ವಯಸ್ಸಿನಿಂದ ಕೂಡಿ ತಾವು ಉತ್ಕೃಷ್ಟರಾಗಿದ್ದಾರೆಂದು ತಿಳಿಯುತ್ತಾರೆ. ಮತ್ತೆ ಕೆಲವರು ಒಳ್ಳೆಯ ರೂಪುಲಾವಣ್ಯದಿಂದ ಕೂಡಿ ತಾವು ಉತ್ಕೃಷ್ಟರೆಂದು ಭಾವಿಸುತ್ತಾರೆ. ಕೆಲವರು ಉತ್ತಮವಾದ ಜಾತಿಕುಲದಲ್ಲಿ ಹುಟ್ಟಿ, ಅದರ ಅಭಿಮಾನದಿಂದ ತಾವು ಉತ್ಕೃಷ್ಟರೆಂದುಕೊಳ್ಳುತ್ತಾರೆ. ಇದಾವುದರಿಂದ ಬರುವ ಉತ್ಕರ್ಷವೂ ಉತ್ಕರ್ಷವಲ್ಲ. ಭಗವತ್ಸಂಬಂಧದಿಂದ ಬರುವ ಉತ್ಕರ್ಷವೇ ನಿಜವಾದ ಉತ್ಕರ್ಷವೆಂದು ಶುಕಬ್ರಹ್ಮರು ಭಾಗವತ ಪುರಾಣದಲ್ಲಿ ಉದ್ಧವರು ಹೇಳಿದ "ಆಸಾಮಹೋ ಚರಣರೇಣುಜುಷಾಂ ಅಹಂ ಸ್ಯಾಂ। ಬೃಂದಾವನೇ ಕಿಮಪಿ ಗುಲ್ಮಲತೌಷಧೀನಾಂ। ಯಾದುಸ್ತ್ಯಜಂ ಸ್ವಜನಮಾರ್ಯಜನಂ ಚ ಹಿತ್ವಾ ಭೇಜುರ್ಮುಕುಂದ ಪದವೀಂ ಶ್ರುತಿಭಿರ್ವಿಮೃಗ್ಯಾಮ್" (ಯಾವ ಗೋಪಿಕಾ ಸ್ತ್ರೀಯರು ತ್ಯಾಗಮಾಡಲು ಸಾಧ್ಯವಲ್ಲದಿರುವ ತಮ್ಮ ಬಂಧುವರ್ಗದವರನ್ನೂ ಹಿರಿಯರನ್ನೂ ತ್ಯಾಗಮಾಡಿ, ಶ್ರುತಿಗಳಿಂದಲೂ ಅರಿಯಲು ಸಾಧ್ಯವಿಲ್ಲದೆ "ಯತೋ ವಾಚೋ ನಿವರ್ತಂತೇ! ಅಪ್ರಾಪ್ಯ ಮನಸಾ ಸಹ।"—ಹುಡುಕಲ್ಪಡುತ್ತಿರುವ ಪರಬ್ರಹ್ಮತತ್ವಸ್ವರೂಪನಾದ ಶ್ರೀಕೃಷ್ಣನನ್ನೇ ಹಿಂಬಾಲಿಸಿಹೋದರೋ, ಆ ಭಗವದ್ಭಕ್ತರಾದ ಗೋಪಿಯರ ಪಾದಧೂಳು ಅಂಟಿಕೊಳ್ಳುವಂತೆ, ನಾನು ಅವರು ಸಂಚರಿಸುವ ಬೃಂದಾವನದಲ್ಲಿ ಯಾವುದಾದರೊಂದು ಪೊದೆಯಾಗಿಯೋ, ಲತೆಯಾಗಿಯೋ, ಮೂಲಿಕೆಯಾಗಿಯೋ ಇರುವಂತಾಗಬೇಕು.) ಮತ್ತು "ಅಹಂಕದಂಬೋ ಭೂಯಾಸಂ ಕುಂದೋ ವಾ ಯಮುನಾತಟೇ"–(ನಾನು ಯಮುನಾನದಿಯ ದಡದಲ್ಲಿ ಕದಂಬವೃಕ್ಷವಾಗಿಯೋ, ಕುಂದವೃಕ್ಷವಾಗಿಯೋ ಹುಟ್ಟಬೇಕಾಗಿತ್ತು)—ಎಂಬ ಮಾತುಗಳ ಮುಖಾಂತರ ಸ್ಪಷ್ಟಪಡಿಸಿದ್ದಾರೆ. ಅಂತೆಯೇ ಕುಲಶೇಖರಾಳ್ವಾರವರೂ, ಶ್ರೀನಿವಾಸನು ಬಿಜಯಮಾಡಿಸಿರುವ ತಿರುಮಲೆಯಲ್ಲಿ ತಿರ್ಯಕ್, ಸ್ಥಾವರ ಜನ್ಮಗಳಾವುದಾದರೂ ತಮಗೆ ಬರಬೇಕೆಂದು ಪ್ರಾರ್ಥನಾರೂಪವಾಗಿ ಈ ಹತ್ತು ಪದ್ಯಗಳನ್ನು ಹಾಡಿದ್ದಾರೆ.

ಊನೇರು ಶೆಲ್ವತ್ತುಡಂಪಿರವಿಯ್ಯಾನ್ ವೇಂಡೇನ್
ಆನೇರೇಳ್ವೆನ್ರಾನ್ ಅಡಿಮೈತ್ತಿರಮಲ್ಲಾಲ್
ಕೂನೇರು ಶಂಗಮಿಡತ್ತಾನ್ ತನ್ ವೇಂಗಡತ್ತು
ಕೋನೇರಿ ವಾಳುಮ್ ಕುರುಕಾಯ್ ಪಿರಪ್ಪೇನೇ ॥೧॥

**ಯಾನ್**=ವಿವೇಕ ಜ್ಞಾನವನ್ನು ಹೊಂದಿರುವ ನಾನು, **ಆನೇರುವಿಳ್**= ಸಪ್ತ ವೃಷಭಗಳನ್ನೂ, **ವೆನ್ರಾನ್**=(ನಪ್ಪಿನ್ನೈದೇವಿಗಾಗಿ) ಜಯಿಸಿದ, ತಿರುಪತಿಯ ಶ್ರೀನಿವಾಸನಿಗೆ, **ಅಡಿಮೈತ್ತಿರವಲ್ಲಾಲ್**=ಕೈಂಕರ್ಯ ಮಾಡುವುದೊಂದನ್ನು ಬಿಟ್ಟು, **ಊನೇರು**=ಮಾಂಸಪ್ರಚುರವಾದ, **ಶೆಲ್ವಂ**=ಅನಿತ್ಯವಾದ ಐಶ್ವರ್ಯವನ್ನು ಹೊಂದಿರುವ, **ಉಡಲ್‌ಪಿರವಿ**=ಮನುಷ್ಯ ಜನ್ಮವನ್ನು, **ವೇಂಡೇನ್**= ಇಚ್ಛಿಸುವುದಿಲ್ಲ. **ಕೂನ್‌ವಿರು**=(ಭಗವದನುಭವದಿಂದ) ಸೀಳಿಹೋಗಿರುವ, **ಶಂಗಂ**= ಪಾಂಚಜನ್ಯವೆಂಬ ಶಂಖವನ್ನು, **ಇಡತ್ತಾನ್‌ತನ್**=ಎಡಗೈಯಲ್ಲಿ ಹಿಡಿದಿರುವ, **ವೇಂಗಡತ್ತು**=ವೆಂಕಟಾಚಲದಲ್ಲಿ, **ಕೋನ್**= ಸ್ವಾಮಿಗೆಂದೇ ಸಿದ್ಧವಾಗಿರುವ, **ಏರಿ**=ತಟಾಕದಲ್ಲಿ, ಸ್ವಾಮಿ ಪುಷ್ಕರಿಣಿಯಲ್ಲಿ, **ವಾಳುಮ್** = ವಾಸಿಸುವ, **ಕುರುಕಾಯ್** = ಒಂದು ಬಕಪಕ್ಷಿಯಾಗಿ, **ಪಿರಪ್ಪೇನ್** = ಜನ್ಮವೆತ್ತುವಂತೆ ಆದೀತೇ ? ||೧||

ವಿವೇಕ ಜ್ಞಾನವನ್ನು ಹೊಂದಿರುವ ನಾನು, ಕೃಷ್ಣಾವತಾರ ಕಾಲದಲ್ಲಿ ನಪ್ಪಿನ್ನೈ ಪಿರಾಟ್ಟಿಯನ್ನು ಪಡೆಯುವ ಸಲುವಾಗಿ, ಕನ್ಯಾಶುಲ್ಕವಾಗಿಟ್ಟಿದ್ದ ಮದಿಸಿದ ಏಳು ವೃಷಭಗಳನ್ನೂ ನಿರಸನಮಾಡಿದ, "ಕಲೌ ವೇಂಕಟನಾಯಕಃ"—ಎಂದು ಹೇಳುವಂತೆ ಕಲಿಯುಗದ ಸ್ವಾಮಿಯಾಗಿ ವೆಂಕಟಾಚಲದಲ್ಲಿ ಬಿಜಯಮಾಡಿರುವ ಶ್ರೀನಿವಾಸನ ಕೈಂಕರ್ಯ ಮಾಡುವುದೊಂದನ್ನುಳಿದು ಮಾಂಸಪ್ರಚುರವಾದ, ಅನಿತ್ಯವಾದ ಐಶ್ವರ್ಯವನ್ನು ಹೊಂದಿರುವ ಮನುಷ್ಯ ಜನ್ಮವನ್ನು ಇಚ್ಛಿಸುವುದಿಲ್ಲ. ಭಗವದನುಭವ ವಿಶೇಷದಿಂದ ಹಿಗ್ಗಿ ಅರಳಿರುವ ಬಾಯಿಂದ ಕೂಡಿ, ನೋಡುವುದಕ್ಕೆ ಸೀಳಿರುವಂತೆ ತೋರುವ ಪಾಂಚಜನ್ಯವೆಂಬ ಶಂಖವನ್ನು ತನ್ನ ಎಡಗೈಯಲ್ಲಿ ಧರಿಸಿ ವೇಂಕಟಾಚಲದಲ್ಲಿ ನಿಂತಿರುವ ಸ್ವಾಮಿಗೆಂದೇ ಸಿದ್ಧವಾಗಿರುವ—'ಸ್ವಾಮಿ ಪುಷ್ಕರಿಣಿ' ಯಲ್ಲಿ ಒಂದು ಬಕಪಕ್ಷಿಯ ಜನ್ಮವನ್ನಾದರೂ ನಾನು ಪಡೆಯುವಂತಾಗಬೇಕು— ಎಂದು ಆಳ್ವಾರರು ಆಸೆಪಡುತ್ತಾರೆ. ||೧||

**ಆನಾದಶೆಲ್ವತ್ತರಂಪೈಯರ್‌ಗಳ್ ತಚರ್ೂಳ**
**ವಾನಾಳುಮ್ ಶೆಲ್ವಮುಮ್ ಮಣ್ಣರಶುಂ ಯಾನ್ ವೇಂಡೇನ್**
**ತೇನಾರ್ ಪೂಂಶೋಲೈ ತಿರುವೇಂಗಡಚ್ಚುನೈಯಿಲ್**
**ಮೀನಾಯ್ ಪಿರಕ್ಕುಂ ವಿದಿಯುಡೈಯೇನಾವೇನೇ** ||೨||

**ಆನಾದ** = ಅಳಿವಿಲ್ಲದ, **ಶೆಲ್ವತ್ತು** = ನಿತ್ಯಯೌವನವೆಂಬ ಸಂಪತ್ತನ್ನು ಹೊಂದಿರುವ, **ಅರಂಪೈಯರ್‌ಕಳ್**=ಅಪ್ಸರಸ್ತ್ರೀಯರು, **ತನ್‌ಶೂಳ**=ತನ್ನ ಸುತ್ತಲೂ ನಿಲ್ಲುವ, **ವಾನಾಳುಂ**=ಸ್ವರ್ಗಲೋಕಕ್ಕೆ ಅಧಿಪತಿಯಾಗಿರುವಿಕೆ ಎಂಬ **ಶೆಲ್ವಮುಮ್**=ಐಶ್ವರ್ಯವನ್ನೂ, ಮತ್ತು **ಮಣ್ಣರಶುಮ್**=ಈ ಭೂಲೋಕದ

ಸ್ವಾಮಿತ್ವವನ್ನೂ, **ಯಾನ್**=ನಾನು, **ವೇಂಡೇನ್**= ಇಚ್ಛಿಸುವುದಿಲ್ಲ. **ತೇನಾರ್** = ಅಧಿಕವಾದ ಮಧುವನ್ನು ಸ್ರವಿಸುವ, **ಪೂ** = ಹೂವುಗಳಿಂದ ಕೂಡಿರುವ, **ಶೋಲೈ**=ಬಳ್ಳಿಗಳಿಂದ ಸುತ್ತುವರಿಯಲ್ಪಟ್ಟಿರುವ, **ತಿರುವೇಂಗ-ಡವರ್** = ವೇಂಕಟಾಚಲದಲ್ಲಿನ, **ಶುನೈಯಿಲ್** = ಗಿರಿನದಿ (ಝರಿ)ಗಳಲ್ಲಿ, **ಮೀನಾಯ್**=ಮೀನಾಗಿ, **ಪಿರಕ್ಕುಮ್**=ಜನ್ಮಪಡೆಯುವ, **ವಿದಿಯುಡೈಯೇ-ನಾವೇನ್**=ಸುಕೃತ ವಿಶೇಷವನ್ನು ಹೊಂದಿದವನಾಗಬೇಕು. ||೨||

ಹಿಂದಿನ ಪದ್ಯದಲ್ಲಿ ಬಕಜನ್ಮವನ್ನಪೇಕ್ಷಿಸಿ, ಬಕವು ಹಾರುವ ಪಕ್ಷಿಯಾದುದರಿಂದ ಸ್ವಲ್ಪಕಾಲ ಮಾತ್ರ ತಿರುವೇಂಗಡದಲ್ಲಿದ್ದು, ಮತ್ತೊಂದು ಕಡೆಗೆ ಹಾರಬಹುದೆಂದು ಈ ಪದ್ಯದಲ್ಲಿ ಮೀನಿನ ಜನ್ಮವನ್ನು ಆಸೆಪಡುತ್ತಾರೆ.

ಅಳಿವಿಲ್ಲದ ನಿತ್ಯಯೌವನವೆಂಬ ಸಂಪತ್ತನ್ನು ಹೊಂದಿರುವ ಅಪ್ಸರ ಸ್ತ್ರೀಯರು ಸುತ್ತುವರೆದು ನಿಲ್ಲುವ ಭಾಗ್ಯವಿಶೇಷದಿಂದ ಕೂಡಿರುವ ಸ್ವರ್ಗಾಧಿಪತ್ಯವನ್ನೂ ಭೂಲೋಕಾಧಿಪತ್ಯವೆಂಬ ಸಂಪತ್ತನ್ನೂ ನಾನು ಆಸೆಪಡುವುದಿಲ್ಲ. ಇಂದ್ರನ ನಂದನ ವನವನ್ನೂ ಮೀರಿಸುವ, ಅತ್ಯಧಿಕವಾದ ನಿರಂತರವಾದ ಮಧುವನ್ನು ಸ್ರವಿಸುವ ಹೂಗಳಿಂದ ಕೂಡಿದ ಬಳ್ಳಿಗಳಿಂದ ಸುತ್ತುವರೆಯಲ್ಪಟ್ಟ, ತಿರುವೇಂಗಡಮಲೈಯಲ್ಲಿ ಹರಿಯುವ ಗಿರಿನದಿ ಅಥವಾ ಝರಿಗಳಲ್ಲಿ ಮೀನಾಗಿ ಜನ್ಮಪಡೆಯುವ ಭಾಗ್ಯವಿಶೇಷ ವನ್ನು ನಾನು ಪಡೆಯುವವನಾಗಬೇಕು. ||೨||

**ಪಿನ್ನಿಟ್ಟಶಡೈಯಾನುಂ ಪಿರಮನುಮಿಂದಿರನುಂ**
**ತುನ್ನಿಟ್ಟುಪುಗಲರಿಯ ವೈಗುನ್ದನೀಳ್ ವಾಶಲ್**
**ಮಿನ್ವಟ್ಟಚ್ಚುಡರಾಳಿ ವೇಂಗಡಕ್ಕೋನ್ ತಾನುಮಿಳುಮ್**
**ಪೊನ್ವಟ್ಟಿಲ್ ಪಿಡಿತ್ತುಡನೇ ಪುಗಪ್ಪೆರುವೇ ನಾವೇನೇ ||೩||**

**ಪಿನ್ನಿಟ್ಟ**=ಹಿಂಭಾಗದಲ್ಲಿ ಜೋಲಾಡುವ, **ಶಡೈಯಾನುಮ್**=ಜಟೆಯನ್ನು ಹೊಂದಿರುವ ರುದ್ರನೂ, **ಪಿರಮನುಂ**=ಬ್ರಹ್ಮದೇವನೂ, **ಇಂದಿರನುಂ**= ಇಂದ್ರನೂ, **ತುನ್ನಿಟ್ಟು**=ತಾನು ಮೊದಲು ದರ್ಶನ ಮಾಡಬೇಕು. ತಾನು ಮೊದಲು ಎಂದು ಈ ಒಬ್ಬೊಬ್ಬರೂ ಸುಗ್ಗುವಾಗ ಕಿಕ್ಕಿರಿದು ನಿಂತಿದ್ದರೂ, **ಪುಕಲರಿಯ** = ಒಳಗೆ ಪ್ರವೇಶಿಸಲು ಸಾಧ್ಯವಿಲ್ಲದಿರುವ, **ವೈಕುನ್ದಮ್** = ಶ್ರೀವೈಕುಂಠದಂತೆಯೇ, **ನೀಳ್**=ಹಿರಿಮೆಯನ್ನು ಹೊಂದಿರುವ, **ವಾಶಲ್**= ಗರ್ಭಗೃಹದ ದ್ವಾರದಲ್ಲಿಯೇ, **ಮಿನ್ವಟ್ಟಂ**=ಮಿಂಚಿನ ಬಳ್ಳಿಯೊಂದು ಬಾಗಿರು-ವಂತಿರುವ, **ಶುಡರ್** = ಜ್ಯೋತಿಸ್ಸನ್ನು ಹೊಂದಿರುವ, **ಆಳಿ** = ಸುದರ್ಶನ ಚಕ್ರವನ್ನು ಧರಿಸಿರುವ, **ವೇಂಗಡಕ್ಕೋನ್ ತಾನ್**=ವೆಂಕಟಾಚಲಪತಿಯು, **ಉಮಿಳುಮ್** = ಉಗುಳುವ, **ಪೊನ್ವಟ್ಟಿಲ್** = ಚಿನ್ನದ ಬಟ್ಟಲನ್ನು,

**ಪಿಡಿತ್ತು**=ಕೈಯಲ್ಲಿ ಹಿಡಿದುಕೊಂಡು, **ಉಡನೇ ಪುಕಪ್ಪೆರುವೇನಾವೇನೇ**= ಅನ್ತರಂಗಕೈಂಕರ್ಯವನ್ನು ಮಾಡುವವರೊಡನೇ ಕೂಡಿ ಪ್ರವೇಶಿಸುವ ಭಾಗ್ಯವನ್ನು ನಾನು ಹೊಂದಬೇಕು. ||೩||

ಹಿಂದಿನ ಹಾಡಿನಲ್ಲಿ ತಿರುವೇಂಗಡಮಲೈಯಲ್ಲಿ ಹರಿಯುವ ಗಿರಿನದಿಗಳಲ್ಲಿ ಮೀನು ಜನ್ಮವನ್ನಾದರೂ ಪಡೆಯಬೇಕೆಂದು ಬಯಸಿದರು. ಆದರೆ ಆ ರೀತಿ ಮೀನು ಜನ್ಮವನ್ನು ಎತ್ತಿದರೆ, ಪರಮಾತ್ಮನಿಗೆ ಅಂತರಂಗ ಕೈಂಕರ್ಯ ಮಾಡಿದಂತಾ ಗುವುದಿಲ್ಲ. ಆದುದರಿಂದ ಭಗವಂತನ ಗರ್ಭಗೃಹವನ್ನು ಪ್ರವೇಶಿಸಿ ನಿಂತು ಅಲ್ಲಿ ಅವನಿಗೆ ಅಂತರಂಗ ಕೈಂಕರ್ಯವನ್ನು ಮಾಡಬೇಕೆಂದು ಈ ಪದ್ಯದಲ್ಲಿ ಬಯಸುತ್ತಾರೆ.

ಶ್ರೀವೈಕುಂಠ ಲೋಕಾಧಿಪತಿಯಾದ ಪರಮಾತ್ಮನು, ಭೂಲೋಕ ವೈಕುಂಠ ವೆಂದು ಪ್ರಸಿದ್ಧವಾದ ವೇಂಕಟಾಚಲದಲ್ಲಿ ಕಲಿಯುಗದಲ್ಲಿನ ಜನರ ಸಂರಕ್ಷಣೆಗಾಗಿ "ಕಲೌ ವೇಂಕಟನಾಯಕಃ" ಎಂದು ಹೇಳುವಂತೆ, ತಾನಾಗಿ ಬಂದು ಸ್ವಯಂ ವ್ಯಕ್ತವಾಗಿ ಅರ್ಚಾಮೂರ್ತಿ ಸ್ವರೂಪದಲ್ಲಿ ನಿಂತಿದ್ದಾನೆ. ಭಗವಂತನ ಪರಿಪೂರ್ಣ ಸಾಧನೆಯಿಂದ ಕೂಡಿದ ಅರ್ಚಾಮೂರ್ತಿದರ್ಶನವೂ, ನಮ್ಮ ಪರಮಾತ್ಮ ಸಾಕ್ಷಾತ್ಕಾರಕ್ಕೆ ಉಂಟಾಗುವ ವಿಘ್ನಗಳನ್ನು ದೂರಮಾಡಿ, ಪರಮಾತ್ಮನ ಕೃಪಾ ಕಟಾಕ್ಷವು ನಮ್ಮ ಮೇಲೆ ಬೀರುವಂತೆ ಮಾಡುತ್ತದೆ.

ಹಿಂಭಾಗದಲ್ಲಿ ಜೋಲಾಡುವ ಜಟೆಯನ್ನು ಧರಿಸಿರುವ ರುದ್ರನೂ, ಬ್ರಹ್ಮದೇವನೂ, ಇಂದ್ರನೂ—ಇತರ ದೇವತೆಗಳೂ, ತಮ್ಮ ತಮ್ಮ ಪೂರ್ವಾರ್ಜಿತ ವಾದ ಪುಣ್ಯಫಲದಿಂದ ಅವರವರ ಉನ್ನತವಾದ ಸ್ಥಾನಗಳನ್ನು ಹೊಂದಿದ್ದಾರೆ. ಅವರೂ ಪರಮಾತ್ಮನನ್ನು ಸಾಕ್ಷಾತ್ಕರಿಸಲು ಸಾಧನೆ ಮಾಡುತ್ತಿದ್ದಾರೆ. ಆದುದರಿಂದಲೇ ಇವರೂ ಶ್ರೀನಿವಾಸನ ದರ್ಶನ ಮಾಡಲು ತಿರುಮಲೆಗೆ ಬಂದು, ತಾನು ಮೊದಲು, ನಾನು ಮೊದಲು ಎಂದು ಒಬ್ಬರ ಮೇಲೊಬ್ಬರು ಬೀಳುತ್ತಾ ದೇವಸ್ಥಾನದಲ್ಲಿ ನುಗ್ಗಿ ಪರಮಾತ್ಮನನ್ನು ದರ್ಶನ ಮಾಡುತ್ತಾರೆ. ಇವರಿಗೂ ಕೇವಲ ದರ್ಶನ ಭಾಗ್ಯ ಮಾತ್ರ ಒದಗಿತು. ಇನ್ನೂ ಮಿಗಿಲಾದ ಪುಣ್ಯಶಾಲಿಗಳಿಗೆ ಮಾತ್ರವೇ ಗರ್ಭಗೃಹದಲ್ಲಿ ಪ್ರವೇಶಿಸಿ ಅವನ ಅಂತರಂಗ ಕೈಂಕರ್ಯ ಮಾಡುವ ಭಾಗ್ಯ ಲಭಿಸುತ್ತದೆ.

ಆದುದರಿಂದಲೇ, ಕುಲಶೇಖರಾಳ್ವಾರ್‌ರವರು ಈ ಹಾಡಿನಲ್ಲಿ-ಆ ತಿರುಮಲೈಯ ದೇವಸ್ಥಾನದ ಗರ್ಭಗೃಹದ ದ್ವಾರದ ಸಮೀಪದಲ್ಲಿ ಹೋಗುವಾಗಲೇ ಮಿಂಚಿನಬಳ್ಳಿ ಯೊಂದು ಬಾಗಿರುವಂತೆ ಪ್ರಕಾಶಿಸುತ್ತಿರುವ ಸುದರ್ಶನ ಚಕ್ರವನ್ನು ಕೈಯಲ್ಲಿ ಧರಿಸಿರುವ ಶ್ರೀನಿವಾಸನೂ, ಅರ್ಚಾಮೂರ್ತಿ ಸ್ವರೂಪದಲ್ಲಿದ್ದು, ನೈವೇದ್ಯಕ್ಕಿಟ್ಟ ವಸ್ತುಗಳೆಲ್ಲವನ್ನೂ ಸ್ವೀಕರಿಸಿ ಭುಜಿಸುವುದರಿಂದ, ತಾಂಬೂಲಾದಿ ಚರ್ವಣ

ಮಾಡಿದಾಗ ಅದನ್ನು ಉಗುಳುವವನು. ಆಗ ಅವನ ಗರ್ಭಗೃಹ ಪ್ರವೇಶಿಸಿ ಅವನ ಪಕ್ಕದಲ್ಲಿದ್ದು, ಅವನ ಅಂತರಂಗ ಕೈಂಕರ್ಯ ಮಾಡುವವರೊಡನೆ ಕೂಡಿ, ಅವನು ಉಗುಳುವ್ರಪನ್ನು ನಾನು, ನನ್ನ ಕೈಯಲ್ಲಿ ಚಿನ್ನದ ಬಟ್ಟಲೊಂದನ್ನು ಹಿಡಿದು ಅದರಿಂದ ಸ್ವೀಕರಿಸುವಂತಹ, ಭಾಗ್ಯವಿಶೇಷವೊಂದು ನನಗೆ ಒದಗಬಾರದೇ'-ಎಂದು ಹಂಬಲಿಸಿದ್ದಾರೆ. ||೩||

**ಒಣ್‌ಪವಳ ವೇಲೈಯುಲವು ತಣ್‌ಪಾರ್ಕಡಲುಳ್**
**ಕಣ್‌ತುಯಿಲುಮಾಯೋನ್ ಕಳಲಿಣೈಗಳ್ ಕಾಣ್ಬದರ್ಕು**
**ಪಣ್‌ಪಗರುವ್ ವಂಡಿನಂಗಳ್ ಪಣ್ಬಾಡುವ್ ವೇಂಗಡತ್ತು**
**ಶೆಣ್ಬಗಮಾಯ್ ನಿರ್ಕುಂ ತಿರುವುಡೈಯೇನಾವೇನೇ ||೪||**

ಒಣ್=ಒಳ್ಳೆಯ, **ಪವಳಮ್**=ಹವಳಗಳನ್ನು, **ವೇಲೈ**=ತೀರದಲ್ಲಿ, **ಉಲವು**=ಎರಚಾಡುವ, **ತಣ್**=ತಣ್ಣಗಿರುವ, **ಪಾರ್ಕಡಲುಳ್**=ಕ್ಷೀರಾಬ್ಧಿಯಲ್ಲಿ, **ಕಣ್‌ತುಯಿಲುಮ್**=ಯೋಗನಿದ್ರೆ ಮಾಡುವ, **ಮಾಯೋನ್**=ಆಶ್ಚರ್ಯಭೂತನಾದ, ವೆಂಕಟಾಚಲಪತಿಯ, **ಕಳಲಿಣೈಗಳ್**=ತಿರುವಡಿಗಳನ್ನು, **ಕಾಣ್ಬದರ್ಕು**=ಕಾಣಲೆಂದು, **ಪಕರುಮ್**=ತಾವು ಹಾಡುವ, **ಪಣ್**=ಸ್ವರಕ್ಕೆ ಅನುಗುಣವಾಗಿ, **ವಂಡಿನಂಗಳ್**=ದುಂಬಿಗಳಾದರೋ, **ಪಣ್‌ಪಾಡುಮ್**=ಗಾನಮಾಡುತ್ತಿರುವ, **ವೇಂಗಡತ್ತು**=ತಿರುಮಲೈಯಲ್ಲಿ, **ಶೆಣ್ಬಗಮಾಯ್-ನಿರ್ಕುಂ**=(ಚಂಪಕ) ಸಂಪಿಗೆಯ ಮರವಾಗಿ ನಿಲ್ಲುವ, **ತಿರುವುಡೈಯೇನಾ-ವೇನ್**=ಸಂಪತ್ತನ್ನು ನಾನು ಹೊಂದುವವನಾಗಬೇಕು. ||೪||

ಹಿಂದಿನ ಹಾಡಿನಲ್ಲಿ ಆಳ್ವಾರರು ಭಗವಂತನ ಗರ್ಭಗೃಹದಲ್ಲಿದ್ದು, ಭಗವಂತನಿಗೆ ಅಂತರಂಗ ಕೈಂಕರ್ಯ ಮಾಡಬೇಕೆಂದು ಆಸೆಪಟ್ಟರು. ಆ ರೀತಿ ಕೈಂಕರ್ಯ ಪ್ರಾಪ್ತವಾದರೆ, ಭಗವಂತನ ಸಮೀಪದಲ್ಲಿದ್ದು ನಾನಾ ವಿಧವಾದ ಅಪಚಾರಗಳು ಸಂಭವಿಸಬಹುದು ಅಥವಾ ನನಗಾಗುವುದಕ್ಕೆ ಈ ರೀತಿ ಕೈಂಕರ್ಯ ಪ್ರಾಪ್ತಿಯಾಯಿತು. ಎಲ್ಲರಿಗೂ ಲಭಿಸುವುದೇ—ಎಂದು ಅಹಂಕಾರವೂ ಉಂಟಾಗಿ ಭಗವಂತನ ನಿಗ್ರಹಕ್ಕೆ ಪಾತ್ರನಾಗಬಹುದು. ಆದುದರಿಂದ ಅಹಂಕಾರಾದಿಗಳಿಗೆ ಒಳಗಾಗದಿರುವ, ಆದರೆ ಪ್ರತಿನಿತ್ಯವೂ ತನ್ನ ಪುಷ್ಪಗಳನ್ನು ಪರಮಾತ್ಮನ ತಿರುವಡಿಗಳಲ್ಲಿ ಅರ್ಪಿಸಿ ಕೈಂಕರ್ಯವನ್ನು ಎಸಗುವ, ತಿರುಮಲೆಯಲ್ಲಿರುವ ಒಂದು ಸಂಪಿಗೆ ಮರವಾಗಿ ಜನ್ಮವೆತ್ತುವ ಭಾಗ್ಯ ತನಗೆ ಲಭಿಸಬೇಕೆಂದು ಈ ಹಾಡಿನಲ್ಲಿ ಪ್ರಾರ್ಥಿಸಿದ್ದಾರೆ.

ಒಳ್ಳೆಯ ಹವಳಗಳು ಕ್ಷೀರಾಬ್ಧಿಯಲ್ಲಿ ಉತ್ಪನ್ನವಾಗುತ್ತವೆ. ಅವುಗಳನ್ನು ಅಲ್ಲಿನ ತರಂಗಗಳು ದಡಗಳಲ್ಲಿ ತಳ್ಳಿರುವುದರಿಂದ, ದಡದಲ್ಲಿ ಎಲ್ಲೆಲ್ಲಿ ನೋಡಿದರೂ

ಹವಳಗಳು ಎರಚಾಡಲ್ಪಟ್ಟಿರುತ್ತದೆ. ಈ ತರಹದ ತಣ್ಣಗಿರುವ ಕ್ಷೀರಾಬ್ಧಿಯಲ್ಲಿ ಶ್ರೀಮನ್ನಾರಾಯಣನು ಆದಿಶೇಷನ ಮೇಲೆ ಪವಡಿಸಿಕೊಂಡಿರುತ್ತಾನೆ. ಆಶ್ಚರ್ಯ ಭೂತನಾದ ಆ ಪರಮಾತ್ಮನೂ ಭಕ್ತರುಗಳಿಗೆ ದರ್ಶನ ಕೊಡಲೆಂದೇ ತಿರುವೇಂಗಡ-ಮಲೆಗೆ ಬಂದು ಶ್ರೀನಿವಾಸನಾಗಿ ಬಿಜಯಮಾಡಿಸಿದ್ದಾನೆ. ಶ್ರೀವೈಕುಂಠಲೋಕದಲ್ಲಿ "ಏತತ್ಸಾಮಗಾಯನ್ನಾಸ್ತೇ"—ಎಂದು ಭಗವಂತನ ಕಲ್ಯಾಣಗುಣಗಳನ್ನು ಸಾಮ ವೇದರೂಪದಲ್ಲಿ ಗಾನಮಾಡುವ ನಿತ್ಯಸೂರಿಗಳೂ ಶ್ರೀನಿವಾಸನಾಗಿ ಬಿಜಯಮಾಡಿಸಿರುವ ವೈಕುಂಠಾಧಿಪತಿಯ ತಿರುವಡಿಗಳನ್ನು ಸಂದರ್ಶಿಸಿ ಗಾನಮಾಡಬೇಕೆಂಬ ಆಸೆಯಿಂದ, ತಿರುಮಲೆಗೆ ಬಂದು ತಿರ್ಯಕ್ ಸ್ಥಾವರಗಳ ರೂಪದಿಂದಿದ್ದು ಭಗವಂತನ ಗುಣಾನುಭವ ಮಾಡುತ್ತಿದ್ದಾರೆ. ಆಗ "ವಕುಲಧರ ಸರಸ್ವತೀ ವಿಷಕ್ತಸ್ವರ ರಸಭಾವಯುತಾಸುಕಿನ್ನರೀಷು | ದ್ರವತಿ ದೃಷದಪಿ ಪ್ರಸಕ್ತಗಾನಾಸ್ವಿಹ ವೃಷಶೈಲ-ಕಟೀಷು ವೇಂಕಟಸ್ಯ ||"—ಎಂಬಂತೆ ಕಿನ್ನರ ಗಂಧರ್ವಾದಿಗಳೂ ಭಗವದ್ವಿಷಯದಿಂದ ತುಂಬಿರುವ ಆಳ್ವಾರುಗಳ ಶ್ರೀ ಸೂಕ್ತಿಗಳನ್ನು ಗಾನಮಾಡುತ್ತಿರಲು, ದುಂಬಿಗಳ ರೂಪದಲ್ಲಿರುವ ನಿತ್ಯಸೂರಿಗಳೂ ಸಂಗೀತದ ರಾಗವನ್ನೇ ಅನುಸರಿಸಿ ದುಂಬಿಗಳ ಝೇಂಕಾರ ರೂಪದಲ್ಲಿ ಹಾಡುತ್ತಾರೆ. ಈ ರೀತಿ ನಿತ್ಯಸೂರಿವರ್ಗದವರಿಂದಲೂ ಆಸೆಪಡುವ ಶ್ರೀನಿವಾಸನ ಆವಾಸವಾದ ವೇಂಕಟಾಚಲದಲ್ಲಿ, ನಿತ್ಯವೂ ಭಗವಂತನಿಗೆ ಪುಷ್ಪಗಳನ್ನು ಅರ್ಪಿಸುವವರ ಮೂಲಕ ಭಗವಂತನ ಅಡಿದಾವರೆಗಳನ್ನು ಕಾಣುವ ಒಂದು ಚಂಪಕವೃಕ್ಷವಾಗಿರುವ ಭಾಗ್ಯವನ್ನಾದರೂ ನಾನು ಪಡೆಯಬೇಕು—ಎಂದು ಆಳ್ವಾರರು ಈ ಹಾಡಿನಲ್ಲಿ ಪ್ರಾರ್ಥಿಸಿದ್ದಾರೆ. ||೪||

**ಕಮ್ಬಮದಯಾನ್ಯೈಕ್ಕಳುತ್ತಗತ್ತಿನ್ಮೇಲಿರುನ್ದು**
**ಇನ್ಬಮರುಂ ಶೆಲ್ವಮುಂ ಇವ್ವರಶುಂ ಯಾನ್ ವೇಂಡೇನ್ |**
**ಎಂಬೆರುಮಾನ್ ಈಶನೆಳಿಲ್ ವೇಂಗಡಮಲೈಮೇಲ್**
**ತಂಬಹಮಾಯ್ ನಿರ್ಕುಂ ತವಮುಡೈಯೇ ನಾವೇನೇ ||೫||**

**ಕಂಬಮ್** = ಕಂಡವರಿಗೆ ನಡುಕವನ್ನುಂಟುಮಾಡುವ, **ಮದಮ್** = ಮದೋದಕದಿಂದ ಕೂಡಿದ, **ಯಾನೈ** = ಆನೆಯ, **ಕಳುತ್ತಕತ್ತಿನ್‌ಮೇಲ್** = ಕತ್ತಿನಮೇಲೆ, **ಇರುಂದು** = ಕುಳಿತುಕೊಂಡಿದ್ದು, **ಇನ್ಬಮರಮ್** = ಎಲ್ಲ ಭೋಗಗಳನ್ನೂ ಅನುಭವಿಸುವ, **ಶೆಲ್ವಮುಮ್** = ಸಂಪತ್ತನ್ನೂ, **ಇವ್ವರಶುಂ** = ಈಗಿರುವ ಅರಸನಾಗಿರುವಿಕೆಯನ್ನೂ, **ಯಾನ್** = ನಾನು, **ವೇಂಡೇನ್** = ಅಪೇಕ್ಷಿಸುವುದಿಲ್ಲ. **ಎಂಬೆರುಮಾನ್** = ನನಗೆ ಉಪಕಾರಕನಾದ, **ಈಶನ್** = ಎಲ್ಲರಿಗೂ ಸ್ವಾಮಿಯಾದ ಶ್ರೀನಿವಾಸನ, **ಎಳಿಲ್** = ಸುಂದರವಾದ, **ವೇಂಗಡ-ಮಲೈಮೇಲ್** = ವೇಂಕಟಾಚಲದಲ್ಲಿ, **ತಂಬಕಮಾಯ್** = ಸ್ತಂಬಕಮರವಾಗಿ,

**ನಿಕರ್ಣಂ** = ಜನ್ಮತಾಳುವುದಕ್ಕೆ, **ತವಮುಡೈ ಯೇನಾವೇನ್** = ಬೇಕಾದ ತಪಸ್ಸನ್ನು ಮಾಡಿದವನಾಗಿ ನಾನಾಗಬೇಕು. ||೫||

ಹಿಂದಿನ ಹಾಡಿನಲ್ಲಿ ವೇಂಕಟಾಚಲದಲ್ಲಿ ಚಂಪಕವೃಕ್ಷವಾಗಿರಬೇಕೆಂದು ಹಂಬಲಿಸಿದರು. ಸಂಪಿಗೆಯ ಹೂವು ಅನೇಕರಿಗೆ ಇಷ್ಟವಾಗಿರುವುದರಿಂದ, ಯಾರಾದರೂ ಅದಿರುವ ಸ್ಥಳದಿಂದ ಅದನ್ನು ಬೇರುಸಹಿತ ಕಿತ್ತುಕೊಂಡು ತಮತಮ್ಮ ಸ್ಥಳಕ್ಕೆ ಒಯ್ಯಬಹುದು. ಒಂದುವೇಳೆ ಆ ರೀತಿಯಾದರೆ ವೇಂಕಟಾಚಲದಲ್ಲಿ ಜನ್ಮಪಡೆದೂ ಭಗವತ್ ಸನ್ನಿಧಿಯಿಲ್ಲದೇ ಹೋಗುವುದರಿಂದ, ಯಾರೊಬ್ಬರಿಗೂ ಬೇಡದ, ಯಾವ ವಿಧವಾದ ಫಲಪುಷ್ಪಗಳನ್ನೂ ಕೊಡದ ವಂಧ್ಯವೃಕ್ಷವೆಂದು ಕರೆಯಲ್ಪಡುವ ಒಂದು ಸ್ತಂಬಕ ವೃಕ್ಷವಾಗಿಯಾದರೂ ಶ್ರೀನಿವಾಸನ ಸನ್ನಿಧಾನವಾದ ವೇಂಕಟಾಚಲದಲ್ಲಿ ಜನ್ಮಪಡೆಯಬೇಕೆಂದು ಈ ಹಾಡಿನಲ್ಲಿ ಪ್ರಾರ್ಥಿಸಿದ್ದಾರೆ.

ಕಂಡವರಿಗೆ ನಡುಕವುಂಟುಮಾಡುವ, ನವಯೌವನದಲ್ಲಿದ್ದು ಮದೋದಕವನ್ನು ಸ್ರವಿಸುತ್ತಿರುವ ಆನೆಯ ಕತ್ತಿನ ಮೇಲೆ, (ಅಂಬಾರಿಯ ಮೇಲೆ) ಕುಳಿತು ಎಲ್ಲ ಭೋಗಗಳನ್ನೂ ಅನುಭವಿಸುವ ಇಂದ್ರನ ಪದವಿಯೇ ಮೊದಲಾದ ಸಂಪತ್ತನ್ನಾಗಲೀ, ಈಗಿರುವ ಅರಸನಾಗಿರುವಿಕೆಯನ್ನಾಗಲೀ ನಾನು ಆಸೆಪಡುವುದಿಲ್ಲ. ಇದೆಲ್ಲಕ್ಕಿಂತಲೂ ಮಿಗಿಲಾದುದು ಭಗವಂತನ ಸಮೀಪದಲ್ಲಿರುವಿಕೆ. ಆದುದರಿಂದಲೇ ನನಗೆ ಉಪಕಾರಕನಾದ, ಸರ್ವಸ್ವಾಮಿಯಾದ ಆ ಶ್ರೀನಿವಾಸನ ಸುಂದರವಾದ ವೇಂಕಟಾಚಲದಲ್ಲಿ ಒಂದು ಸ್ತಂಬಕಮರವಾಗಿ ಜನ್ಮತಾಳುವುದಕ್ಕೆ ಬೇಕಾದ ತಪಸ್ಸನ್ನಾಚರಿಸಿದವನಾಗಿ ನಾನಾಗಬೇಕು. ||೫||

**ಮಿನ್ನನ್ನೈಯನುಣ್ಣಿಡೈಯಾರ್ ಉರುಪ್ಪಶಿಯುಂ ಮೇನಕ್ಕೈಯುಂ**
**ಅನ್ನವರ್ ತಮ್ ಪಾಡಲೊಡು ವಾಡಲನ್ನೈಯಾದರಿಯೇನ್**
**ತೆನ್ನವೆನ ವಂಡಿನಂಗಳ್ ಪಣ್ಪಾಡುಂ ವೇಂಗಡತ್ತುಳ್**
**ಅನ್ನನ್ನೈಯ ಪೊರ್ಕುವಡಾ ಮರುಙ್ದವತ್ತವನಾವೇನೇ** ||೬||

**ಮಿನ್ ಅನ್ನೈಯ** = ಮಿಂಚಿನ ಬಳ್ಳಿಯಂತೆ, **ನುಣ್** = ತೆಳ್ಳಗಿರುವ, **ಇಡೈಯಾರ್** = ನಡುವುಳ್ಳವರಾದ, **ಉರುಪ್ಪಶಿಯುಂ** = ಊರ್ವಶಿಯನ್ನೂ, **ಮೇನಕ್ಕೈಯುಂ** = ಮೇನಕೆಯನ್ನೂ, **ಅನ್ನವರ್ ತಂ** = ಅಂತೆಯೇ ಇರುವ ಎಲ್ಲ ಸುಂದರಿಯರ, **ಆಡಲೊಡು** = ನರ್ತನವನ್ನೂ, **ಪಾಡಲನ್ನೈ** = ಹಾಡುಗಳನ್ನೂ, **ಆತರಿಯೇನ್** = ನೋಡಲು ಅಥವಾ ಕೇಳಲು ಇಷ್ಟಪಡುವುದಿಲ್ಲ. **ವಂಡಿನಂಗಳ್** = ದುಂಬಿಗಳು, **ತೆನ್ನವೆನ** = 'ತೆನತೆನ' -ಎಂದು, **ಪಣ್ ಪಾಡುಂ** = ಝೇಂಕರಿಸುವ, **ವೇಂಗಡತ್ತುಳ್** = ವೇಂಕಟಾಚಲದಲ್ಲಿ, **ಅನ್ನನ್ನೈಯ** = ಅನುಪಮವಾದ,

**ಪೊರ್ಕುವಡಾಂ** = ಸ್ಪೃಹಣೀಯವಾದ ಶಿಖರವೊಂದಾಗಿರಲು ಬೇಕಾದ, **ಅರುಸ್ದ-ವತ್ತನಾವೇನ್** = ದುರ್ಲಭವಾದ ತಪಸ್ಸನ್ನಾಚರಿಸಿದವನಾಗಬೇಕು. ||೬||

ಹಿಂದಿನ ಹಾಡಿನಲ್ಲಿ ಯಾವ ಫಲಪುಷ್ಪಗಳನ್ನೂ ಈಯದ ಸ್ತಂಬಕವೃಕ್ಷವಾಗಿರ ಬೇಕೆಂದು ಅಪೇಕ್ಷಿಸಿದರು. ಆ ರೀತಿಯಿದ್ದರೂ, ಬೇರಾವುದಕ್ಕಾಗದಿದ್ದರೂ ಒಲೆಯು ಕಟ್ಟಿಗೆಗಾದರೂ ಆಗಬಹುದೆಂದು ಯಾರಾದರೂ ಕಡಿದುಕೊಂಡುಹೋಗಬಹುದೆಂದು ಯಾರ ಕೈಯಿಗೂ ಸುಲಭವಾಗಿ ಸಿಗದಿರುವ, ವೇಂಕಟಾಚಲದ ಶಿಖರದ ರೂಪವನ್ನು ತಾನು ತಾಳುವಂತಾಗಬೇಕೆಂದು ಇಲ್ಲಿ ಹಂಬಲಿಸುತ್ತಾರೆ.

'ಮಿಂಚಿನ ಬಳ್ಳಿಯಂತೆ ಬಳುಕುವ ನಡುವುಳ್ಳ ಊರ್ವಶಿ, ಮೇನಕೆ ಮೊದಲಾದ ಯಾವುದೇ ಸುಂದರಿಯರ ನರ್ತನಗಳನ್ನು ನೋಡಬೇಕೆಂದಾಗಲೀ, ಹಾಡುಗಳನ್ನು ಕೇಳಬೇಕೆಂದಾಗಲೀ ಆಸೆಪಡುವುದಿಲ್ಲ. ಇದಾವುದೂ ನಿರಂತರವಾದ ಆನಂದವನ್ನುಂಟುಮಾಡುವುದಿಲ್ಲ. ನಿರಂತರವಾದ ಆನಂದಾನುಭವವನ್ನುಂಟು ಮಾಡುವುದು ಭಗವದ್ಗುಣಾನುಭವದ ಗಾನ ಮಾತ್ರ. ಹಿಂದಿನ ನಾಲ್ಕನೆಯ ಹಾಡಿನ ವಿವರಣೆಯಲ್ಲಿ ಹೇಳಿರುವಂತೆಯೇ, ನಿತ್ಯಸೂರಿಗಳೇ ವೇಂಕಟಾಚಲದಲ್ಲಿ ಬಂದು ದುಂಬಿಗಳ ರೂಪವನ್ನು ಪಡೆದುಕೊಂಡು ಭಗವದ್ಗುಣಾನುಭವದಲ್ಲಿ ಮುಳುಗಿ ನರ್ತನಮಾಡುತ್ತಾ 'ತೆನತೆನ'-ಎಂದು ಝೇಂಕರಿಸುತ್ತಾ ಭಗವಂತನ ಕಲ್ಯಾಣ ಗುಣಗಳನ್ನು ಹಾಡುತ್ತಾರೆ. ಆ ರೀತಿಯಾದ ತಿರುಮಲೈಯಲ್ಲಿ, ಈ ಸುಂದರವಾದ ಗಾನವನ್ನು ಕೇಳುವಂತಹ ಅನುಪಮವಾದ ಸ್ಪೃಹಣೀಯವಾದ ಒಂದು ಶಿಖರದ ರೂಪವನ್ನು ಪಡೆಯಲು ಬೇಕಾದ ದುರ್ಲಭವಾದ ತಪಸ್ಸನ್ನಾಚರಿಸಿದವನಾಗಿ ನಾನಾಗಬೇಕು'– ಎಂದು ಆಳ್ವಾರರು ಪ್ರಾರ್ಥಿಸಿದ್ದಾರೆ. ||೬||

**ವಾನಾಳುಂ ಮಾಮದಿಪೋಲ್ ವೆಣ್‌ಕುಡೈಕ್ಕೀಳ್, ಮನ್ನವರ್‌ತಮ್**
**ಕೋನಾಗಿ ವೀಟ್ರಿರುಂದು ಕೊಂಡಾಡುಂ ಶೆಲ್ವರಿಯೇನ್**
**ತೇನಾರ್ ಪೂಂಶೋಲೈ ತಿರುವೇಂಗಡಮಲೈಮೇಲ್**
**ಕಾನಾರಾಯ್ ಪಾಯುಂ ಕರುತ್ತುಡೈಯ ನಾವೇನೇ ||೭||**

**ವಾನ್** = ಆಕಾಶವೆಲ್ಲವನ್ನೂ ಆಕ್ರಮಿಸಿಕೊಂಡು, **ಆಳುಮ್** = ಆಳುವ, **ಮಾ** = ಹಿರಿಮೆಯನ್ನು ಹೊಂದಿರುವ, **ಮದಿಪೋಲ್** = ಚಂದ್ರನಂತೆ, **ವೆಣ್** = ಬೆಳ್ಳಗಿರುವ, **ಕುಡೈಕ್ಕೀಳ್** = ಶ್ವೇತಚ್ಛತ್ರದಡಿಯಲ್ಲಿ, **ಮನ್ನವರ್‌ತಂ** = ರಾಜರಿಗಳಿಗೂ, **ಕೋನಾಕಿ** = ರಾಜನಾಗಿ-ಚಕ್ರವರ್ತಿಯಾಗಿ, **ವೀಟ್ರಿರುನ್ದು** = ಹಿರಿಮೆಯನ್ನು ಪ್ರಕಾಶಪಡಿಸಿಕೊಳ್ಳುವಂತೆ ಕುಳಿತು, **ಕೊಂಡಾಡುಂ** = ಎಲ್ಲ ರಿಂದಲೂ ಸ್ತೋತ್ರಮಾಡಲ್ಪಡತಕ್ಕ, **ಶೆಲ್ವ** = ಸಂಪತ್ತನ್ನೂ, **ಅರಿಯೇನ್** = ಒಂದು ಹಿರಿಮೆಯೆಂದು ಆದರಿಸುವುದಿಲ್ಲ. **ತೇನಾರ್** = ಮಧುವನ್ನು ಸ್ರವಿಸುವ,

**ಪೂ**—ಹೂವುಗಳಿಂದ ಕೂಡಿದ, **ಶೊೞೈ**—ಬಳ್ಳಿಗಳಿಂದ ತುಂಬಿರುವ, **ತಿರುವೇಂಗಡಪ್ಪುೞೈಮೇಲ್**—ವೆಂಕಟಾಚಲದ ಮೇಲೆ ಹರಿಯುವ, **ಕಾನಾರಾಯ್**—ಗಿರಿನದಿಯಾಗಿ, **ಪಾಯುಂ**—ಪ್ರವಹಿಸುವ, **ಕರುತ್ತುಡೈಯೆನಾವೇನ್**—ಅಭಿಸಂಧಿಯನ್ನು ಹೊಂದಿದವನಾಗಿದ್ದೇನೆ. ||೭||

ತಿರುಮಲೆಯ ಶಿಖರವಾಗಿದ್ದರೆ, ಆ ಬೆಟ್ಟದ ಒಂದು ಭಾಗವಾಗಿ ಇರುವುದರಿಂದ ಆಧಾರವಾಗಿಯೇ ಇದ್ದಂತಾಯಿತು. ಭಗವಂತನನ್ನಾಶ್ರಯಿಸಿ ನಾವಿರಬೇಕು. ಭಗವಂತನು ನಮ್ಮನ್ನಾಶ್ರಯಿಸಿದ್ದಾನೆಂದರೆ ಸ್ವರೂಪಸಿದ್ಧಿಗೆ ಹಾನಿಯುಂಟಾಗುತ್ತದೆ. ತಿರುಮಲೆಯಾದರೋ—

"ಪ್ರಪದ್ಯೇ ತಂಗಿರಿಂ ಪ್ರಾಯಃ ಶ್ರೀನಿವಾಸಾನುಕಂಪಯಾ |
ಇಕ್ಷುಸಾರಸ್ರವನ್ತ್ಯೇವ ಯನ್ಮೂರ್ತ್ಯಾ ಶರ್ಕರಾಯಿತಮ್" ||

—ಎಂದು ಹೇಳುವಂತೆ ಭಗವಂತನ ದಯಾಗುಣವೇ ಮೂರ್ತಿವೆತ್ತಂತಿರುವುದು. ಅಥವಾ "ಮಲೈಯೇ ತಿರುವುಡುಂಬು"—ಎಂಬಂತೆ ಭಗವಂತನ ಸ್ವರೂಪವೇ ಆಗಿರುತ್ತದೆ, ಆದುದರಿಂದ ಅದನ್ನು ಆಶ್ರಯಿಸಿ ನಾವಿರಬೇಕು. ಆದುದರಿಂದ ತಿರುಮಲೈಯಲ್ಲಿ ಹರಿಯುವ ಗಿರಿನದಿಯ ರೂಪವನ್ನು ನಾನು ಪಡೆದು ಭಗವಂತನ ನಿತ್ಯಸಾನ್ನಿಧ್ಯದಲ್ಲಿರಬೇಕು ಎಂದು ಈ ಪದ್ಯದಲ್ಲಿ ಪ್ರಾರ್ಥಿಸುತ್ತಾರೆ.

ಆಕಾಶವೆಲ್ಲವನ್ನೂ ಆಕ್ರಮಿಸಿಕೊಂಡು ಆಳುವ ಚಂದ್ರನಂತೆ, ಭೂಮಂಡಲವೆಲ್ಲವನ್ನೂ ಆಕ್ರಮಿಸಿಕೊಂಡು ರಾಜಾಧಿರಾಜನಾಗಿ ಚಕ್ರವರ್ತಿ ಸಾರ್ವಭೌಮನಾಗಿ ಏಕಚ್ಛತ್ರಾಧಿಪತ್ಯದಿಂದ, ಚಕ್ರವರ್ತಿಗೆ ಗುರುತಾದ ಬೆಳ್ಗೊಡೆಯನ್ನು ಹೊಂದಿರುವ ಸಿಂಹಾಸನದಲ್ಲಿ ಕುಳಿತುಕೊಂಡು ಎಲ್ಲರಿಂದಲೂ ಸ್ತೋತ್ರಮಾಡಿಸಿಕೊಳ್ಳುವ ಸಂಪತ್ತನ್ನೂ ನಾನು ಸಂಪತ್ತೆಂದು ಪರಿಗಣಿಸುವುದಿಲ್ಲ. ನಿಜವಾದ ಸಂಪತ್ತೆಂದರೆ ಭಗವಂತನ ಸನ್ನಿಧಾನದಲ್ಲಿದ್ದು ಭಗವಂತನ ಸ್ಮರಣೆ ಮಾಡುತ್ತಿರುವುದು. "ಸಂಪನ್ನಾರಾಯಣ ಸ್ಮೃತಿಃ". ಆದುದರಿಂದ ಮಧುವನ್ನು ಸ್ರವಿಸುವ ಪುಷ್ಪಕೋಟಿಗಳಿಂದ ಸುತ್ತುವರಿಯಲ್ಪಟ್ಟಿರುವ ಶ್ರೀವೆಂಕಟಾಚಲದಲ್ಲಿ ಒಂದು ಗಿರಿನದಿಯ ರೂಪದಲ್ಲಿ ಪ್ರವಹಿಸುತ್ತಾ ಭಗವಂತನ ನಿತ್ಯಸಾನ್ನಿಧ್ಯದಲ್ಲಿ ನಾನಿರಬೇಕೆಂದು ಅಪೇಕ್ಷಿಸುತ್ತೇನೆ. ||೭||

**ಪಿಱೈಯೇಱು ಶಡೈಯಾನುಂ ಪಿರಮನುಮಿಂದಿರನುಂ**
**ಮುಱೈಯಾಯ ಪೆರುವೇಳ್ವಿಕ್ಕುಱೈ ಮುಡಿಪ್ಪಾನ್ ಮಱೈಯಾನಾನ್**
**ವೆಱಿಯಾರ್ ಕಣ್‌ಶೋಲೈ ತಿರುವೇಂಗಡಮಲೈಮೇಲ್**
**ನೆಱಿಯಾಯ್ ಕಿಡಕ್ಕುಂ ನಿಲೈಯುಡೈಯೇನಾವೇನೇ** ||೮||

**ಪಿರೈಯೇರು**—ತಲೆಯಲ್ಲಿ ಚಂದ್ರನನ್ನು ಧರಿಸಿರುವ, **ಶಡೈಯೊನುಂ**—ಜಟಾಜೂಟನಾದ ರುದ್ರನೂ, **ಪಿರಮನುಂ**—ಬ್ರಹ್ಮದೇವನೂ, **ಇಂದಿರನುಂ**—ಇಂದ್ರನೂ, **ಮುರೈಯಾಯ** = ತಮ್ಮ ತಮ್ಮ ಅಧಿಕಾರ ಅಥವಾ ಪದವಿಯನ್ನು ಪಡೆಯಲು ಅನುಗುಣವಾದ, **ಪೆರು**—ಹಿರಿಮೆಯನ್ನು ಹೊಂದಿರುವ, **ವೇಳ್ವಿ**—ಯಾಗಗಳನ್ನು (ಅನುಷ್ಠಿಸುತ್ತಾರೆ. ಭಗವಂತನಾದರೋ ಅವರವರು ಮಾಡಿದ ಯಾಗಗಳಿಗನುಗುಣವಾಗಿ ಅವರವರಿಗೆ ಆಯಾಯಾ ಪದವಿಯನ್ನು ಫಲರೂಪವಾಗಿ ಕೊಟ್ಟು) **ಕುರೈಮುಡಿಪ್ಪಾನ್**—ಅವರ ಇಷ್ಟಾರ್ಥಗಳನ್ನು ಪೂರೈಸುತ್ತಾನೆ. **ಮರೈಯಾನಾನ್** = ಈ ರೀತಿಯಾದ ವೇದಸ್ವರೂಪನಾದ, ವೇದವೇದ್ಯನಾದ ವೇಂಕಟಾಚಲಪತಿಯ, **ನೆರಿಯಾರ್**—ಅತ್ಯಧಿಕವಾದ ಪರಿಮಳದಿಂದ ಕೂಡಿದ, **ತಣ್**—ತಣ್ಣಗಿರುವ, **ಶೋಲೈ**—ತೋಟಗಳಿಂದ ಸುತ್ತುವರಿಯಲ್ಪಟ್ಟ, **ತಿರು-ವೇಂಗಡಮಲೈಮೇಲ್**—ವೇಂಕಟಾಚಲದಲ್ಲಿ, **ನೆರಿಯಾಯ್‌ಕಿಡಕ್ಕುಮ್**—ಭಗವದ್ಭಕ್ತರು ಸಂಚರಿಸುವ ಮಾರ್ಗವಾಗಿರುವಿಕೆಯ, **ನಿಲೈಯುಡೈಯೇನಾ-ವೇನ್**—ಆಸೆಯನ್ನು ಹೊಂದಿದವನಾಗಿದ್ದೇನೆ.

ಹಿಂದಿನ ಹಾಡಿನಲ್ಲಿ ತಿರುಮಲೆಯಲ್ಲಿ ಗಿರಿನದಿಯಾಗಿರಬೇಕೆಂದು ಪ್ರಾರ್ಥಿಸಿದರು. ಬೇಸಿಗೆಯ ಕಾಲದಲ್ಲಿ ನದಿಗಳು ಬತ್ತಿಹೋಗುತ್ತವೆ. ಭಗವಂತನ ಸಾನ್ನಿಧ್ಯದಲ್ಲಿ ಸದಾಕಾಲದಲ್ಲಿಯೂ ಇರಬೇಕೆಂಬ ಆಸೆ. ಆದುದರಿಂದ ಈ ಹಾಡಿನಲ್ಲಿ, ತಿರುಮಲೈಯಲ್ಲಿ ಭಗವದ್ಭಕ್ತರು ಎಲ್ಲ ಕಾಲದಲ್ಲಿಯೂ ನಡೆದುಹೋಗುವುದರಿಂದ, ಅವರು ನಡೆದುಹೋಗುವ ದಾರಿಯ ರೂಪದಲ್ಲಿ ತಾನಿರಬೇಕೆಂದೂ, ಇದರಿಂದ ಭಾಗವತರ ಪಾದಧೂಳಿನ ಸಂಸ್ಪರ್ಶವಾಗುವ ಲಾಭವೂ ಲಭಿಸುವುದೆಂದು ಇಲ್ಲಿ ಪ್ರಾರ್ಥಿಸುತ್ತಾರೆ.

'ಚಂದ್ರಶೇಖರನಾಗಿಯೂ, ಜಟಾಜೂಟನಾಗಿಯೂ ಇರುವ ರುದ್ರನೂ, ಬ್ರಹ್ಮದೇವನೂ, ಇಂದ್ರನೂ ತಾವು ತಮ್ಮತಮ್ಮ ಅಧಿಕಾರವನ್ನು ಪಡೆಯಲು, ಆಯಾಯಾ ಪದವಿಗಳನ್ನು ಪಡೆಯಲನುಗುಣವಾದ ಯಾಗ ತಪಸ್ಸುಗಳನ್ನು ಅನುಷ್ಠಿಸಿ, ಆಯಾಯಾ ಪದವಿಗಳನ್ನು ತಮಗೆ ಕೊಡಬೇಕೆಂದು ಭಗವಂತನಲ್ಲಿ ಪ್ರಾರ್ಥಿಸಿದ್ದಾರೆ. ಭಗವಂತನೂ ಅವರವರ ಯಾಗತಪೋನುಷ್ಠಾನಗಳಿಗನುಗುಣವಾಗಿ ಅವರವರಿಗೆ ಆಯಾಯಾ ಪದವಿಗಳನ್ನು ಕೊಟ್ಟು ಅವರವರ ಇಷ್ಟಾರ್ಥಗಳನ್ನು ಪೂರೈಸಿದ್ದಾನೆ. ಆ ರೀತಿ ವೇದಸ್ವರೂಪನಾದ ವೇದವೇದ್ಯನಾದ ಶ್ರೀನಿವಾಸನ ಪರಿಮಳದಿಂದ ತುಂಬಿರುವ ತಣ್ಣಗಿರುವ ಪುಷ್ಪೋದ್ಯಾನಗಳಿಂದ ಆವೃತವಾದ ತಿರುಮಲೈಯಲ್ಲಿ ಭಗವದ್ಭಕ್ತರು ನಡೆದುಕೊಂಡು ಹೋಗುವ ದಾರಿಯ ರೂಪದಲ್ಲಿ ನಾನು ಎಂದೆಂದಿಗೂ ಇರುವಂತಾಗಬೇಕು—ಎಂದು ಆಳ್ವಾರರು ಹೇಳಿಕೊಂಡಿದ್ದಾರೆ. ||೮||

**ಶೆಡಿಯಾಯ ವಲ್‌ವಿನ್ಯೆಗಳ್ ನೀರ್ಕುವಾನ್ ತಿರುಮಾಲೇ !**
**ನೆಡಿಯಾನೇ ! ವೇಂಗಡವಾ ! ನಿನ್‌ಕೋಯಿಲಿನ್ ವಾಶಲ್**
**ಅಡಿಯಾರುಂ ವಾನವರುಂ ಅರಂಬೈಯರುಂ ಕಿಡನ್ದಿಯಂಗುಮ್**
**ಪಡಿಯಾಯ್‌ಕ್ಕಿಡನ್ದು ಉನ್‌ಪವಳವಾಯ್ ಕಾಣ್ಬೇನೇ ||೯||**

**ಶೆಡಿಯಾಯ**=ಪೊದೆಗಳಂತೆ ದಟ್ಟವಾಗಿ ಬೆಳೆದುಕೊಂಡಿರುವ, **ವಲ್**= ಬಲಿಷ್ಠವಾದ, **ವಿನ್ಯೆಗಳ್**=ಪಾಪಫಲಗಳಾದ ಕ್ರೂರವಾದ ಸಂಸಾರ ಸಂಬಂಧ ವನ್ನೂ, **ತೀರ್ಕುವಾನ್**=ಕತ್ತರಿಸಿಹಾಕುವ, **ತಿರುಮಾಲೇ**=ಶ್ರೀಯಃಪತಿಯಾಗಿ, **ನೆಡಿಯಾನೇ**=ಆಶ್ರಿತಪಕ್ಷಪಾತದಿಂದ ಅಧಿಕನಾದವನೇ (ಸರ್ವೋತ್ತುಂಗನಾದವನೇ) **ವೇಂಗಡವಾ**=ವೇಂಕಟಾಚಲಾಧಿಪತಿಯೇ, **ನಿನ್**=ನಿನ್ನ, **ಕೋಯಿಲಿನ್**= ದೇವಸ್ಥಾನದ, **ವಾಶಲ್**=ಬಾಗಿಲಲ್ಲಿ, **ಅಡಿಯಾರುಮ್**=ನಿನ್ನದಾಸಭೂತರೂ, **ವಾನವರುಂ**=ದೇವತೆಗಳೂ, **ಅರಂಬೈಯರುವ್** = ರಂಭೆಯೇ ಮೊದಲಾದ ಅಪ್ಸರಸ್ಸುಗಳೂ, **ಕಿಡನ್ದು**=ಕೂಡಿ, **ಇಯಂಗುಮ್** = ಸಂಚರಿಸುವ, **ಪಡಿಯಾಯ್ ಕಿಡನ್ದು**=ಮೆಟ್ಟಿಲಾಗಿ ಬಿದ್ದಿದ್ದು, **ಉನ್**=ನಿನ್ನ, **ಪವಳ-ವಾಯ್** = ಹವಳದಂತಿರುವ ತುಟಿಗಳನ್ನು, **ಕಾಣ್ಬೇನ್** = ಕಾಣಬೇಕೆಂಬ ಆಸೆಯನ್ನು ಹೊಂದಿದ್ದೇನೆ. ||೯||

ಆಳ್ವಾರರು ಹಿಂದಿನ ಹಾಡಿನಲ್ಲಿ ತಿರುಮಲೈಯಲ್ಲಿ ಭಾಗವತರು ಸಂಚರಿಸುವ ಮಾರ್ಗವಾಗಿದ್ದು ಅವರ ಪಾದಧೂಳಿನ ಸಂಸ್ಪರ್ಶ ಹೊಂದುವ ಭಾಗ್ಯ ಲಭಿಸಬೇಕೆಂದು ಆಸೆಪಟ್ಟರು. ಆದರೆ, ಒಂದು ದೇವಸ್ಥಾನಕ್ಕೆ ಹೋಗಿ ಸೇರುವ ಮಾರ್ಗ ಅನೇಕವಿರ ಬಹುದು. ಈ ರೀತಿಯಿರುವುದರಿಂದ ಒಂದು ಮಾರ್ಗದಲ್ಲಿ ಸಂಚರಿಸುವ ಭಕ್ತರು ಮತ್ತೊಂದು ಮಾರ್ಗದಲ್ಲಿ ಬರುವುದಿಲ್ಲ. ಆದುದರಿಂದ ಎಲ್ಲ ಭಾಗವತರ ಪಾದಧೂಳು ತನಗೆ ತಗುಲಿದಂತಾಗುವುದಿಲ್ಲ. ಅದೂ ಅಲ್ಲದೆ, ಭಗವಂತನ ದರ್ಶನವೂ ತನಗಿಲ್ಲ ದಂತಾಗುತ್ತದೆ. ಆದುದರಿಂದ ಆಳ್ವಾರರು ಈ ಹಾಡಿನಲ್ಲಿ ಎಲ್ಲ ಭಗವದ್ಭಕ್ತರೂ ಬಂದೇ ಬರುವ, ಸಂಚರಿಸುವ ಮಾರ್ಗದಲ್ಲಿರುವ ದೇವಸ್ಥಾನದಲ್ಲಿ ಭಗವಂತನ ಮುಂಭಾಗದಲ್ಲಿರುವ ಹೊಸಲಿನ ಕಲ್ಲಾಗಿ, ಎಲ್ಲ ಭಕ್ತರ ಪಾದಧೂಳಿಯ ಸಂಸ್ಪರ್ಶ ವನ್ನೂ ಹೊಂದುವುದರೊಡನೆ, ಭಗವಂತನ ಹವಳದಂತಿರುವ ಕೆಂತುಟಿಗಳ ದರ್ಶನ ವನ್ನೂ ಮಾಡುವ ಭಾಗ್ಯ ತಮಗೆ ಲಭಿಸಬೇಕೆಂದು ಆಶಿಸುತ್ತಾರೆ.

ನಮ್ಮ ಪಾಪಗಳಾದರೋ ಪೊದೆಗಳಂತೆ ದಟ್ಟವಾಗಿ ಬೆಳೆದು ನಿಂತಿದೆ. ಆ ಪಾಪ ಫಲಗಳಿಂದಲೇ ನಮಗೆ ಕ್ರೂರವಾಗಿರುವ ಜನ್ಮಮರಣ ಚಕ್ರದಿಂದ ಕೂಡಿರುವ ಸಂಸಾರ ಸಂಬಂಧವೇರ್ಪಟ್ಟಿದೆ. "ಮಾಮೇವ ಯೇ ಪ್ರಪದ್ಯಂತೇ ಮಾಯಾಂ ಏತಾಂ ತರಂತಿ ತೇ"—ಎಂದು ಗೀತಾಚಾರ್ಯನು ಹೇಳಿದಂತೆ, ಈ ಸಂಸಾರ

ಬಂಧವನ್ನು ತೊಡೆದುಹಾಕಲು ಶ್ರಿಯಃಪತಿಯಾದ ಶ್ರೀಮನ್ನಾರಾಯಣನ ಚರಣಾ-ರವಿಂದದಲ್ಲಿ ಶರಣುಹೋಗುವುದಲ್ಲದೆ ಬೇರೆ ಮಾರ್ಗವಿಲ್ಲ. ಶ್ರಿಯಃಪತಿಯಲ್ಲಿ ಶರಣು ಹೋದರೆ, ಭಗವಂತನು ಒಂದುವೇಳೆ ದಂಡಧರನಾದುದರಿಂದ, ನಮಗೆ ನಮ್ಮ ಪಾಪ ಕರ್ಮಗಳಿಗನುಗುಣವಾಗಿ ಶಿಕ್ಷೆ ಕೊಡುವುದಾಗಿದ್ದರೂ, ನಮ್ಮ ತಾಯಿಯಾದ ಶ್ರೀದೇವಿಯು, ತನ್ನಲ್ಲಿ ವಿಶೇಷವಾದ ವ್ಯಾಮೋಹಕ್ಕೊಳಗಾಗಿ 'ತಿರುಮಾಲ್' ಆದ ತನ್ನ ಪತಿಯು ನಮ್ಮನ್ನು ಕೈಬಿಡದಂತೆ ರಕ್ಷಿಸಿಯೇ ತೀರಬೇಕು, ಆ ರೀತಿ ನಮ್ಮ ಶರಣಾಗತಿಯಲ್ಲಿ ಪುರುಷಾಕಾರಳಾಗಿ ನಿಂತು ಶರಣಾಗತಿ ಫಲಿಸುವಂತೆ ಮಾಡಿ ನಮ್ಮನ್ನು ರಕ್ಷಿಸುತ್ತಾಳೆ. ಈ ವಿಷಯವನ್ನು ತಿಳಿಸುವ ಸಲುವಾಗಿಯೇ ಆಳ್ವಾರರು **"ತಿರುಮಾಲೇ"** ಎಂಬ ಪದದಿಂದ ಸಂಬೋಧಿಸಿದ್ದಾರೆ. ಮಹಾಲಕ್ಷ್ಮಿಯ ವಾತ್ಸಲ್ಯಕ್ಕೆ ಒಳಗಾಗಿ, ಆಶ್ರಿತರ ವಿಷಯದಲ್ಲಿ ಪಕ್ಷಪಾತದಿಂದ ಕೂಡಿದವನಾಗಿ, ನಮ್ಮೆಲ್ಲರನ್ನೂ ಕಾಪಾಡಬೇಕೆಂಬ ಸದುದ್ದೇಶ್ಯದಿಂದಲೇ ಭಗವಂತನು ತಿರುಮಲೆ-ಯಲ್ಲಿ ಬಂದು ಬಿಜಯಮಾಡಿಸಿದ್ದಾನೆ. ಈ ರೀತಿ ಅವನಾಗಿ ನಮ್ಮ ಬಳಿ ಬಂದಾಗ, ಅವನ ದಿವ್ಯಮಂಗಳಮೂರ್ತಿಯ ದರ್ಶನದ ಲಾಭವನ್ನು ನಾವು ಪಡದೇ ತೀರ-ಬೇಕಲ್ಲವೇ ? ವಿಶೇಷವಾಗಿ ಅವನ ದಾಸಭೂತರೂ, ದೇವತೆಗಳೂ, ರಂಭೆಯೇ ಮೊದಲಾದ ಅಪ್ಸರಸ್ತ್ರೀಯರೂ—ಎಲ್ಲರೂ ಭಗವಂತನಲ್ಲಿರುವ ಭಕ್ತಿಯಿಂದಲೇ ತಿರುಮಲೈಯರಸನ ದರ್ಶನಕ್ಕೆ ಬರುವುದರಿಂದ ಎಲ್ಲರೂ ಭಗವದ್ಭಕ್ತರೇ ಆಗಿದ್ದಾರೆ. ಆದುದರಿಂದ ಅವರೆಲ್ಲರೂ ಸಂಚರಿಸುವ ಒಂದೇ ಮಾರ್ಗವಾಗಿರುವುದು ಶ್ರೀನಿವಾಸನ ಮಂದಿರದ ಒಳಗಡೆಯ ಗರ್ಭಗೃಹದ ಮುಂಭಾಗದ ಬಾಗಿಲು, ಆದುದರಿಂದ ಅಲ್ಲಿರುವ ಹೊಸಲಿನ ಒಂದು ಮೆಟ್ಟಿಲಾಗಿ ನಾನು ಬಿದ್ದಿದ್ದರೆ, ಎಲ್ಲ ಭಕ್ತರುಗಳ ಪಾದಧೂಳು ನನಗೆ ತಗಲುವಂತಾಗುತ್ತದೆ ಮತ್ತು ಅಲ್ಲಿ ಮಲಗಿ ಭಗವಂತನ ಬಿಂಬವನ್ನು ನೋಡಿದರೆ ಅವನ ಮುಗುಳ್ನಗೆಯನ್ನು ಸೂಸುವ ಮುಖದಲ್ಲಿನ, ಹವಳದಂತಿರುವ ಕೆಂದುಟಿಗಳನ್ನೂ ಕಾಣಬಹುದು. ಆದುದರಿಂದ ನಿನ್ನ ಗರ್ಭಗೃಹದ ಮುಂದಿರುವ ಬಾಗಿಲಿನ ಹೊಸಲಿನ ಮೆಟ್ಟಿಲಾಗಿರುವ ಜನ್ಮವನ್ನು ನಾನು ಅಪೇಕ್ಷಿಸುತ್ತೇನೆ'—ಎಂದು ಆಳ್ವಾರರು ಹೇಳಿದ್ದಾರೆ. ||೯||

[ಆಳ್ವಾರರು ಈ ರೀತಿ ಪ್ರಾರ್ಥನೆ ಮಾಡಿದುದರಿಂದಲೇ ಭಗವಂತನು ಅವರಿಗೆ ಅದನ್ನು ಅನುಗ್ರಹಿಸಿಕೊಟ್ಟನೆಂದು, ಭಗವಂತನ ಅರ್ಚಾಮೂರ್ತಿಗಳ ಯಾವುದೇ ದೇವಸ್ಥಾನದಲ್ಲಾದರೂ ಭಗವಂತನ ಮುಂಭಾಗದಲ್ಲಿರುವ ಹೊಸಲಿನ ಮೆಟ್ಟಿಲನ್ನು "ಕುಲಶೇಖರಪ್ಪಡಿ"—ಎಂದು ವ್ಯವಹಾರ ಮಾಡುವುದೇ ನಮ್ಮ ಸಂಪ್ರದಾಯದಲ್ಲಿ ಬೆಳೆದು ಬಂದಿದೆ].

**ಉಂಬರುಲಹಾಂಡೊರುಕುಡೈಕ್ಕೀಳ್ ಉರುಪ್ಪಶಿತನ್**
**ಅಂಬೊರ್ಕಲೈಯಲ್‌ಕುಲ್ ಪೆಟ್ರಾಲು ಮಾದರಿಯೇನ್**
**ಶೆಂಬವಳವಾಯಾನ್ ತಿರುವೇಂಗಡಮೆನ್ನುಮ್**
**ಎಂಬೆರುಮಾನ್ ಪೊನ್‌ಮಲೈಮೇಲ್ ಏದೇನು ಮಾವೇನೇ ||೧೦||**

**ಉಂಬರುಲಕು** = ಊರ್ಧ್ವಲೋಕಗಳೆಲ್ಲವನ್ನೂ, **ಒರುಕುಡೈಕ್ಕೀಳ್** = ಒಂದೇ ಬೆಳ್ಗೊಡೆಯ ನೆರಳಲಿದ್ದು, **ಆಂಡು** = (ಏಕಚ್ಛತ್ರಾಧಿಪತ್ಯದಿಂದ) ಆಳುತ್ತಾ, **ಉರ್ಪಶಿತನ್** = ಊರ್ವಶಿಯು, **ಅಮ್** = ಸುಂದರವಾದ, **ಪೊನ್‌ಕಲೈ** = ಚಿನ್ನದ ಆಭರಣಗಳಿಂದ ಅಲಂಕರಿಸಲ್ಪಟ್ಟಿರುವ, **ಅಲ್‌ಕುಲ್** = ಜಘನ ಪ್ರದೇಶವು, **ಪೆಟ್ರಾಲುಂ** = ಲಭಿಸಿದರೂ, **ಆತರಿಯೇನ್** = ಅದನ್ನು ಒಂದು ವಸ್ತುವಾಗಿ ಆದರದಿಂದ ಅಪೇಕ್ಷಿಸುವುದಿಲ್ಲ. **ಶೆಮ್** = ಕೆಂಪಡರ್ದಿರುವ, **ಪವಳಮ್** = ಹವಳ ದಂತಿರುವ, **ವಾಯಾನ್** = ತುಟಿಗಳನ್ನು ಹೊಂದಿರುವ, **ಎಂಬೆರುಮಾನ್** = ನನ್ನ ಸ್ವಾಮಿಯು (ಬಿಜಯ ಮಾಡಿಸಿರುವ) **ತಿರುವೇಂಗಡಮೆನ್ನುಂ** = ವೇಂಕಟಾ-ಚಲವೆಂದು ಪ್ರಸಿದ್ಧವಾದ, **ಪೊನ್‌ಮಲೈಮೇಲ್** = ಚಿನ್ನದಂತೆ ಸ್ಪೃಹಣೀಯ ವಾದ ತಿರುಮಲೆಯಲ್ಲಿ, **ಏದೇನುಮಾವೇನ್** = ಯಾವುದಾದರೊಂದು ವಸ್ತು ವಾಗಿರಬೇಕು. ||೧೦||

ಹಿಂದಿನ ಹಾಡಿನಲ್ಲಿ ಭಗವಂತನ ಮುಂದಿರುವ ಹೊಸಲಿನ ಮೆಟ್ಟಿಲಾಗಿರ-ಬೇಕೆಂದು ಆಸೆಪಟ್ಟರು. ಆದರೆ ದೇವಸ್ಥಾನದಲ್ಲಿ ಹಣವು ಅಧಿಕವಾಗಿ ಬಂದರೆ, ಆ ಮೆಟ್ಟಿಲುಗಳಿಗೂ ಬೆಳ್ಳಿಯ ಅಥವಾ ಬಂಗಾರದ ತಗಡನ್ನು ಹೊದ್ದಿಸಿ ಕವಚ ಹಾಕುತ್ತಾರೆ. ಆಗ ನಾನು ಹೊಸಲಾಗಿದ್ದರೂ ಅಲ್ಲಿ ಬರುವ ಭಗವದ್ಭಕ್ತರ ಪಾದ ಧೂಳಿಯು ನನಗೆ ತಗಲುವುದಿಲ್ಲ. ಭಗವಂತನ ಕೆಂತುಟಿಗಳ ದರ್ಶನವೂ ಆಗುವುದಿಲ್ಲ. ಹೀಗೆ ನನ್ನ ಮತಿಗೆ ಎಟುಕುವಂತೆ ಯಾವುದೇ ಜನ್ಮವನ್ನೂ ಅಪೇಕ್ಷಿಸಿದರೂ, ಅವುಗಳಲ್ಲೆಲ್ಲಾ ಒಂದಲ್ಲಾ ಒಂದು ಕೊರತೆ ಇದ್ದೇ ಇರುತ್ತದೆ. ಆದುದರಿಂದ ನನ್ನ ಸ್ವಾಮಿಯು ಬಿಜಯ ಮಾಡಿಸಿರುವ, ವೇಂಕಟಾಚಲವೆಂದು ಪ್ರಸಿದ್ಧವಾದ, ಹೊನ್ನಿನಂತೆ ಸ್ಪೃಹಣೀಯವಾದ, ಹೊನ್ನಿನಂತೆ ಬಹಳ ಬೆಲೆಬಾಳುವ ಭಗವಂತನ ಗುಣಗಳೇ ಮೂರ್ತಿವೆತ್ತಂತಿರುವ ತಿರುಮಲೈಯಲ್ಲಿ ಯಾವುದಾದರೊಂದು ವಸ್ತುವಿನ ರೂಪವನ್ನು ತಾಳಬೇಕು — ಎಂದು ಆಶಿಸುತ್ತಾರೆ.

'ಊರ್ಧ್ವಲೋಕಗಳೆಲ್ಲವನ್ನೂ ಒಂದೇ ಬೆಳ್ಗೊಡೆಯ ನೆರಳಲ್ಲಿದ್ದು ಏಕಚ್ಛತ್ರಾಧಿ ಪತ್ಯದಿಂದ ಆಳುತ್ತಿದ್ದು, ಸುಂದರಿಯರೆಲ್ಲೆಲ್ಲಾ ಪ್ರಸಿದ್ಧವಾದ ಊರ್ವಶಿಯ ಸುಂದರ ವಾದ, ಚಿನ್ನದ ಆಭರಣಗಳಿಂದ ಅಲಂಕೃತವಾದ ಜಘನಪ್ರದೇಶವೂ ಸುಲಭವಾಗಿ ಲಭಿಸುವ ಇಂದ್ರನ ಪದವಿಯನ್ನೇ ಕೊಟ್ಟರೂ, ನಾನು ಅದನ್ನು ಒಂದು ವಸ್ತುವಾಗಿ ಪರಿಗಣಿಸಿ ಆದರಿಸುವುದಿಲ್ಲ. ಕೆಂತುಟಿಗಳನ್ನು ಹೊಂದಿರುವ ನನ್ನ ಸ್ವಾಮಿಯು

ಬಿಜಯ ಮಾಡಿಸಿರುವ ಹೊನ್ನಿನಂತಿರುವ ತಿರುಮಲೈಯಲ್ಲಿ ಯಾವುದಾದರೊಂದು ಜನ್ಮವನ್ನು ಪಡೆಯಬೇಕೆಂದಿಚ್ಛಿಸುತ್ತೇನೆ'—ಎಂದು ಆಳ್ವಾರರು ಆಶಿಸುತ್ತಾರೆ. ||೧೦||

**ಮನ್ನಿಯ ತಣ್ ಶಾರಲ್ ವಡವೇಂಗಡತ್ತಾನ್ರನ್**
**ಪೊನ್ನಿಯಲುಂ ಶೇವಡಿಗಳ್ ಕಾಣ್ಬಾನ್ ಪುರಿನ್ದಿರೈಂಜಿ**
**ಶೊನ್ನವಿಲುಂ ಕೂರ್‌ವೇಲ್ ಕುಲಶೇಖರನ್ ಶೊನ್ನ**
**ಪನ್ನಿಯನೂಲ್ ತಮಿಳ್‌ವಲ್ಲಾರ್ ಪಾಂಗಾಯ ಪತ್ತರ್‌ಕಳೇ ||೧೧||**

**ಶೊಲ್‌ನವಿಲುಂ**=ಶತ್ರುವಧಕ್ಕೆಂದೇ ಏರ್ಪಟ್ಟಿರುವ, **ಕೂರ್**=ತೀಕ್ಷ್ಣವಾಗಿರುವ, **ವೇಲ್**=ವೇಲಾಯುಧವನ್ನು ಹೊಂದಿರುವ, **ಕುಲಶೇಖರನ್**=ಕುಲಶೇಖರಾಳ್ವಾನ್‌ರವರು, **ಮನ್ನಿಯ**=ಅತಿಮನೋಹರವಾಗಿರುವ, **ತಣ್**=ತಣ್ಣಗಿರುವ, **ಶಾರಲ್**=ಸುಸ್ಥಿರವಾದ (ಪ್ರತ್ಯಂತ ಭಾಗಗಳನ್ನು ಹೊಂದಿರುವ) **ವಡವೇಂಗಡತ್ತಾನ್** = ಉತ್ತರ ದಿಕ್ಕಿನಲ್ಲಿರುವ ವೆಂಕಟಾಚಲಾಧಿಪತಿಯ, **ಪೊನ್ನಿಯಲುಂ** = ಹೊನ್ನಿನಂತೆ ಶ್ಲಾಘ್ಯವಾದ, **ಶೇವಡಿಕಳ್**=ಚರಣಾರವಿಂದಗಳನ್ನು, **ಕಾಣ್ಬಾನ್**=ಸೇವಿಸುವುದಕ್ಕೆ, **ಪುರಿನ್ದು**=ಆಸೆಪಟ್ಟು, **ಇರೈಂಜಿ**=ತಲೆಬಾಗಿ, **ಶೊನ್ನ**=ಹೇಳಿರುವ, **ಪನ್ನಿಯ**=ಹರಡಿರುವ, **ನೂಲ್**=ಶಾಸ್ತ್ರಲಕ್ಷಣಗಳಿಂದ ಕೂಡಿದ, **ತಮಿಳ್‌ಮಾಲೈ**=ದ್ರಾವಿಡ ಪದ್ಯಮಾಲಿಕೆಯನ್ನು, **ವಲ್ಲಾರ್**=ಅಭ್ಯಾಸ ಮಾಡುವವರು, **ಪಾಂಗಾಯ**=ಆ ಶ್ರೀನಿವಾಸನ ಸಂಕಲ್ಪಕ್ಕನುಗುಣವಾದ, **ಪತ್ತರ್‌ಹಳ್**=ಭಕ್ತರುಗಳಾಗುತ್ತಾರೆ. ||೧೧||

ಶತ್ರುವಧಕ್ಕೆಂದೇ ಏರ್ಪಟ್ಟಿರುವ, ತೀಕ್ಷ್ಣವಾದ ವೇಲಾಯುಧವನ್ನು ಹೊಂದಿರುವ, ಕುಲಶೇಖರಾಳ್ವಾರರವರು — ಅತಿಮನೋಹರವಾಗಿರುವ ಶೀತಲವಾಗಿ ಸುಸ್ಥಿರವಾಗಿರುವ ಭಾಗಗಳಿಂದ ಕೂಡಿರುವ, ಆಳ್ವಾರರು ವಾಸಿಸುತ್ತಿದ್ದ (ಕೊಂಗುದೇಶ ಅಥವಾ ಮಧುರೈಗೆ) ಉತ್ತರ ದಿಕ್ಕಿನಲ್ಲಿರುವ ವೆಂಕಟಾಚಲಾಧಿಪತಿಯ, ಹೊನ್ನಿನಂತೆ ಪ್ರಾಪ್ಯವೂ ಪ್ರಾಪಕವಾಗಿಯೂ ಶ್ಲಾಘ್ಯವಾಗಿರುವ ಚರಣಾರವಿಂದಗಳನ್ನು ಸೇವಿಸುವುದಕ್ಕೆ ಆಸೆಪಟ್ಟು ತಲೆಬಾಗಿ ನಮಸ್ಕರಿಸಿ ಪ್ರಾರ್ಥನಾರೂಪದಲ್ಲಿ ಹೇಳಿರುವ, ಅಲ್ಲಲ್ಲಿಯೇ ಹರಡಿಕೊಂಡಿರುವ ವೇದಾಂತ ಮತ್ತು ಕಾವ್ಯಶಸ್ತ್ರ ಲಕ್ಷಣಗಳಿಂದ ಕೂಡಿದ, ಈ ದ್ರಾವಿಡ ಪದ್ಯಮಾಲಿಕೆಯನ್ನು ಅಭ್ಯಾಸಮಾಡುವವರು, ಭಗವಂತನ ಮನಸ್ಸಿಗೆ ಸಂತೋಷವನ್ನುಂಟುಮಾಡುವ ಭಕ್ತರುಗಳಾಗುತ್ತಾರೆ'— ಎಂದು ಹೇಳಿ ಆಳ್ವಾರರು ಈ ದಶಕಕ್ಕೆ ಫಲಶ್ರುತಿಯನ್ನು ಹಾಡಿ ದಶಕವನ್ನು ಮುಗಿಸುತ್ತಾರೆ. ||೧೧||

# ಪೆರುಮಾಳ್ ತಿರುಮೊಳಿ — ಐದನೆಯ ದಶಕ

ಭಗವಂತನಲ್ಲಿ ಶರಣಾಗತ್ಯನುಷ್ಠಾನಮಾಡುವ, ಮುನ್ನ ನಮ್ಮ ಮನಸ್ಸಿನಲ್ಲಿ ಪ್ರಧಾನವಾಗಿ–'ಆಕಿಂಚನ್ಯ' ಮತ್ತು 'ಅನನ್ಯಗತಿತ್ವ'–ಎನ್ನುವ ಎರಡು ವಿಷಯಗಳು ನಮ್ಮಲ್ಲಿ ಮನದಟ್ಟಾಗಬೇಕು.

ಭಗವಂತನು ಗೀತಾಚಾರ್ಯನಾಗಿ ಉಪದೇಶಿಸಿರುವ ಕರ್ಮಯೋಗ ಜ್ಞಾನ ಯೋಗ ಸಹಕೃತವಾದ ಭಕ್ತಿಯೋಗವನ್ನು ನಾನು ಮಾಡಲು ಶಕ್ತನಲ್ಲ, ನಾನು ಅಜ್ಞಾನಿ–ಅಕಿಂಚನ–ಎಂಬ ಅಶಕ್ತತೆಯನ್ನು ಸ್ಪಷ್ಟವಾಗಿ ತಿಳಿದು ಭಗವಂತನಲ್ಲಿ ಅದನ್ನು ಅರುಹಬೇಕು. ಇದೇ 'ಆಕಿಂಚನ್ಯ'–ಎಂಬ ವಿಷಯ. ಎರಡನೆಯದಾಗಿ ಈ ಸಂಸಾರಸಾಗರವನ್ನು ದಾಟಲು ಭಗವಂತನ ಅಡಿದಾವರೆಯಲ್ಲಿ ಶರಣುಹೋಗು ವುದಲ್ಲದೆ ಬೇರೆ ಹಾದಿಯಿಲ್ಲ–ಎಂಬುದನ್ನು ಮನವರಿತು ಪರಮಾತ್ಮನಲ್ಲಿಯೂ ವಿಜ್ಞಾಪಿಸಿ, ನನ್ನ ರಕ್ಷಾಭಾರ ನಿನಗೇ ಸೇರಿದುದು, ನೀನೇ ನನಗೆ ರಕ್ಷಕನಾಗಿರಬೇಕು 'ತ್ವಮೇವ ಉಪಾಯ ಭೂತೋ ಮೇ ಭವ'—'ನಿರಾಸಕಸ್ಯಾಪಿ ನ ತಾವದುತ್ಸಹೇ, ಮಹೇಶ ! ಹಾತುಂ ತವ ಪಾದಪಂಕಜಮ್' ಅಕಿಂಚನೋಽನನ್ಯಗತಿಃ ಶರಣ್ಯ ತ್ವತ್ಪಾದಮೂಲಂ ಶರಣಂ ಪ್ರಪದ್ಯೇ'—ಎಂದು ವಿಜ್ಞಾಪಿಸಿ ಶರಣಾಗತಿಯನ್ನು ಅನುಷ್ಠಿಸಬೇಕು. ಈ ರೀತಿ ನಮಗೆ ಕರ್ಮಬಂಧದಿಂದ ಮುಕ್ತರಾಗಲು ಬೇರೆ ಹಾದಿಯಿಲ್ಲವೆಂದು ತಿಳಿದು ಭಗವಂತನಲ್ಲಿ ಅರುಹುವಿಕೆಯೇ—'ಅನನ್ಯಗತಿಕತ್ವ' ಎನ್ನುತ್ತಾರೆ. ಕುಲಶೇಖರಾಳ್ವಾರವರು ಈ ದಶಕದಲ್ಲಿ ತನ್ನ ಅನನ್ಯಗತಿಕತ್ವವನ್ನು ಪರಿಪರಿಯಾಗಿ ಭಗವಂತನಲ್ಲಿ ವಿಜ್ಞಾಪಿಸಿಕೊಳ್ಳುತ್ತಾರೆ. ಈ ಆಳ್ವಾರರು ಕೇರಳ ದೇಶಾಧಿಪತಿಯಾಗಿದ್ದರು. 'ತಿರುವತ್ತುಕ್ಕೋಡು'—ಎನ್ನುವ ದಿವ್ಯದೇಶವು ಕೇರಳ ದೇಶಕ್ಕೆ ಅಲಂಕಾರಪ್ರಾಯವಾಗಿದೆ. ಅಲ್ಲಿ ಬಿಜಯಮಾಡಿಸಿರುವ ಪರಮಾತ್ಮನ ನಾಮವೇ 'ವಿತ್ತುವಕೋಟ್ಟಮ್ಮಾನ್'–ಎಂದು. ಪ್ರಧಾನತಮವಾದ ಶಾಸ್ತ್ರಾರ್ಥ ವನ್ನು ಸ್ವದೇಶಾಧೀಶನಾದ ಈ ಅರ್ಚಾಮೂರ್ತಿಯ ಸನ್ನಿಧಾನದಲ್ಲಿ ವಿಜ್ಞಾಪಿಸಿ ಕೊಳ್ಳುತ್ತಾರೆ.

**ತರುತುಯರುಂ ತಡಾಯೇಲ್ ಉನ್ ಶರಣಲ್ಲಾಲ್ ಶರಣಿಲ್ಲೈ**
**ವಿರೈಕುಳುವು ಮಲರ್ಪೊಳಿಲ್ ಶೂಳ್ ವಿತ್ತುವಕೋಟ್ಟಮ್ಮಾನೇ !**
**ಅರಿಶಿನತ್ತಾಲ್ ಈನ್ರತಾಯ್ ಅಗತ್ತಿಡಿನುಂ ಮಟ್ರವಳ್ ತನ್**
**ಅರುಳ್ ನಿನೈನ್ದೇ ಅಳುಂಕುಳುವಿ ಅದುವೇ ಪೋನ್ರಿರುನ್ದೇನೇ ॥೧॥**

**ವಿರೈಕುಳುವು** = ಅತ್ಯಧಿಕವಾದ ಪರಿಮಳವನ್ನು ಸೂಸುವ, **ಮಲರ್** = ಪುಷ್ಪಗಳನ್ನು ಹೊಂದಿರುವ, **ಪೊಳಿಲ್** = ತೋಟಗಳಿಂದ, **ಶೂಳ್** = ಸುತ್ತುವರೆ-

ಯಲ್ಪಟ್ಟಿರುವ, **ವಿತ್ತುವಕ್ಕೋಡು** = 'ತಿರುವತ್ತುವಕ್ಕೋಡು'-ಎನ್ನುವ ದಿವ್ಯ ದೇಶದಲ್ಲಿ ಬಿಜಯಮಾಡಿಸಿರುವ, **ಅಮ್ಮಾನೇ** = ಸ್ವಾಮಿತ್ವವನ್ನು ಹೊಂದಿರುವ ಸರ್ವೇಶ್ವರನೇ! **ತರು**=(ನೀನೇ ಕರ್ಮಾನುಗುಣವಾಗಿ) ಕೊಡುವ, **ತುಯರಂ**= ದುಃಖವನ್ನು, **ತಡಾಯೇಲ್**=ಹೋಗಲಾಡಿಸದಿದ್ದರೆ, **ಉನ್ ಶರಣಲ್ಲಾಲ್**= ನಿನ್ನ ತಿರುವಡಿಗಳನ್ನು ಬಿಟ್ಟು, **ಶರಣಿಲ್ಲೈ**=ನನಗೆ ಬೇರೊಂದು ಉಪಾಯವಿಲ್ಲ. **ಈನ್ರತಾಯ್** = ಹಡೆದ ತಾಯಿಯಾದರೋ, **ಅರಿಶಿನತ್ತಾಲ್** = (ಮಕ್ಕಳು ಮಾಡುವ ಉಪದ್ರವವನ್ನು ಸಹಿಸದವಳಾಗಿ, ಆ ಶಿಶುವನ್ನು) ಕೊಂದುಬಿಡಬೇಕೆಂಬ ಕೋಪದಿಂದ, **ಅಕತ್ತಿಡಿನುಂ** = ಆ ಶಿಶುವನ್ನು ತಳ್ಳಿಬಿಟ್ಟರೂ, (ಆ ಶಿಶುವು) **ಮಟ್ರು**=ಬೇರೊಂದನ್ನೂ ನೆನೆದುಕೊಳ್ಳದೆ, **ಅವಳ್‌ತನ್**= ಆ ತಾಯಿಯು ಹಿಂದೆ ತೋರಿರುವ, **ಅರುಳ್**=ಕೃಪೆಯನ್ನೇ, **ನಿನೈನ್ದು**=ಸ್ಮರಿಸಿಕೊಂಡು, **ಅಳುಮ್**= ಅಳುವಂತೆ, **ಕುಳವಿಯದುವೇ ಪೋನ್ರಿರುನ್ದೇನ್**=ಆ ಸ್ತನ್ಯಪಾನ ಮಾಡುವ ಶಿಶುವಿನಂತೆಯೇ ನಾನೂ ಇದ್ದೇನೆ. **ಮಟ್ರು**=ಬೇರೇನು ತಾನೇ ಹೇಳಲಿ?

"ಸರ್ವಗನ್ಧಃ"—ಎಂದು ಉಪನಿಷತ್ತುಗಳಲ್ಲಿ ವರ್ಣಿಸಲ್ಪಟ್ಟಿರುವ ಪರಮಾತ್ಮನು ತನಗನುಗುಣವಾಗಿರುವ, ಅತ್ಯಧಿಕವಾದ ಪರಿಮಳವನ್ನು ಸೂಸುವ ಪುಷ್ಪಭರಿತವಾದ ಉದ್ಯಾನಗಳಿಂದ ಸುತ್ತುವರಿಯಲ್ಪಟ್ಟ 'ವಿತ್ತುವಕೋಡು'–ಎಂಬ ದಿವ್ಯದೇಶದಲ್ಲಿ, ತನ್ನ ಆಶ್ರಿತರಿಗೆ ರಕ್ಷಣೆಯನ್ನು ನೀಡಲು ಅರ್ಚಾಮೂರ್ತಿ ಸ್ವರೂಪದಲ್ಲಿ ಬಿಜಯ ಮಾಡಿಸಿದ್ದಾನೆ. 'ಸರ್ವಗಂಧನು'–ಇಲ್ಲಿ ಬಿಜಯ ಮಾಡಿಸಿರುವುದು, ನಮ್ಮ ಪ್ರಾಕೃತ ಗಂಧವನ್ನು ಹೋಗಲಾಡಿಸಿ, ನಮಗೆ ಅಪ್ರಾಕೃತದೇಹ ಪರಿಮಳವನ್ನು ಉಂಟು ಮಾಡುವ ಸಲುವಾಗಿಯೇ. ಗೋದಾಸ್ತುತಿಯಲ್ಲಿ ವೇದಾಂತ ದೇಶಿಕರು–'ಕರ್ಮಾನು ರೂಪ ಫಲದಾನರತಸ್ಯ ಭರ್ತುಃ'-- ಎಂದು ಹೇಳಿರುವಂತೆಯೇ ಭಗವಂತನೂ ಚೇತನರಿಗೆ ಅವರವರ ಪೂರ್ವಾರ್ಜಿತ ಕರ್ಮಾನುಗುಣವಾಗಿ ಸುಖದುಃಖಾನುಭವ-ಗಳನ್ನುಂಟುಮಾಡುತ್ತಾನೆ. ಕರ್ಮಫಲದಿಂದಲೇ ಚೇತನನಿಗೆ ಪ್ರಕೃತಿ ಅಥವಾ ಮಾಯೆಯ ಸಂಬಂಧವೇರ್ಪಟ್ಟಿದೆ. ಈ ಮಾಯೆಯನ್ನು ಹೋಗಲಾಡಿಸಲು ಶ್ರಿಯಃಪತಿಯಾದ ಶ್ರೀಮನ್ನಾರಾಯಣನಲ್ಲದೇ ಬೇರಾರಿಗೂ ಸಾಧ್ಯವಿಲ್ಲ. ಅವನೂ ಅವನ ಅಡಿದಾವರೆಯಲ್ಲಿ ಶರಣುಹೋಗಿ ನನ್ನ ಕರ್ಮಬಂಧವನ್ನು ನೀಗಿಸಿ ಮೋಕ್ಷ ವನ್ನನುಗ್ರಹಿಸಬೇಕೆಂದು ಪ್ರಾರ್ಥಿಸಿದವನಿಗೆ ಮಾತ್ರವೇ ಕರ್ಮಬಂಧವನ್ನು ನೀಗಿ ಸುತ್ತಾನೆ. ಇದನ್ನೇ ಭಗವದ್ಗೀತೆಯಲ್ಲಿ "ಮಮ ಮಾಯಾ ದುರತ್ಯಯಾ" ಎಂದೂ "ಮಾಮೇವ ಯೇ ಪ್ರಪದ್ಯಂತೇ ಮಾಯಾಮೇ ತಾಂ ತರಂತಿತೇ |" —ಎಂದೂ ಹೇಳಿದ್ದಾನೆ. ಆದುದರಿಂದ ಆಳ್ವಾರರವರು ಈ ಹಾಡಿನಲ್ಲಿ ಭಗವಂತನಲ್ಲಿ ತನ್ನನ್ನು ಕರ್ಮಸಂಬಂಧದಿಂದ ಬರುವ ದುಃಖದಿಂದ ಪಾರುಮಾಡಬೇಕೆಂದು ಬೇಡಿದ್ದಾರೆ.

"ವಿಶ್ವಕ್ಸೇನಾದಿಗಳಿಂದ ದಿವ್ಯದೇಶದಲ್ಲಿ ಬಿಜಯಮಾಡಿಸಿರುವ ಎಲೈ ! ನನ್ನ ಪ್ರಭುವೇ ! ಸರ್ವಗಂಧನಾದ ನೀನು ಇಲ್ಲಿ ಬಂದಿರುವುದು ನಮ್ಮ ಪೂತಿಗಂಧವನ್ನು ಹೋಗಲಾಡಿಸಲಲ್ಲವೇ ? ನೀನೇ ನಮ್ಮ ಕರ್ಮಬಂಧದಿಂದ ಬಂದಿರುವ ದುಃಖವನ್ನು ಹೋಗಲಾಡಿಸದಿದ್ದರೆ ಇನ್ನಾರು ತಾನೇ ಹೋಗಲಾಡಿಸಿಯಾರು ? "ತ್ವಯಿ ರಕ್ಷತಿ ರಕ್ಷಕೈಃ ಕಿಮನ್ಯೈಃ ತ್ವಯಿ ಚಾರಕ್ಷತಿ ರಕ್ಷಕೈಃ ಕಿಮನ್ಯೈಃ |" ನಿನ್ನ ಅಡಿದಾವರೆಗಳನ್ನು ಆಶ್ರಯಿಸಿ ಶರಣುಹೋಗುವುದನ್ನು ಬಿಟ್ಟು ಇನ್ನಾವ ಉಪಾಯವನ್ನೂ ನಾನರಿಯೆ. ಅನೇಕ ವರ್ಷಕಾಲ ಮಕ್ಕಳಿಲ್ಲವೆಂದು ದುಃಖಪಟ್ಟು, ಸಂತಾನಭಾಗ್ಯ ಪಡೆಯಲು ತಪಸ್ಸನ್ನಾಚರಿಸಿ, ಅದರ ಫಲದಿಂದ ಗರ್ಭವತಿಯಾಗಿ, ಹತ್ತು ತಿಂಗಳು ಕಾಲ ಗರ್ಭದಲ್ಲಿ ಶಿಶುವನ್ನು ಹೊತ್ತು ಅದಕ್ಕೆ ಜನ್ಮವಿತ್ತು ಅದನ್ನು ಪೋಷಿಸುತ್ತಿರುವ ತಾಯಿಯಾದರೋ, ಯಾವಾಗಲೋ ಒಮ್ಮೆ ಆ ಶಿಶುವಿನ ಉಪದ್ರವವನ್ನು ತಡೆಯಲಾರದೆ, ಅದನ್ನು ಕೊಂದುಹಾಕಿಬಿಡಬೇಕೆಂಬ ಕೋಪದಿಂದ ತನ್ನಿಂದ ದೂರತಳ್ಳಿದರೆ, ಆ ಶಿಶುವು ಅಂದು ತಾಯಿಯು ಅದನ್ನು ತಳ್ಳಿಹಾಕಿದುದನ್ನು ಸ್ಮರಿಸದೆ, ಹುಟ್ಟಿನಿಂದ ಅದಕ್ಕೆ ತನ್ನ ಪ್ರೀತಿ ವಾತ್ಸಲ್ಯದಿಂದ ಕೊಟ್ಟ ಪೋಷಣೆಯನ್ನು ಸ್ಮರಣೆಮಾಡಿಕೊಂಡು, ಬೇರಾವ ಮಾರ್ಗವೂ ಅರಿಯದೆ, ತನ್ನ ತಾಯಿಯ ಕಾಲಿನಲ್ಲೇ ಬಿದ್ದು, ಮತ್ತೊಮ್ಮೆ ತಾನು ಹಿಂದೆ ಮಾಡಿದ ಆ ತಪ್ಪನ್ನು ಮಾಡುವುದಿಲ್ಲವೆಂದು ಹೇಳುತ್ತಾ ಗಟ್ಟಿಯಾಗಿ ಅಳುತ್ತದೆ. ಅಂತೆಯೇ ನಾನೂ ಸೃಷ್ಟಿಗೆ ಪೂರ್ವದಲ್ಲಿ ನಿನ್ನ ಉದರದಲ್ಲಿ ಅಚೇತನ ಪ್ರಾಯವಾಗಿ ಬಿದ್ದಿರಲು, ಈ ಅಚೇತನಪ್ರಾಯರಾದ ಚೇತನರನ್ನು ನೋಡಿ, ಯಾವ ಕಾರಣವೂ ಇಲ್ಲದೆ, ನಿರ್ಹೇತುಕವಾದ ಕೃಪೆಯನ್ನು ಹೊಂದಿದವನಾಗಿ, ಇವರನ್ನು ಕರ್ಮಬಂಧದಿಂದ ಬಿಡಿಸಿ ಇವರಿಗೆ ಪರಿಪೂರ್ಣ ಆನಂದವನ್ನುಂಟುಮಾಡಬೇಕೆಂದು ಸಂಕಲ್ಪಿಸಿ, "ಸ ತಪೋಽತಪ್ಯತ | ಸತಪಸ್ತಪ್ತ್ವಾ |"— ಎಂದು ಶ್ರುತಿಗಳಲ್ಲಿ ಹೇಳುವಂತೆ ತಪಸ್ಸನ್ನಾಚರಿಸಿ, ನಮ್ಮನ್ನು ರಕ್ಷಿಸಲು ಪ್ರಪಂಚ ಸೃಷ್ಟಿಯನ್ನು ಮಾಡಿ, ನಮಗೆ ಕರಣಕಳೇಬರಗಳನ್ನು ಕೊಟ್ಟು, ಶಾಸ್ತ್ರಗಳೆಂಬ ದೀಪದಿಂದಲೂ, ಆಚಾರ್ಯೋಪದೇಶದಿಂದಲೂ ಭಗವಂತನೇ ನಮಗೆ ಉಪಾಯ ಮತ್ತು ಉಪೇಯ. ಅವನ ಅಡಿದಾವರೆಯೇ ನಮಗೆ ರಕ್ಷಕವಾದುದು. ಸಂಸಾರ ಬಂಧವನ್ನು ನೀಗುವುದಕ್ಕೆ ಭಗವಂತನ ಅಡಿದಾವರೆಯಲ್ಲಿ ಶರಣುಹೋಗುವುದನ್ನು ಬಿಟ್ಟು ಬೇರಾವ ಉಪಾಯವಿಲ್ಲ. ಅವನಲ್ಲಿ ಶರಣುಹೋದರೆ, ಅವನು ಶರಣಾಗತರನ್ನು ಕೈಬಿಡದೆ ರಕ್ಷಿಸುತ್ತಾನೆ —ಇದೇ ಮೊದಲಾದ ಜ್ಞಾನವನ್ನೂ ನಮಗೆ ಉಂಟುಮಾಡಿ, ಈಗ ನನ್ನ ದುಃಖವನ್ನು ನೀನು ಹೋಗಲಾಡಿಸದಿದ್ದರೆ, ನಾನೂ ಬೇರಾವ ಉಪಾಯವನ್ನೂ ಅರಿಯದೆ, ಈಗಿನ ನಿನ್ನ ನಿಗ್ರಹವನ್ನು ಲಕ್ಷ್ಯಮಾಡದೆ, ಇದರವರೆವಿಗೂ ಕರಣಕಳೇಬರಗಳನ್ನು ಕೊಟ್ಟು, ಆಚಾರ್ಯಸಮಾಶ್ರಯಣ ಮಾಡಿಸಿ, ತತ್ತ್ವಜ್ಞಾನವುಂಟಾಗುವಂತೆ ಮಾಡಿ ನನಗೆ ಅನುಗ್ರಹಿಸಿರುವ, ನಿನ್ನ ಅನುಗ್ರಹ ವಿಶೇಷವೊಂದನ್ನೇ ನೆನೆದು, ತಾಯಿಯ ಕಾಲಲ್ಲಿ ಬಿದ್ದ ಶಿಶುವಿನಂತೆ, ನಿನ್ನ ಅಡಿದಾವರೆಗಳಲ್ಲಿ ಬಿದ್ದು, ನನ್ನ ಸರ್ವವಿಧವಾದ ತಪ್ಪನ್ನೂ

ಕ್ಷಮಿಸಿ, ನನ್ನನ್ನು ರಕ್ಷಿಸಬೇಕೆಂದು ಅಳುತ್ತಲೇ ಮೊರೆಯಿಡುತ್ತೇನೆ. ಇದನ್ನು ಬಿಟ್ಟು ಬೇರಾವ ಮಾರ್ಗವನ್ನೂ ನಾನರಿಯೆ.

ಈ ಪದ್ಯದ ಅಭಿಪ್ರಾಯವನ್ನೇ ಆಳವಂದಾರ್ರವರು ಸ್ತೋತ್ರರತ್ನದಲ್ಲಿ—"ನಿರಾಸ ಕಸ್ಯಾಪಿ ನ ತಾವದುತ್ಸಹೇ ಮಹೇಶ ಹಾತುಂ ತವ ಪಾದಪಂಕಜಮ್ | ರುಷಾನಿರಸ್ತೋಽಪಿ ಶಿಶುಃ ಸ್ತನಂಧಯೋ ನ ಜಾತು ಮಾತುಶ್ಚರಣೌ ಜಿಹಾಸತಿ |" —ಎಂಬ ಶ್ಲೋಕದಲ್ಲಿ ಅನುಸಂಧಾನ ಮಾಡಿದ್ದಾರೆ. ||೧||

**ಕಂಡಾರಿಕಳ್ವನವೇ ಕಾದಲನ್ತಾನ್ ಶೆಯ್‌ದಿಡಿನುಂ**
**ಕೊಂಡಾನೈಯಲ್ಲಾಲ್ ಅರಿಯಾಕ್ಕುಲಮಗಳ್ ಪೋಲ್**
**ವಿಣ್‌ಶೋಯ್ ಮದಿಳ್‌ಪುಡೈಶೂಳ್ ವಿತ್ತುವಕ್ಕೋಟ್ಟಮ್ಮಾ ನೀ**
**ಕೊಂಡಾಳಾಯಾಗಿಲುಂ ಉನ್‌ಕುರೈಕಳಲೇ ಕೂರುವನೇ** ||೨||

**ಕಂಡಾರ್** = ಕಂಡವರೆಲ್ಲರೂ, **ಇಕಳ್‌ವನವೇ** = ದೂಷಿಸುವಂತಹ, (ಬೈಯ್ಯುವುದು, ಹೊಡೆಯುವುದೇ ಮೊದಲಾದುವುಗಳನ್ನು ತನ್ನ ವಿಷಯದಲ್ಲಿ) **ಕಾದಲನ್ತಾನ್** = ತನ್ನ ಪತಿಯು, **ಶೆಯ್‌ದಿಡಿನುಂ** = ಮಾಡಿದ್ದರೂ, **ಕೊಂಡಾನೈಯಲ್ಲಾಲ್** = ಆ ರೀತಿ ಅಪಕಾರವೆಸಗಿದ ತನ್ನ ಪತಿಯೊಬ್ಬನನ್ನು ಬಿಟ್ಟು, **ಅರಿಯಾ** = ಬೇರಾವ ಪುರುಷನನ್ನೂ ನಿನೈಯದ, **ಕುಲಮಕಳ್-ಪೋಲ್** = ಪತಿವ್ರತೆಯಂತೆ, **ವಿಣ್** = ಆಕಾಶದವರೆವಿಗೂ, **ಶೋಯ್** = ವ್ಯಾಪಿಸಿ ನಿಂತಿರುವ, **ಮದಿಳ್** = ಗೋಪುರಗಳಿಂದ, **ಪುಡೈ** = ನಾಲ್ಕೂ ಕಡೆಯೂ, **ಶೂಳ್** = ಸುತ್ತುವರೆಯಲ್ಪಟ್ಟಿರುವ, **ವಿತ್ತುವಕ್ಕೋಟ್ಟಮ್ಮಾ** = ವಿತ್ತುವಕ್ಕೋಡೆಂಬ ದಿವ್ಯದೇಶದಲ್ಲಿ ಬಿಜಯ ಮಾಡಿಸಿರುವ ಸ್ವಾಮಿಯೇ, **ನೀ** = ನೀನು (ನನ್ನನ್ನು) **ಕೊಂಡು** = ನಿನಗೇ ಶೇಷಭೂತನಾಗಿ ಸ್ವೀಕರಿಸಿ, **ಆಳಾಯಾಕಿಲುವನ್** = ನನ್ನನ್ನು (ತಕ್ಷಣದಲ್ಲಿಯೇ) ಕಿಂಕರನನ್ನಾಗಿ ಸ್ವೀಕರಿಸದಿದ್ದರೂ, **ಉನ್** = ನಿನ್ನ, **ಕುರೈ-ಕಳಲೇ** = ಆಭರಣಗಳಿಂದ ಅಲಂಕೃತವಾಗಿ ನೂಪುರಧ್ವನಿಗೈಯುವ ನಿನ್ನ ತಿರುವಡಿಗಳನ್ನೇ, **ಕೂರುವನ್** = ಸ್ತುತಿಸುವೆನು. ||೨||

ಪುರುಷಸೂಕ್ತ ಪ್ರತಿಪಾದ್ಯನಾದ ಭಗವಂತನೊಬ್ಬನೇ ನಿಜವಾದ ಪುರುಷ **"ಸ್ತ್ರೀ ಪ್ರಾಯಮಿತರೇ ಜನಾಃ"**–ಎಂದು ಹೇಳುವಂತೆಯೇ ಇತರ ಎಲ್ಲ ಚೇತನರೂ ಸ್ತ್ರೀಯರೇ. ಈ ಚೇತನರೆಂಬ ಸ್ತ್ರೀಯರಿಗೆ ಯೋಗ್ಯವಾದ ಪುರುಷ–ಪರಮಾತ್ಮನೊಬ್ಬನೆ. ಆದುದರಿಂದ ಆ ಪರಮಪುರುಷನನ್ನೇ ನಾವು ವಿವಾಹವಾಗಿ ಅವನೊಡನೆ ಬಾಳುವುದೇ ನಮಗೆ ಸ್ವರೂಪಪ್ರಾಪ್ತವಾದ ಬಾಳು. ಭಗವಂತನ ಸ್ವರೂಪ ಸ್ವಭಾವಗಳನ್ನು ಚೆನ್ನಾಗಿ ಅರಿತು ಅವನಲ್ಲಿ ಶರಣಾಗತಿ ಮಾಡುವುದೇ ನಮ್ಮ ವಿವಾಹ.

ವಿವಾಹವಾದ ಬಳಿಕ ಸತಿಯಾದವಳು ಪತಿಯೊಡನೆ ಕೂಡಿ ಜೀವನವನ್ನು ಸಾಗಿಸುವಂತೆ ಶರಣಾಗತನೂ, ಶರಣಾಗತಿಯನ್ನನುಷ್ಠಿಸಿದ ಬಳಿಕ ಯಾವಾಗಲೂ, ತನ್ನ ಪತಿಯಾದ ಪರಮಾತ್ಮನನ್ನೇ ಹೃತ್ಕಮಲದಲ್ಲಿ ಧ್ಯಾನಿಸುತ್ತಾ ಇರಬೇಕಾದುದು ಸ್ವರೂಪ. ದಂಪತಿಗಳು ಬಹಳ ಪ್ರೇಮದಿಂದಲೇ ಇದ್ದರೂ, ಒಂದೊಂದು ಸಮಯದಲ್ಲಿ ಆಕಸ್ಮಿಕವಾಗಿ ಸಂಭವಿಸುವ ತನ್ನ ಪತ್ನಿಯ ದೋಷಗಳನ್ನು ಕಂಡು ಕುಪಿತನಾದ ಪತಿಯು, ಎಲ್ಲರೂ ಕಾಣುವಂತೆ ಬಹಿರಂಗವಾಗಿಯೇ ತನ್ನ ಪ್ರೇಯಸಿಯನ್ನು ಕಠಿಣೋಕ್ತಿಗಳಿಂದ ಬಯ್ಯುವುದು ಹೊಡೆಯುವುದೇ ಮೊದಲಾದುವುಗಳಿಂದ ಶಿಕ್ಷಿಸುತ್ತಾನೆ. ಈ ಶಿಕ್ಷೆಗೆ ಗುರಿಯಾದ ಸ್ತ್ರೀಯು ಸತ್ಕುಲಪ್ರಸೂತೆಯಾಗಿದ್ದರೆ, ತಾನು ಮಾಡಿದ ತಪ್ಪನ್ನು ಮನಗಂಡು, ತಾನು ಮಾಡಿದ ತಪ್ಪಿಗೆ ತನ್ನ ಪತಿ ಶಿಕ್ಷೆ ಕೊಟ್ಟಿದ್ದಾನೆ, ಬೇರೇನೂ ಅಲ್ಲ. ಅವರು ನನ್ನನ್ನು ಪ್ರೀತಿಸುವಾಗ ಪ್ರೀತಿಸುವು ದಿಲ್ಲವೇ. ಪತಿಯು ಯಾವ ರೀತಿಯಲ್ಲಿಯೇ ಇದ್ದರೂ ಅವರೊಡನೆಯೇ ನಾನಿದ್ದು ಬಾಳುವುದೇ ನನ್ನ ಸ್ವರೂಪ—ಪತಿಯಾದವನು ಪತ್ನಿಯನ್ನು ಪ್ರೀತಿಸುವಾಗ ಪ್ರೀತಿಸ ಬೇಕು. ತಪ್ಪುಮಾಡಿದಾಗ ಶಿಕ್ಷಿಸಲೂ ಬೇಕು. ಯಾವಾಗಲೂ ಪ್ರೀತಿಸಿದರೂ ಒಳಿತಲ್ಲ, ಯಾವಾಗಲೂ ಕಡಿಕಡಿ ಎನ್ನುತ್ತಿದ್ದರೂ ಪ್ರಯೋಜನವಿಲ್ಲ—"ಲಾಲನೀಯಾ ಭವೇದ್ ಭಾರ್ಯಾ, ತಾಡನೀಯಾ ತಥೈವಚ| ಲಾಲಿತಾ ತಾಡಿತಾ ಚೈವ ಸ್ತ್ರೀ ಶ್ರೀರ್ಭವತಿ ನಾನ್ಯಥಾ"–ಎಂದು ಅರಿತು, ಆತನನ್ನು ಬಿಟ್ಟು ಬೇರೊಬ್ಬ ಪುರುಷನಲ್ಲಿಗೆ ಹೋಗದೆ ಅವನೊಡನೆಯೇ ಇದ್ದು ಮತ್ತೆ ಆತನಿಗೆ ಕೋಪ ಬರುವ ಪ್ರಸಂಗ-ಗಳನ್ನುಂಟು ಮಾಡದೆ, ಅವನೊಡನೆ ಪ್ರೀತಿಯಿಂದಲೇ—"ಸತಿಗೆ ಪತಿಯೇ ದೈವವಣ್ಣ", "ಕುಲಮಗಳುಕ್ಕು ಕಣವನೇ ದೈವವು"—ಎಂದು ಹೇಳುವಂತೆ, ತನಗೆ ಪತಿಯೇ ದೈವವೆಂದು ಭಾವಿಸಿ ಅವನೊಡನೆಯೇ ಬಾಳುತ್ತಾ ಅವನ ಪ್ರೇಮಕ್ಕೆ ಪಾತ್ರಳಾಗಿರುತ್ತಾಳೆ. ಅಂತೆಯೇ ಶರಣಾಗತನಾದ ಚೇತನನು ಭಗವಂತನನ್ನೇ ಧ್ಯಾನಾದಿಗಳಿಂದ ಪೂಜಿಸುತ್ತಿದ್ದರೂ, ಆಕಸ್ಮಿಕವಾಗಿ ಸಂಭವಿಸುವ ಭಾಗವತಾಪ-ಚಾರಾದಿಗಳಿಂದ ಕುಪಿತನಾದ ಭಗವಂತನು ತನ್ನ ನಿಗ್ರಹದಿಂದ ಆ ಶರಣಾಗತನಿಗೆ ಏನಾದರೂ ತೊಂದರೆಗಳು ಸಂಭವಿಸುವಂತೆ ಮಾಡುತ್ತಾನೆ. ಆಗ ಇತರರು ಈ ಶರಣಾಗತನನ್ನು ನೋಡಿ 'ದೇವರು ದೇವರೆಂದು ಸದಾಕಾಲದಲ್ಲಿಯೂ ಕುಣಿದೆಯಲ್ಲ, ನಿನಗೆ ದೇವರು ಎಂತಹ ತೊಂದರೆಗಳನ್ನು ಕೊಡುತ್ತಿದ್ದಾನೆ ನೋಡು'—ಎಂದು ಹಿಯಾಳಿಸುವ ಮಾತನ್ನಾಡಿದರೂ, ಶರಣಾಗತನು ವಿಚಲಿತ ಮನಸ್ಕನಾಗದೆ, ತನ್ನಿಂದ ಸಂಭವಿಸಿರುವ ಯಾವುದೋ ಭಾಗವತಾಪಚಾರಾದಿಗಳಿಂದ ಕುಪಿತನಾದ ಭಗವಂತನು ತನಗೆ ಶಿಕ್ಷೆ ಕೊಟ್ಟಿದ್ದಾನೆ—ಎಂದು ಮನವರಿತು ಆ ಪ್ರಪನ್ನನು ಭಗವಂತನ ಅಡಿದಾವರೆಯಲ್ಲಿ ತನ್ನ ತಪ್ಪನ್ನೊಪ್ಪಿಕೊಂಡು ಮತ್ತೆ ಭಗವನ್ನಿಗ್ರಹಕ್ಕೆ ಕಾರಣವಾಗುವ ಅಪಚಾರಗಳನ್ನೆಸಗುವುದಿಲ್ಲವೆಂದು ಹೇಳಿ, ಮತ್ತೆ ಅವನನ್ನೇ ಭಜಿಸುತ್ತಾ ಇದ್ದರೆ, ಅವನ ಪಾತಿವ್ರತ್ಯ ಧರ್ಮದಿಂದ ಕೂಡಿದ ಪಾರಮೈಕಾಂತ್ಯವನ್ನು

ಕಂಡು ಭಗವಂತನು ಪ್ರೀತನಾಗಿ, ಅವನನ್ನು ಸಂತೋಷದಿಂದ ರಕ್ಷಿಸುತ್ತಾನೆ. ಈ ಶರಣಾಗತಿ ಶಾಸ್ತ್ರದ ತತ್ವವನ್ನು ಆಳ್ವಾರರು ಈ ಹಾಡಿನಲ್ಲಿ ಹಾಡಿದ್ದಾರೆ.

"ಕಂಡವರೆಲ್ಲರೂ ದೂಷಿಸುವಂತಹ ಕೆಲಸಗಳನ್ನು ತನ್ನ ಪತಿಯು ತನ್ನ ವಿಷಯದಲ್ಲಿ ಮಾಡಿದ್ದರೂ, ಆ ರೀತಿ ಅಪಕಾರವೆಸಗಿದ ತನ್ನ ಪತಿಯೊಬ್ಬನನ್ನು ಬಿಟ್ಟು ಬೇರಾವ ಪುರುಷನನ್ನೂ ನಿನ್ನೈಯದ ಪತಿವ್ರತೆಯಂತೆಯೇ ನಾನೂ, ಆಕಾಶದವರೆವಿಗೂ ವ್ಯಾಪಿಸಿ ನಿಂತಿರುವ ಗೋಪುರಗಳಿಂದ ನಾಲ್ಕೂ ಕಡೆಯೂ ಸುತ್ತುವರೆಯಲ್ಪಟ್ಟಿರುವ, ವಿತ್ತುವಕ್ಕೋಡೆಂಬ ದಿವ್ಯದೇಶದಲ್ಲಿ ಬಿಜಯಮಾಡಿಸಿರುವ ನನ್ನ ಸ್ವಾಮಿಯೇ, ನೀನು ನನ್ನನ್ನು ನಿನ್ನ ಶೇಷಭೂತನಾಗಿ ಸ್ವೀಕರಿಸಿ, ನನ್ನನ್ನು ಕಿಂಕರನನ್ನಾಗಿ ಸ್ವೀಕರಿಸದಿದ್ದರೂ, ನಿನ್ನ ಆಭರಣಗಳಿಂದ ಅಲಂಕೃತವಾಗಿ ಧ್ವನಿಗೈಯ್ಯುವ ನಿನ್ನ ತಿರುವಡಿಗಳನ್ನೇ ಆಶ್ರಯಿಸಿ ಸ್ತುತಿಸುವೆನು. ||೨||

**ಮೀನ್‌ನೋಕ್ಕು ನೀಳ್‌ವಯಲ್ ಶೂಳ್ ವಿತ್ತುವಕ್ಕೋಟ್ಟಮ್ಮಾ! ಎನ್**
**ಪಾಲ್‌ನೋಕ್ಕಾಯಾಗಿಲುಂ ಉನ್ ಪತ್ತಲ್ಲಾಲ್ ಪತ್ತಿಲೇನ್**
**ತಾನ್ನೋಕ್ಕಾದೆತ್ತುಯರುಂ ಶೆಯ್‌ದಿಡಿನುಂ ತಾರ್‌ವೇಂದನ್**
**ಕೋಲ್‌ನೋಕ್ಕಿ ವಾಳುಮ್ ಕುಡಿಪೋನ್ರಿರುನ್ದೇನೇ ||೩||**

**ಮೀನ್**=ಮೀನುಗಳು, **ನೋಕ್ಕುಂ**=ನಿತ್ಯವಾಸ ಮಾಡಲು ಹುಡುಕುವ, **ನೀಳ್**=ಜಲಸಮೃದ್ಧಿಯುಳ್ಳ, **ವಯಲ್**=ಗದ್ದೆಗಳಿಂದ, **ಶೂಳ್**=ಸುತ್ತುವರೆಯಲ್ಪಟ್ಟ, **ವಿತ್ತುವಕ್ಕೋಟ್ಟಮ್ಮಾ**=ತಿರುವಿತ್ತುವಕ್ಕೋಡಿನಲ್ಲಿ ವಾಸಮಾಡುವ ಸ್ವಾಮಿಯೇ! **ಎನ್ಪಾಲ್**=ನನ್ನ ವಿಷಯದಲ್ಲಿ, **ನೋಕ್ಕಾಯಾಕಿಲುಂ**=(ನನ್ನ ದುಷ್ಕರ್ಮ ಸಂಚಯದಿಂದ) ನೀನು ಕಟಾಕ್ಷಿಸದಿದ್ದರೂ, **ಉನ್‌ಪತ್ತಲ್ಲಾಲ್**=ನಿನ್ನನ್ನೇ ರಕ್ಷಕನನ್ನಾಗಿ ಆಶ್ರಯಿಸುವುದನ್ನು ಬಿಟ್ಟು, **ಪತ್ತಿಲೇನ್**=ಬೇರೊಬ್ಬರನ್ನೂ ರಕ್ಷಕರಾಗಿ ಆಶ್ರಯಿಸುವುದಿಲ್ಲ. **ತಾರ್**=ಪ್ರಜೆಗಳ ರಕ್ಷಣದಲ್ಲಿಯೇ ಬದ್ಧದೀಕ್ಷನಾದ, **ವೇನ್ದನ್**=ರಾಜನು, **ನೋಕ್ಕಾದು**=ಪ್ರಜಾಪರಿಪಾಲನೆಯನ್ನು ಮಾಡದೆ, **ತಾನ್**=ತಾನು, **ಎತ್ತುಯರುಮ್**=ಎಷ್ಟರಮಟ್ಟಿಗೆ, ತೊಂದರೆಗಳನ್ನು, **ಶೆಯ್ದಿಡಿನುಂ**=ಉಂಟುಮಾಡಿದರೂ, **ಕೋಲ್‌ನೋಕ್ಕಿವಾಳುಮ್**=ಅವನ ಆಜ್ಞಾನುವರ್ತನವನ್ನೇ ಮಾಡುತ್ತಿರುವ, **ಕುಡಿಪೋನ್ರಿರುನ್ದೇನ್**=ಪ್ರಜೆಗಳಂತೆ ಅನನ್ಯಗತಿಕನಾಗಿರುತ್ತೇನೆ. ||೩||

ಮೀನುಗಳು ನಿತ್ಯವಾಸಮಾಡಲು ಹುಡುಕುವ ಜಲಸಮೃದ್ಧಿಯುಳ್ಳ ಗದ್ದೆಗಳಿಂದ ಸುತ್ತುವರೆಯಲ್ಪಟ್ಟ ತಿರುವಿತ್ತುವಕ್ಕೋಡಿನಲ್ಲಿ ಬಿಜಯಮಾಡಿರುವ ಸ್ವಾಮಿಯೇ! "ಜಲಾನ್ ಮತ್ಸ್ಯಾವಿವೋದ್ಧೃತೌ" —ಎಂದು ಲಕ್ಷಣನು ಹೇಳಿದಂತೆ, ಕೆಲ ಭಗವದ್ಭಕ್ತರು, ದೇಹಾವಸಾನ ಕಾಲದಲ್ಲಿ ಮೋಕ್ಷವನ್ನು ಅಪೇಕ್ಷಿಸಿರುತ್ತಾರೆ. ಅವರ

ಉತ್ತರಕೃತ್ಯದಲ್ಲಿ ಅನೇಕ ಅವತಾರಗಳ ಲೀಲಾಚೇಷ್ಟಿತಗಳನ್ನು ಕೇಳಿ ಕೇಳಿ, ಅವನನ್ನು ಈ ಪಾಂಚಭೌತಿಕ ದೇಹದಿಂದಲೇ ಇಲ್ಲಿಯೇ ದರ್ಶನಮಾಡಬೇಕೆಂದು ಬಹಳವಾಗಿ ಹಾತೊರೆಯುವ ಮನಸ್ಸಿನಿಂದ ಕೂಡಿದವರಾಗಿ, ತಮಗೆ ಪೋಷಕವಾಗಿ ನೀರಿನಂತಿರುವ ಆತನ ದರ್ಶನವಿಲ್ಲದಿದ್ದರೆ, ನೀರಿನಿಂದ ದೂರವಾದ ಮೀನಿನಂತೆಯೇ ಮೃತಪ್ರಾಯ-ರಾಗುತ್ತಾ, ನೀರಿನಂತೆ ಪೋಷಕವಾದ ದಿವ್ಯಮಂಗಳ ಮೂರ್ತಿಸ್ವರೂಪವನ್ನು ಕಾಣಬೇಕೆಂದು ಒಂದೂರಿನಿಂದ ಮತ್ತೊಂದೂರಿಗೆ ಅಲೆಯುತ್ತಿರುತ್ತಾರೆ. ಅಂತಹವರಿಗೆ ತನ್ನ ದರ್ಶನವಿತ್ತು, ಅವರನ್ನು ಸಂತೋಷದಿಂದ ರಕ್ಷಿಸಬೇಕೆಂದು "ನತೇ ರೂಪಂ ನಚಾಕಾರೋ ನಾಯುಧಾನಿ ನಚಾಸ್ಪದಂ। ತಥಾಪಿ ಪುರುಷಾಕಾರೋ ಭಕ್ತಾ-ನಾಂತ್ವಂ ಪ್ರಕಾಶಸೇ ||"—ಎಂದು ಜಿತಂತಾ ಸ್ತೋತ್ರದಲ್ಲಿ ಹೇಳುವಂತೆ, ಇದೇ ಅವನ ನಿಷ್ಕೃಷ್ಟವಾದ ರೂಪ, ಆಯುಧ, ಆಭರಣಗಳೆಂದು ಹೇಳಲು ಸಾಧ್ಯವಿಲ್ಲದಂತಿದ್ದರೂ, ತಮ್ಮ ಭಕ್ತರ ಕಣ್ಣಿಗೆ ಹಿತಕರವಾಗಿರುವಂತಿರುವ ರೂಪ, ಸೌಂದರ್ಯ, ಲಾವಣ್ಯಾದಿ ಗಳಿಂದ ಕೂಡಿ, ಆಯುಧಗಳನ್ನೂ ಧರಿಸಿ ತಿರುವಿತ್ತುವಕ್ಕೋಡಿನಲ್ಲಿ ಮೀನಿನಂತಿರುವ ಭಕ್ತರಿಗೆ ಪೋಷಕವಾದ ನೀರಿನಂತೆ ದಿವ್ಯಮಂಗಳ ವಿಗ್ರಹರೂಪದಲ್ಲಿ ಪ್ರಕಾಶಿಸುತ್ತಿರುವ ನನ್ನ ಸ್ವಾಮಿಯೇ ! ನಿನ್ನಲ್ಲಿ ಶರಣುಹೋಗಿ, ನಿನ್ನ ಕೃಪೆಗೆ ಪಾತ್ರನಾದ ನನಗೆ, ನಿನ್ನ ಕಟಾಕ್ಷ ಅವರ್ಜನೀಯವಾದರೂ, ನನ್ನ ಬಲಿಷ್ಠವಾದ ಪ್ರಾರಬ್ಧ ಕರ್ಮದಿಂದ ಒಂದು ವೇಳೆ ನಿನ್ನ ಕಟಾಕ್ಷ ಬೀಳದಿದ್ದರೂ, ನೀನು ಕಟಾಕ್ಷಿಸಲಿಲ್ಲವೆಂದು ಮತ್ತೊಂದು ದೇವತೆಯನ್ನು ಮಾತ್ರ ರಕ್ಷಕನಾಗಿ ವರಿಸುವುದಿಲ್ಲ. ರಾಜನು ಪ್ರಜೆಗಳನ್ನು ರಕ್ಷಿಸು-ವುದೇ ಪ್ರಧಾನವಾದ ಕರ್ತವ್ಯವಾಗಿ ಹೊಂದಿದ್ದರೂ, ಒಂದು ವೇಳೆ ಪ್ರಜೆಗಳನ್ನು ರಕ್ಷಿಸದೆ, ನಾನಾ ವಿಧವಾದ ತೊಂದರೆಗಳನ್ನು ಉಂಟುಮಾಡುತ್ತಿದ್ದರೂ, ಅವನ ಆಜ್ಞಾನುವರ್ತನ ಮಾಡುವ ಪ್ರಜೆಗಳು ಹೇಗೆ ಎಲ್ಲವನ್ನೂ ಸಹಿಸಿಕೊಂಡಿರುತ್ತಾ-ರೆಯೋ, ಅಂತೆಯೇ ನಾನೂ ಅನನ್ಯಗತಿಕನಾಗಿ ನಿನ್ನನ್ನೇ ಚಿಂತಿಸುತ್ತಿರುತ್ತೇನೆ—ಎಂದು ತಮ್ಮ ಸ್ಥಿತಿಯನ್ನು ಆಳ್ವಾರ್ರವರು ಭಗವಂತನಲ್ಲಿ ವಿಜ್ಞಾಪಿಸಿ ಕೊಂಡಿದ್ದಾರೆ. ||೩||

**ವಾಳಾಲರುತ್ತು ಚ್ಚುಡಿಲುಮ್ ಮರುತ್ತುವನ್ಪಾಲ್,**
**ಮಾಳಾದ ಕಾದಲ್ ನೋಯಾಳನ್ ಪೋಲ್, ಮಾಯತ್ತಾಲ್**
**ಮೀಳಾತ್ತುಯರ್‌ತರಿಲುಮ್ ವಿತ್ತುವಕ್ಕೋಟ್ಟಮ್ಮಾ, ನೀ**
**ಆಳಾದುನದರುಳೇ ಪಾರ್ಪನಡಿಯೇನೇ ||೪||**

**ವಾಳಾಲ್** = ಕತ್ತಿಯಿಂದ, **ಅರುತ್ತು** = ಕತ್ತರಿಸಿ, **ಶುಡಿಲುಮ್**= ವಿದ್ಯುಚ್ಛಕ್ತಿಯಿಂದ (Current treatment) ಸುಟ್ಟರೂ, **ಮರುತ್ತುವನ್ಪಾಲ್**= ವೈದ್ಯನ ವಿಷಯದಲ್ಲಿ, **ಮಾಳಾದಕಾದಲ್**=ಎಂದೂ ಕುಗ್ಗದ ಗೌರವ ಅಭಿಮಾನ ವನ್ನು ಹೊಂದಿರುವ, **ನೋಯಾಳನ್‌ಪೋಲ್** = ನೋವನ್ನನುಭವಿಸುತ್ತಿರುವ

ರೋಗಿಯಂತೆ, **ವಿತ್ತುವಕ್ಕೋಟ್ಟೆಮ್ಮಾ**=ತಿರುವಿತ್ತುವಕ್ಕೋಡಿನಲ್ಲಿ ಬಿಜಯಮಾಡಿಸಿರುವ ಸ್ವಾಮಿಯೇ, ನೀನು, **ಮಾಯೆತ್ತಾಲ್** = ಸಂಕಲ್ಪದಿಂದ ನಮಗುಂಟಾಗಿರುವ ಪ್ರಕೃತಿ ಸಂಬಂಧದಿಂದ, **ಮಿಳಾ**=ಎಂದೂ ನೀಗದಿರುವ, **ತುಯರ್-ತರಿಲುಮ್** = ದುಃಖವನ್ನುಂಟುಮಾಡಿದರೂ, **ಅಡಿಯೇನ್**=ದಾಸಭೂತನಾದ ನಾನು, **ಆಳಾ**=ಸ್ವರೂಪಾನುರೂಪವಾದ ಕೈಂಕರ್ಯ ಭಾಗ್ಯವನ್ನು ಪಡೆಯಲು, **ಉನದರುಳ್** = ನಿನ್ನ ಕೃಪೆಯನ್ನೇ, **ಪಾರ್ಪನ್** = ಎದಿರುನೋಡುತ್ತಿರುತ್ತೇನೆ. ||೪||

ರೋಗಿಯ ರೋಗಗಳನ್ನು ಹೋಗಲಾಡಿಸಲು, ಕೆಲಸಮಯದಲ್ಲಿ ವೈದ್ಯನು ಶಸ್ತ್ರಚಿಕಿತ್ಸೆಯನ್ನು ಮಾಡುತ್ತಾನೆ. ಮತ್ತೆ ಕೆಲಸಮಯದಲ್ಲಿ ವಿದ್ಯುಚ್ಛಕ್ತಿಯ (Current treatment) ಸಹಾಯದಿಂದ ದುರ್ಮಾಂಸಾದಿಗಳು ಬೆಳೆಯದಂತೆ ಸುಡುತ್ತಾನೆ. ಆ ಸಮಯದಲ್ಲೆಲ್ಲಾ ರೋಗಿಗೆ ಬಹಳವಾದ ನೋವುಂಟಾದರೂ, ವೈದ್ಯನನ್ನು ಬಯ್ಯುವುದಿಲ್ಲ ಮತ್ತು ಸಂಭಾವನಾದಿಗಳನ್ನು ಕೊಡುತ್ತಾ, ವೈದ್ಯನು ತನಗೆ ಪ್ರಾಣವನ್ನೇ ಕೊಟ್ಟನೆಂದೂ ಸ್ತುತಿಸುತ್ತಾನೆ. ಅಂತೆಯೇ, ಎಲೈ ವಿತ್ತು-ವಕ್ಕೋಟ್ಟೆಮ್ಮಾ! ನೀನೂ, ನಿನ್ನ (ಮಾಯಾ ವಯುನಂ ಜ್ಞಾನಂ) ಸಂಕಲ್ಪದಿಂದ, ನನ್ನನ್ನು ರಕ್ಷಿಸುವ ಸಲುವಾಗಿಯೇ, ಅತ್ಯಧಿಕವಾಗಿ ದುಃಖವನ್ನುಂಟುಮಾಡುವ ಕೆಲಪ್ರಸಂಗಗಳಲ್ಲಿ ಅತ್ಯಲ್ಪವಾದ ದುಃಖವನ್ನು ಕೊಡುವುದರ ಮೂಲಕವಾಗಿಯೂ ಮತ್ತೆ ಕೆಲವು ವೇಳೆ ನನಗೆ ಈ ದೇಹಾವಸಾನಕಾಲದಲ್ಲಿಯೇ ಮುಕ್ತಿಯುಂಟಾಗಲೂ, ಧಕ್ಕೆಯನ್ನು ತರುವ ಬಲಿಷ್ಠವಾದ, ನಾನು ಮಾಡಿರುವ ಪಾಪಕೃತ್ಯಗಳಿಗೆ ಅತ್ಯಲ್ಪವಾದ ಶಿಕ್ಷೆಯನ್ನು ಕೊಟ್ಟು ದೇಹಾವಸಾನದಲ್ಲಿಯೇ ಮೋಕ್ಷವನ್ನನುಗ್ರಹಿಸುವ ಸಲುವಾಗಿಯೂ, ನೀನು ಭವರೋಗ ನಿವೃತ್ತಿಗಾಗಿ ಕೆಲವು ವೇಳೆ ಕೆಲದುಃಖಗಳನ್ನು ಉಂಟುಮಾಡಿದರೂ, ಶಸ್ತ್ರಚಿಕಿತ್ಸಾದಿಗಳಿಂದ ನೋವನ್ನುಂಟುಮಾಡಿದ ವೈದ್ಯನ ವಿಷಯದಲ್ಲಿ ರೋಗಿ ಇರುವಂತೆ ನಾನೂ ನಿನ್ನ ವಿಷಯದಲ್ಲಿ ಭಕ್ತಿಶ್ರದ್ಧೆಯಿಂದಲೇ ಇದ್ದು ನಿನ್ನ ಪೂರ್ಣವಾದ ಕೃಪೆಯನ್ನೇ ನಿರೀಕ್ಷಿಸುತ್ತಿರುತ್ತೇನೆ—ಎಂದು ಹೇಳುತ್ತಾ ಪರಮಾತ್ಮನಲ್ಲಿ ತನಗಿರುವ ದೃಢವಾದ ಭಕ್ತಿವಿಶ್ವಾಸಗಳನ್ನು ತಿಳಿಸಿದ್ದಾರೆ. ||೪||

**ವೆಂಗಟ್ಟೆಣ್ ಕಳಿರಡರ್ತಾಯ್ ವಿತ್ತುವಕ್ಕೋಟ್ಟೆಮ್ಮಾನೇ !**
**ಎಂಗುಪ್ಪೋಯ್ ಉಯ್‌ಗೇನ್ ಉನ್ನಿಣೈಯಡಿಯೇ ಅಡೈಯಲಲ್ಲಾಲ್**
**ಎಂಗುಂಪೋಯ್ ಕರೈಕಾಣಾ ತೆರಿಕಡಲ್‌ವಾಯ್ ಮೀಂಡೇಯುಂ**
**ವಂಗತ್ತಿನ್ ಕೂಂಬೇರು ಮಾರ್ಪನ್ನೈ ಪೋನ್ರೇನೇ ||೫||**

**ವೆವ್‌ಕಣ್**=ಭಯವನ್ನುಂಟುಮಾಡುವ ಕ್ರೂರವಾದ ದೃಷ್ಟಿಯನ್ನುಬೀರುವ ಕಣ್ಣುಗಳಿಂದ ಕೂಡಿದ, **ತಿಣ್** = ನಿನ್ನನ್ನು ಸಂಹರಿಸಬೇಕೆಂಬ ಸಂಕಲ್ಪವನ್ನು

ಮಾಡಿದ್ದ, **ಕಳಿರು** = 'ಕುವಲಯಾಪೀಡ'—ಎಂಬ ಆನೆಯನ್ನು, **ಅಡರ್‌-ತ್ತಾಯ್** = ಅಡಗಿಸಿದವನಾದ, **ವಿತ್ತುವಕ್ಕೋಟ್ಟಮ್ಮಾನೇ !** = 'ತಿರುವಿತ್ತು-ವಕ್ಕೋಡು' ದಿವ್ಯದೇಶದಲ್ಲಿ ಬಿಜಯಮಾಡಿಸಿರುವ ನನ್ನ ಸ್ವಾಮಿಯೇ ! **ಉನ್**= ನಿನ್ನ, ಇಣೈ**ಯಡಿಯೇ**=ಭೋಗ್ಯವಾದ ತಿರುವಡಿಗಳನ್ನೇ, **ಅಡೈಯಲಲ್ಲಾಲ್**= ಪ್ರಾಪ್ಯವಾಗಿ ಆಶ್ರಯಿಸುವುದನ್ನು ಬಿಟ್ಟು, **ಎಂಗುಪ್ಪೋಯ್**=ಬೇರೆ ಯಾರನ್ನು ತಾನೇ ಆಶ್ರಯಿಸಿ, **ಉಯ್‌ಕೇನ್** = ಉಜ್ಜೀವಿಸುತ್ತೇನೆ ? **ಎಂಗುಂ**= ಎಲ್ಲೆಲ್ಲಿಯೂ, **ಪ್ಪೋಯ್**=ಸಂಚರಿಸಿ ಹೋಗಿ, ನೋಡಿ, **ಕರೈಕಾಣಾತು**= ದಡವೇ ಕಾಣದಿರುವ, ಎರಿ=ಅಲೆಗಳು ಮೇಲೆ ಮೇಲೆ ಬರುತ್ತಿರುವ, **ಕಡಲ್‌-ವಾಯ್**=ಸಮುದ್ರದಲ್ಲಿಯೇ, **ಮೀಂಡು**=ಮತ್ತೆ ಬಂದು, **ಏಯುಂ**=ಅಲ್ಲಿ ವರ್ತಿಸುವ, **ವಂಗತ್ತಿನ್**=(ದೋಣಿ) ಹಡಗೊಂದರಲ್ಲಿರುವ, **ಕೂಂಬು**=ಕಂಬದಲ್ಲಿ, **ಏರುಮ್**=ಹತ್ತಿ ಕುಳಿತುಕೊಳ್ಳುವಂತೆ, **ಮಾ**=ದೊಡ್ಡ, **ಪರವೈಪ್ಪೋನ್ರೇ**= ಪಕ್ಷಿಯಂತಿರುತ್ತೇನೆ. ||೫||

ಕಂಸನು ಧನುರ್ಯಾಗಕ್ಕೆ ಆಹ್ವಾನಿಸಬೇಕೆಂಬ ಒಂದು ವ್ಯಾಜದಿಂದ ಅಕ್ರೂರನ ಮುಖಾಂತರ ಮಧುರೆಯಲ್ಲಿದ್ದ ಕೃಷ್ಣನನ್ನು ತನ್ನ ಅರಮನೆಗೆ ಬರಮಾಡಿ, ಅರಮನೆಯ ಬಾಗಿಲಲ್ಲಿಯೇ ಚೆನ್ನಾಗಿ ಮದಿಸಿದ ಮತ್ತು ಕೋಪದಿಂದ ಎದುರ್ಗೊಂಡು ಬರುವವರನ್ನು ಭಯಂಕರದೃಷ್ಟಿಯನ್ನು ಬೀರುತ್ತಲೇ ಕೊಂದುಹಾಕಬೇಕೆಂಬ ಸಂಕಲ್ಪದಿಂದ ಕೂಡಿದ 'ಕುವಲಯಾಪೀಡ'–ಎಂಬ ಆನೆಯನ್ನು ನಿಲ್ಲಿಸಿ, ಅದರ ಮುಖಾಂತರ ಕೃಷ್ಣನನ್ನು ಕೊಲ್ಲಬೇಕೆಂದು ಏರ್ಪಾಡು ಮಾಡಿದ್ದನು. ಆಗ ಕೃಷ್ಣನು ಅಲ್ಲಿ ಬಂದು ಆ ಕುವಲಯಾ ಪೀಡನ ದಂತಗಳನ್ನು ಕಿತ್ತು, ಅದನ್ನು ಸಂಹರಿಸಿ ಮಧುರೆಗೆ ಹಿಂತಿರುಗಿದಾಗಲೂ, ಅವನು ಆ ಆನೆಯೊಡನೆ ಹೋರಾಡಿದುದರಿಂದ ಆದ ಆಯಾಸವು ಇನ್ನೂ ನೀಗದಿದ್ದು, ಇಡೀ ಅವನ ದೇಹದಲ್ಲಿ ಬೆವರಿನ ಹನಿಗಳು ಕಾಣುತ್ತಿದ್ದಿತು. ಆಗ ಆತನನ್ನು ಕಂಡ ಗೋಪಿಯರು ಪರಸ್ಪರ ಮಾತನಾಡುತ್ತಾ—"ಆನೆಯೊಡನೆ ಹೋರಾಡಿದುದರಿಂದ ಉಂಟಾದ ಆಯಾಸದಿಂದ, ಕೆಂಪಡರ್ದಿರುವ ಕಣ್ಣುಗಳಿಂದಲೂ, ಬೆವರಿನ ಹನಿ-ಗಳಿಂದಲೂ ಕೂಡಿರುವ ಮುಖಾರವಿಂದವನ್ನು ನೋಡಿರಿ"—"ಸಖ್ಯಃ ಪಶ್ಯತ ಕೃಷ್ಣಸ್ಯ ಮುಖಮತ್ಯರುಣೇಕ್ಷಣಂ । ಗಜಯುದ್ಧ ಕೃತಾಯಾಸ ಸ್ವೇದಾಂಬುಕಣಿಕಾಚಿತಮ್"–ಎಂದು ಹೇಳುತ್ತಾರೆ. ಆ ರೀತಿಯಾದ ಆಯಾಸವನ್ನು ಪರಿಹಾರಮಾಡಿಕೊಳ್ಳಲೆಂದು ಆ ಕೃಷ್ಣಪರಮಾತ್ಮನು, 'ತಿರುವಿತ್ತುವಕ್ಕೋಡು'—ಎಂಬ ದಿವ್ಯದೇಶದಲ್ಲಿ ಬಂದು ಬಿಜಯಮಾಡಿಸಿದ್ದಾನೆ—ಎಂಬ ಅಭಿಪ್ರಾಯವನ್ನು ಈ ಹಾಡಿನಲ್ಲಿ ಆಳ್ವಾರರು ವ್ಯಕ್ತ ಪಡಿಸಿ, ಆ ರೀತಿಯಾದ ಸ್ವಾಮಿಯಲ್ಲಿ ತಾನು ಯಾವ ರೀತಿಯಲ್ಲಿದ್ದಾರೆಂದು ವಿಜ್ಞಾಪಿಸಿಕೊಳ್ಳುತ್ತಾರೆ.

ಎಲೈ ಪ್ರಭುವೇ! ಸಮುದ್ರದಲ್ಲಿ ಹೋಗುವ ಒಂದು ಹಡಗು ಅಥವಾ ದೋಣಿಯಲ್ಲಿ ಕಟ್ಟಿರುವ ಕಂಬದ ಮೇಲೆ ಹತ್ತಿದ ಒಂದು ಪಕ್ಷಿಯು, ಹಡಗು ಅಥವಾ ದೋಣಿಯು ಸಮುದ್ರದಲ್ಲಿ ಹೋಗುತ್ತಿದ್ದಾಗ, ಅದಕ್ಕೆ ಬೇರೆ ಕಡೆ ಹೋಗಬೇಕೆಂದು ಮೇಲಕ್ಕೆ ಹಾರುತ್ತದೆ. ನಾಲ್ಕು ದಿಕ್ಕುಗಳನ್ನೂ ಸಂಚರಿಸಿ ನೋಡಿದರೂ ಅದಕ್ಕೆ ಬೇರೆಲ್ಲಿಯೂ ದಡಕಾಣದೆ, ಅದು ಮತ್ತೆ ತಾನಿದ್ದ ಹಡಗು ಅಥವಾ ದೋಣಿಯ ಮರ ದಲ್ಲಿಯೇ ಬಂದು ಕುಳಿತುಕೊಳ್ಳುತ್ತದೆ. ಅಂತೆಯೇ ನಾನೂ ಈ ಸಂಸಾರ ಸಾಗರ ವನ್ನು ದಾಟಲು ದೋಣಿಯಂತೆ ಬಂದಿರುವ ನಿನ್ನ ಭೋಗ್ಯವಾದ ತಿರುವಡಿಯನ್ನು ಆಶ್ರಯಿಸಿದ ಬಳಿಕ, ಬೇರೆ ಯಾರನ್ನು ತಾನೇ ಹೋಗಿ ಆಶ್ರಯಿಸಿ ಉಜ್ಜೀವಿಸುತ್ತೇನೆ? ಅಂದರೆ ನಾವು ಸಂಸಾರ ಸಾಗರವನ್ನು ದಾಟಲು ಇರುವ ದೋಣಿಯಂತೆ ಪರಮಾತ್ಮ-ನಿದ್ದಾನೆ, ಹಕ್ಕಿಗೆ ದೋಣಿಯಲ್ಲಿರುವ ಮರದ ಕಂಬದಂತೆ, ನಮಗೆ ಭಗವಂತನ ಅಡಿದಾವರೆಗಳು ಇವೆ. ಇದನ್ನಾಶ್ರಯಿಸಿಯೇ ನಾವು ಮತ್ತೊಂದು ದಡವಾದ-ಶ್ರೀವೈಕುಂಠವನ್ನು ಸೇರಬಹುದು. ಇದೇ ವಿಷಯವನ್ನೇ ಇವರು ತಮ್ಮ ಮುಕುಂದ ಮಾಲಾ ಸ್ತೋತ್ರದಲ್ಲಿಯು—"ಭವಜಲಧಿಗತಾನಾಂ ದ್ವಂದ್ವವಾತಾಹತಾನಾಂ ಸುತ-ದುಹಿತೃಕಳತ್ರತ್ರಾಣಭಾರಾರ್ದಿತಾನಾಂ ಭವತಿ ಶರಣಮೇಕೋ ವಿಷ್ಣುಪೋತೋ ನರಾಣಾಂ ||"—ಎಂಬ ಶ್ಲೋಕದಲ್ಲಿಯೂ ತಿಳಿಸಿದ್ದಾರೆ. ||೫||

**ಶೆನ್ದಳಲೇ ವನ್ದಳಲ್ಶೈ ಚೆಯ್ದಿಡಿಲುಮ್, ಶೆಂಗಮಲಮ್**
**ಅನ್ದರಂ ಶೇರ್ ವೆಂಕದಿರೋರ್ಕಲ್ಲಾಲಲರಾವಾಲ್**
**ವೆನ್ದುಯರ್ ವೀಟ್ಟಾವಿಡಿಲುಂ ವಿತ್ತುವಕ್ಕೋಟ್ಟಮ್ಮಾ! ಉನ್**
**ಅನ್ದಮಿಲ್ಶೀರ್ಕಲ್ಲಾಲ್ ಅಹಂಕುಳೈಯಮಾಟ್ಟೇನೇ ||೬||**

**ಶೆಮ್**=ಕೆಂಪಾದ ಜ್ವಾಲೆಯಿಂದ ಕೂಡಿರುವ, **ತಳಲ್**=ಅಗ್ನಿಯಾದರೋ, **ವನ್ದು**=ಹತ್ತಿರ ಬಂದು, **ಅಳಲ್ಶೈಚ್ಚೆಯ್‌ದಿಡಿನುಮ್** = ಔಷ್ಣ್ಯವನ್ನುಂಟು-ಮಾಡಿದರೂ, **ಶೆಮ್‌ಕಮಲಮ್**=ಸುಂದರವಾದ ಕಮಲಪುಷ್ಪವಾದರೋ ಆಕಾಶ-ದಲ್ಲೇ ವರ್ತಿಸುವ, **ವೆಂಕದಿರೋರ್ಕಲ್ಲಾಲ್** = ಸೂರ್ಯನ ಔಷ್ಣ್ಯಕ್ಕಲ್ಲದೆ, **ಅಲರಾ**=(ಅಗ್ನಿಯ ಔಷ್ಣ್ಯಕ್ಕೆ) ಅರಳುವುದಿಲ್ಲಾ. **ವಿತ್ತುವಕ್ಕೋಟ್ಟಮ್ಮಾ**= ಎಲೈ! ವಿತ್ತುವಕ್ಕೋಡು ದಿವ್ಯದೇಶದಲ್ಲಿ ಬಿಜಯಮಾಡಿಸಿರುವ ನನ್ನ ಸ್ವಾಮಿಯೇ! **ವೆಮ್**=ಕ್ರೂರವಾದ, **ತುಯರ್**=ನನ್ನ ದುಃಖವನ್ನು, **ವೀಟ್ಟಾವಿಡಿನುಮ್**= ನೀನು ಹೋಗಲಾಡಿಸದಿದ್ದರೂ, **ಉನ್**=ನಿನ್ನ, **ಅನ್ತಮಿಲ್**=ಅಳವಿಲ್ಲದ, **ಶೀರ್‌ಕಲ್ಲಾಲ್**=ಕಲ್ಯಾಣಗುಣಗಳನ್ನು ಬಿಟ್ಟು ಬೇರಾವುದಕ್ಕೂ, **ಅಕಮ್-ಕುಳೈಯಮಾಟ್ಟೇನ್**=ಇತರರ ಗುಣಾನುಭವಗಳನ್ನು ಮಾಡುತ್ತಾ ಮನಸ್ಸಿನಲ್ಲಿ ಸಂತೋಷವನ್ನು ಪಡೆಯಲಾರೆ. ||೬||

ತೀರ್ಥದಲ್ಲಿರುವ ಕಮಲವು ಅರಳಲು ಔಷ್ಣ್ಯವನ್ನು ಅಪೇಕ್ಷಿಸುತ್ತದೆಯಾದರೂ, ಸೂರ್ಯನ ಕಿರಣದ ಔಷ್ಣ್ಯವನ್ನುಳಿದು, ಎಷ್ಟೇ ಅಗ್ನಿಯ ಔಷ್ಣ್ಯವನ್ನುಂಟು ಮಾಡಿದರೂ ಅದು ಅರಳುವುದಿಲ್ಲ. ಅದೇ ಸೂರ್ಯೋದಯವಾಗಿ ಸೂರ್ಯನ ಕಿರಣವು ಅದರ ಮೇಲೆ ಬಿದ್ದೊಡನೆ ಅರಳಿ ಆನಂದದಿಂದ ನಿಲ್ಲುತ್ತದೆ. [ಇದೇ ವಿಷಯವನ್ನು ಮಹಾಕವಿ ಕಾಳಿದಾಸನೂ—"ವ್ಯತಿಷಜತಿ ಪದಾರ್ಥಾನ್ ಅನ್ತರಃ ಕೋಽಪಿ-ಹೇತುಃ | ನಖಲು ಬಹಿರುಪಾಧೀನ್ ಪ್ರೀತಯಃ ಸಂಶ್ರಯಂತೇ | ವಿಕಸತಿಹಿ ಪತಂಗಸ್ಯೋದಯೇ ಪುಂಡರೀಕಮ್..." ಎಂಬ ಶ್ಲೋಕದಲ್ಲಿ ತಿಳಿಸಿದ್ದಾನೆ.] ಅಂತೆಯೇ ಎಲೈ ! ವಿತ್ತವಕ್ಕೋಟ್ಟಮ್ಮಾ ನೀನು ಶ್ರೀವೈಕುಂಠವನ್ನೂ, ಕ್ಷೀರಾಬ್ಧಿಯನ್ನೂ ಬಿಟ್ಟು ಇಲ್ಲಿ ಬಂದು ನೆಲೆಸಿರುವುದೇ ನಮ್ಮಂತಹವರ ದುಃಖವನ್ನು ಹೋಗಲಾಡಿಸಿ ರಕ್ಷಿಸುವುದಕ್ಕೆ. ನಿನ್ನಲ್ಲಿ ಪ್ರೀತ್ಯತಿಶಯ ರೂಪವನ್ನು ಮಾಡುವುದು ನಮ್ಮ ಸ್ವರೂಪ ಪ್ರಾಪ್ತವಾದುದು. ಇದಕ್ಕೂ ನೀನು ನಮ್ಮ ಆರ್ತಿ ಅಥವಾ ದುಃಖವನ್ನು ಕಳೆಯುವುದಕ್ಕೂ ಯಾವ ವಿಧವಾದ ನಿಬಂಧನವಿಲ್ಲ. ಏಕೆಂದರೆ ನಾನು ನಿನ್ನನ್ನು 'ಸಂಕಟ ಬಂದರೆ ವೆಂಕಟರಮಣ'—ಎಂದು ಹೇಳಿದಂತೆ ಆಶ್ರಯಿಸುವವನಲ್ಲ. ಸ್ವರೂಪ ಪ್ರಾಪ್ತವಾಗಿ ನಿನ್ನಲ್ಲಿನ ಪ್ರೀತಿಯಿಂದ, ಅವ್ಯಾಜ ರಮಣೀಯವಾದ ದಂಪತಿಯರಲ್ಲಿ ಪ್ರಿಯೆಯು ಪ್ರಿಯನನ್ನು ಪ್ರೀತಿಸುವಂತೆ, ನಾನು ನಿನ್ನಲ್ಲಿ ಭಕ್ತಿಯಿಂದಿದ್ದೇನೆ. ಪ್ರಿಯನಾದವನು ತನ್ನ ಪ್ರೇಯಸಿಯು ಕೇಳದಿದ್ದರೂ, ತಾನಾಗಿಯೇ ಅವಳಲ್ಲಿಗೆ ಬಂದು ಅವಳ ದುಃಖವನ್ನು ಹೋಗಲಾಡಿಸಿ ಇಷ್ಟಾರ್ಥಗಳನ್ನು ಪೂರೈಸಿ ಸಂತೋಷ ಪಡಿಸುವಂತೆ, ನನ್ನ ದುಃಖವನ್ನು ದೂರಮಾಡಬೇಕಾದುದು ನಿನ್ನ ಕರ್ತವ್ಯ. ತನ್ನ ಪತಿಯ ವಿಷಯದಲ್ಲಿ ವಿಶೇಷವಾದ ಪ್ರೇಮದಿಂದ ಕೂಡಿದ ಪತಿವ್ರತೆಯಾದ ಪ್ರೇಯಸಿಯು, ಒಂದು ವೇಳೆ ತನ್ನ ಪತಿಯು ತನ್ನನ್ನು ಏನೆಂದೇ ವಿಚಾರಿಸದೆ, ತನ್ನ ದುಃಖವನ್ನು ದೂರಮಾಡದಿದ್ದರೆ, ಅವನ ಮೇಲಿರುವ ಪ್ರೇಮದಿಂದ, ಅವನನ್ನು ತಪ್ಪಾಗಿ ತಿಳಿಯದೇ, ತಾನೇ ಹಿಂದೆಂದೋ ಮಾಡಿರುವ ಫಲವೆಂದು ಭಾವಿಸಿ, ಪಾಪ ಕರ್ಮಫಲವು ಅಳಿದುಹೋದ ಬಳಿಕ ತನ್ನ ಪತಿಯು ತನ್ನನ್ನು ಖಂಡಿತವಾಗಿಯೂ ಪ್ರೇಮದಿಂದ ಕಾಣುತ್ತಾನೆ—ಎಂದು ಸಮಾಧಾನ ಮಾಡಿಕೊಳ್ಳುತ್ತಾಳೆಯೇ ವಿನಹ ಬೇರೊಬ್ಬ ಪುರುಷನನ್ನು ಮನಸಾರೆಯೂ ಸ್ಮರಿಸುವುದಿಲ್ಲ. ಅಂತೆಯೇ ಶರಣಾಗತನಾಗಿ ನಿನ್ನ ವಿಷಯದಲ್ಲಿ ಪಾತಿವ್ರತ್ಯ ಧರ್ಮದಿಂದ ಕೂಡಿದ ನಾನು, ನೀನು ಒಂದು ವೇಳೆ ನನ್ನ ದುಃಖವನ್ನು ಹೋಗಲಾಡಿಸದೆ ಕರ್ತವ್ಯಚ್ಯುತಿಯನ್ನು ಮಾಡಿದರೂ, ಅದು ನಿನ್ನ ತಪ್ಪೆಂದು ಭಾವಿಸುವುದಿಲ್ಲ. ನನ್ನದೇ ಪ್ರಾರಬ್ಧ ಕರ್ಮಗಳ ಫಲವೆಂದು ಸಮಾಧಾನಮಾಡಿಕೊಳ್ಳುತ್ತೇನೆಯೇ ವಿನಹ, ನಿನ್ನನ್ನು ತಪ್ಪಾಗಿ ತಿಳಿದು ಅನ್ಯ-ದೇವತಾ ಭಜನಾದಿಗಳನ್ನು ಮಾಡುವುದಿಲ್ಲ. ನಿನ್ನ ಗುಣಾನುಭವದಿಂದ ನನಗೆ ಯಾವ ತರಹದ ಸಂತೋಷವು ಏರ್ಪಡುತ್ತದೋ ಅದು ಬೇರಾವುದರಿಂದಲೂ ಲಭಿಸುವುದಿಲ್ಲ.

—ಎಂದು ಹೇಳುತ್ತಾ ಆಳ್ವಾರರು ಈ ಹಾಡಿನಲ್ಲಿ ಶರಣಾಗತನು ಪ್ರಪತ್ತ್ಯುತ್ತರ ಕಾಲದಲ್ಲಿ ಹೇಗಿರಬೇಕೆಂದು ನಮಗೆ ತಿಳಿಸಿದ್ದಾರೆ. ||೬||

**ಎತ್ತನೈಯುಂ ವಾನ್ ಮರನ್ದಕಾಲತ್ತುಂ, ಪೈಂಗೂಳಿಗಳ್**
**ಮೈತ್ತೆಳುನ್ದ ಮಾಮುಗಿಲೇ ಪಾರ್ತಿರುಕ್ಕುಂ ಮಟ್ರವೈಪೋಲ್**
**ಮೆಯ್‍ತ್ತುಯರ್ ವೀಟ್ಟಾವಿಡಿಲುಂ ವಿತ್ತುವಕ್ಕೋಟ್ಟಮ್ಮಾ! ಎನ್**
**ಶಿತ್ತಮಿಕವುನ್ಪಾಲೇ ವೈಪ್ಪನಡಿಯೇನೇ ||೭||**

**ಪೈ**=ಪಚುಮೆಯಿಂದ ಕೂಡಿದ, **ಕೂಳಿಕಳ್**=ಅನ್ನವನ್ನು ಕೊಡುವ ಪಯಿರುಗಳಾದರೋ, **ವಾನ್**=ಮೇಘವು, **ಎತ್ತನೈಮರನ್ದಕಾಲತ್ತುಂ**=ಮಳೆ ಸುರಿಸದೆ ದುರ್ಭಿಕ್ಷವು ತಲೆದೋರುವ ಕಾಲವು ಬಂದರೂ, **ಮೈತ್ತು**=ಕಾಡಿಗೆಯಂತೆ ಕಪ್ಪುಬಣ್ಣದಿಂದ ಕೂಡಿದ ದೇಹದಿಂದ ಕೂಡಿ, **ಎಳುನ್ದ**=ಆಕಾಶದಲ್ಲಿ ಮೇಲೆದ್ದ, **ಮಾಮುಗಿಲೇ**=ದೊಡ್ಡ ಮೇಘಗಳನ್ನೇ, **ಪಾರ್‍ತಿರುಕ್ಕುಮ್**=ಎದಿರುನೋಡು-ತ್ತಿರುತ್ತವೆ. **ಅನ್ನೈಪೋಲ್**=ಆ ಪೈರುಗಳಂತೆಯೇ, **ಮೈಯರ್‍ತುಯರ್**= ಪ್ರಾರಬ್ಧ ಕರ್ಮದ ಫಲವಾಗಿ ಬಂದಿರುವ ಈ ದೇಹದ ಸಂಬಂಧದಿಂದುಂಟಾಗಿರುವ ದುಃಖವನ್ನು, **ವೀಟ್ಟಾವಿಡಿಲುಂ**=ನೀನು ಹೋಗಲಾಡಿಸದಿದ್ದರೂ, **ವಿತ್ತು-ವಕ್ಕೋಟ್ಟಮ್ಮಾ**=ಎಲೈ! ವಿತ್ತುವಕ್ಕೋಡಿನಲ್ಲಿ ಬಿಜಯಮಾಡಿಸಿರುವ ನನ್ನ ಸ್ವಾಮಿಯೇ, **ಅಡಿಯೇನ್**=ದಾಸಭೂತನಾದ ನಾನು, **ಎನ್‍ಶಿತ್ತಮ್**=ನನ್ನ ಮನಸ್ಸನ್ನು, **ಉನ್ಪಾಲ್**=ನಿನ್ನ ವಿಷಯದಲ್ಲಿಯೇ, **ಮಿಕವೈಪ್ಪೇನ್**=ಪ್ರಾವಣ್ಯ-ವನ್ನು ಹೊಂದುವಂತೆ, ಸ್ಥಿರವಾಗಿ ನಿಲ್ಲುವಂತೆ ಮಾಡುತ್ತೇನೆ. ||೭||

'ಪಚುಮ್ಮೈಯಿಂದ ಕೂಡಿದ ಪಯಿರುಗಳು, ಮೇಘಗಳು ಒಂದು ವೇಳೆ ಮರೆತು ವರ್ಷಿಸದೆ, ದುರ್ಭಿಕ್ಷವು ತಲೆದೋರುವ ಕಾಲವು ಪ್ರಾಪ್ತವಾದರೂ, ಕಾಡಿಗೆಯಂತೆ ಕಪ್ಪಗಿರುವ ಮೇಘವು ಆಕಾಶದಲ್ಲಿ ಬಂದು ತೃಪ್ತಿಯಾಗಿ ಮಳೆಸುರಿಸಿ, ದುರ್ಭಿಕ್ಷವನ್ನು ಹೋಗಲಾಡಿಸುತ್ತದೆ—ಎಂಬ ಭಾವನೆಯಿಂದ, ಆ ಮೇಘವನ್ನೇ ಎದಿರುನೋಡು ತ್ತಿರುತ್ತದೆ. ಅಂತೆಯೇ, ಎಲೈ ವಿತ್ತುವಕ್ಕೋಟ್ಟಮ್ಮಾ! ನೀನಿಲ್ಲಿ ಬಿಜಯಮಾಡಿ-ಸಿರುವುದೇ ನಮ್ಮ ದುಃಖವನ್ನು ಹೋಗಲಾಡಿಸಲು. ಆದರೆ ಪ್ರಾರಬ್ಧ ಕರ್ಮದ ಫಲವಾಗಿ ನನಗೆ ಬಂದಿರುವ ಈ ದೇಹದ ಸಂಬಂಧದಿಂದುಂಟಾಗಿರುವ ದುಃಖವನ್ನು ನೀನು ಹೋಗಲಾಡಿಸದಿದ್ದರೂ, ನನ್ನ ಪ್ರಾರಬ್ಧ ಕರ್ಮದ ಫಲವಾಗಿ ನಾನು ಈ ದುಃಖವನ್ನು ಅನುಭವಿಸುತ್ತಿದ್ದೇನೆ. ಆ ಕರ್ಮವು ಸವೆದರೆ, ನಿನ್ನ ಅನುಗ್ರಹಕ್ಕೆ ಪಾತ್ರನಾಗಿ, ನಿನ್ನೊಡನೆ ಕೂಡುವ ಕಾಲವು ಬರುತ್ತದೆ—ಎಂದು ನಿನ್ನನ್ನೇ ಎದಿರು ನೋಡುತ್ತಾ ದಾಸಭೂತನಾದ ನಾನು ನನ್ನ ಮನಸ್ಸನ್ನು ನಿನ್ನ ವಿಷಯದಲ್ಲಿಯೇ ಪ್ರವಣವಾಗಿ ಸ್ಥಿರವಾಗಿ ನಿಲ್ಲುವಂತೆ ಮಾಡುತ್ತೇನೆ'—ಎಂದು ಹೇಳಿದ್ದಾರೆ. ||೭||

**ತೊಕ್ಕಿಲಂಗಿ ಆರೆಲ್ಲಾಂ ಪರಂದೋಡಿ ತೊಡುಕಡಲೇ**
**ಪುಕ್ಕನ್ರಿಪ್ಪುರಂ ನಿರ್ಕಮಾಟ್ಟಾದ ಮಟ್ರನ್ನೈಪೋಲ್**
**ಮಿಕ್ಕಿಲಂಗು ಮುಗಿಲ್ ನಿರತ್ತಾಯ್ ! ವಿತ್ತುವಕ್ಕೋಟ್ಟಮ್ಮಾ !**
**ಉನ್ ಪುಕ್ಕಿಲಂಗು ಶೀರಲ್ಲಾಲ್ ಪುಕ್ಕಿಲನ್‌ಕಾಣ್ ಪುಣ್ಣಿಯನೇ !** ||೮||

ಆರೆಲ್ಲಾಂ=ನದಿಗಳೆಲ್ಲವೂ, **ತೊಕ್ಕು**=ಪ್ರವಹಿಸಿ, **ಇಲಂಗಿ**=ಪ್ರಕಾಶಿಸುತ್ತಾ, **ಪರಂದು**=ಎಲ್ಲೆಲ್ಲಿಯೂ ವ್ಯಾಪಿಸಿ, **ಓಡಿ**=ಓಡಿಹೋಗಿ, **ತೊಡು**=ಆಳವಾದ, **ಕಡಲ್**=ಸಮುದ್ರದಲ್ಲಿ, **ಪುಕ್ಕನ್ರಿ**=ಪ್ರವೇಶಿಸಿರದೆ, **ಪುರಂ**=ಬೇರೊಂದು ಸ್ಥಳದಲ್ಲಿ, **ನಿರ್ಕಮಾಟ್ಟಾದು**=ತಂಗಿ ನಿಲ್ಲುವುದಿಲ್ಲ. **ಅನ್ನೈಪೋಲ್**=ಆ ನದಿಗಳಂತೆಯೇ, **ಮಿಕ್ಕಿಲಂಗು** = ಅಧಿಕವಾಗಿ ಪ್ರಕಾಶಿಸುತ್ತಾ ನಿಂತಿರುವ, **ಮುಗಿಲ್** = ಮೇಘಗಳಂತೆ, **ನಿರತ್ತಾಯ್** = ದೇಹವನ್ನು ಹೊಂದಿರುವ, **ಪುಣ್ಣಿಯನ್**=ಪುಣ್ಯ ಅಥವಾ ಧರ್ಮವೇ ಮೂರ್ತಿವೆತ್ತಂತಿರುವ, **ವಿತ್ತುವಕ್ಕೋಟ್ಟಮ್ಮಾ** = ವಿತ್ತುವಕ್ಕೋಡಿನಲ್ಲಿ ಬಿಜಯಮಾಡಿಸಿರುವ ನನ್ನ ಸ್ವಾಮಿಯೇ ! **ಪುಕ್ಕಿಲಂಗು** = ನಿನ್ನ ಗುಣಾನುಭವ ಸಾಗರದಲ್ಲಿ ಮುಳುಗಿ ಅನುಭವಿಸುತ್ತಾ ಅನುಭವಿಸುತ್ತಾ ಇದ್ದರೆ ವಿಶೇಷವಾಗಿ ಪ್ರಕಾಶಿಸುವ, **ಉನ್‌ಶೀರಲ್ಲಾಲ್**=ನಿನ್ನ ಕಲ್ಯಾಣಗುಣಗಳನ್ನು ಬಿಟ್ಟು, **ಪುಕ್ಕಿಲನ್‌ಕಾಣ್** = ಬೇರೊಂದು ವಿಷಯದಲ್ಲಿ ಪ್ರವೇಶಿಸುವವನಲ್ಲ. ||೮||

'ನದೀನಾಂ ಸಾಗರೋಗತಿಃ'—ಎಂದು ಹೇಳುವಂತೆ, ನದಿಗಳೆಲ್ಲವೂ ಪ್ರವಹಿಸುತ್ತಾ, ಒಳ್ಳೆಯ ಪ್ರಕಾಶದಿಂದ ಎಲ್ಲೆಡೆಯೂ ವ್ಯಾಪಿಸಿ, ಓಡಿಹೋಗಿ 'ನದೀನಾಂ ಪತಿಃ'–'ನದಿಗಳ ಒಡೆಯ'–ಎಂದು ಹೇಳುವ ಆಳವಾದ ಸಮುದ್ರವನ್ನು ಹೋಗಿ ಸೇರುತ್ತವೆ. ಬೇರೊಂದೆಡೆಯಲ್ಲಿ ತಂಗುವುದಿಲ್ಲ. ಆಳವಾದ ಸಮುದ್ರದಲ್ಲಾದರೂ ಎಷ್ಟು ಆಳಕ್ಕೆ ಹೋದರೆ ಅಷ್ಟೂ, ಸ್ವತಃ ಪ್ರಕಾಶಿಸುವ ದಿವ್ಯವಾದ ರತ್ನಗಳೆಲ್ಲವೂ ಲಭಿಸುತ್ತದೆ. ಅಂತೆಯೇ ನಾನೂ, ಅತಿಯಾದ ಪ್ರಕಾಶದಿಂದ ಕೂಡಿ, ನೀರುಂಡ ಮೇಘದಂತಿರುವ ದೇಹಕಾಂತಿಯುಳ್ಳ, 'ಕೃಷ್ಣಂ ಧರ್ಮ ಸನಾತನಂ'—'ಧರ್ಮ ಮೂರ್ತಿ ರಿವಾಪರಃ'—ಎಂದು ಹೇಳುವಂತೆ ಧರ್ಮವೇ ಮೂರ್ತಿವೆತ್ತಂತಿರುವ ಎಲೈ ವಿತ್ತುವಕ್ಕೋಟ್ಟಮ್ಮಾ, ರತ್ನಾಕರನಂತೆ ಅನಂತಕಲ್ಯಾಣಗುಣ ಸಾಗರನಾಗಿದ್ದು, ಅದರಲ್ಲಿ ಮುಳುಗಿ ಎಷ್ಟೆಷ್ಟು ಅನುಭವಿಸಿದರೂ, ಅಷ್ಟು ಪ್ರಕಾಶಮಯವಾಗಿ ತಿಳಿದು ಬರುವ ನಿನ್ನ ಕಲ್ಯಾಣಗುಣಗಳನ್ನು ಅನುಭವಿಸುವ ವಿಷಯವೊಂದನ್ನು ಬಿಟ್ಟು ಬೇರಾವ ವಿಷಯಗಳಲ್ಲಿಯೂ ಪ್ರವೇಶಿಸುವುದಿಲ್ಲ. ||೮||

**ನಿನ್ನೈಯೇ ತಾನ್‌ವೇಂಡಿ ನೀಳ್ ಶೆಲ್ವಂ ವೇಂಡಾದಾನ್**
**ತನ್ನೈಯೇ ತಾನ್‌ವೇಂಡುಂ ಶೆಲ್ವಮ್ಪೋಲ್, ಮಾಯತ್ತಾಲ್**

**ಮಿನ್ನೈಯೇ ಶೇರ್ ತಿಗಿರಿ ವಿತ್ತುವಕ್ಕೋಟ್ಟಮ್ಮಾ !**
**ನಿನ್ನೈಯೇ ತಾನ್ ವೇಂಡಿ ನಿರ್ಪನಡಿಯೇನೇ** ||೯||

**ನಿನ್ನೈಯೇ ತಾೱ**=ನಿನ್ನನ್ನೇ, **ವೇಂಡಿ**=ಆಸೆಪಟ್ಟು, **ನೀಳ್ ಶೆಲ್ವಂ**= ನಿರವಧಿಕವಾದ ಸಂಪತ್ತನ್ನೂ, **ವೇಂಡಾದಾೱ**=ಆಸೆಪಡದಿರುವ (ನನ್ನ ಬಳಿಗೆ) **ತಾೱ**=ತಾನು, **ತನ್ನೈಯೇ** = ತಾನಾಗಿಯೇ, **ವೇಂಡುಂ**=ಬರಬೇಕಾಗಿ ಆಸೆಪಟ್ಟು ಬರುವ, **ಶೆಲ್ವಂಪೋಲ್**=ಐಶ್ವರ್ಯದಂತೆ, **ಮಿೱ**=ಮಿಂಚಿನಂತೆ ಪ್ರಕಾಶಮಾನವಾಗಿರುವ, **ತಿಕಿರಿ** = ಚಕ್ರಾಯುಧವನ್ನು, **ಶೇರಿ**=ಎಡಬಿಡದೆ ಧರಿಸಿರುವ, **ವಿತ್ತುವಕ್ಕೋಟ್ಟಮ್ಮಾ**=ವಿತ್ತುವಕ್ಕೋಡಿನಲ್ಲಿ ಬಿಜಯಮಾಡಿಸಿರುವ ಎಲೈ ! ನನ್ನ ಸ್ವಾಮಿಯೇ ! **ಮಾಯೆತ್ತಾಲ್**=ನಿನ್ನ ಮಾಯೆಯಿಂದ ನನ್ನನ್ನು ನೀನು ಅನುಗ್ರಹಿಸದೆ ಉಪೇಕ್ಷಿಸಿದರೂ, **ನಿನ್ನಯೇ ತಾೱ** = ನಿನ್ನನೇ ಸೇರ-ಬೇಕೆಂದು **ಅಡಿಯೇೱ**=ದಾಸಭೂತನಾದ ನಾನು, **ವೇಂಡಿನಿರ್ಪೆೱ**=ಆಸೆಪಟ್ಟು ನಿಂತಿರುವೆನು ||೯||

"ಆಯುರಾರೋಗ್ಯಮೈಶ್ವರ್ಯಂ ಭೋಗಾಂಶ್ಚೈವಾನುಷಂಗಿಕಾನ್, ದದಾತಿ ಧ್ಯಾಯಿನಾಂ ಪುಂಸಃ ಅಪವರ್ಗಪ್ರದೋ ಹರಿಃ |"—ಮೋಕ್ಷವನ್ನು ಅನುಗ್ರಹಿಸಿ ಕೊಡುವ ಪರಮಾತ್ಮನು, ನಾವು ಕೇಳದಿದ್ದರೂ, ನಮ್ಮ ದೇಹಾವಸಾನದವರೆವಿಗೂ, ಲೀಲಾವಿಭೂತಿಯಲ್ಲಿ ಶಾಂತಿಯುತವಾಗಿ ಅವನ ಮತ್ತು ಅವನ ಭಕ್ತರ ಕೈಂಕರ್ಯ ವನ್ನೆಸಗಲು ಅವಶ್ಯಕವಾಗಿರುವ ಆಯುಸ್ಸು, ಆರೋಗ್ಯ, ಐಶ್ವರ್ಯ ಮತ್ತು ಆನುಷಂಗಿಕ ಭೋಗಗಳನ್ನೂ ಪ್ರಪನ್ನನಿಗೆ ಅನುಗ್ರಹಿಸಿಕೊಡುತ್ತಾನೆ—ಎಂಬ ವಿಷಯವನ್ನು ಈ ಹಾಡಿನಲ್ಲಿ ಆಳ್ವಾರರು ಸಮರ್ಥಿಸಿದ್ದಾರೆ. ಪರಮಪುರುಷಾರ್ಥ ಭೂತನಾದ ನೀನೇ ನನಗೆ ಬೇಕೆಂದು ಆಸೆಪಟ್ಟು ನಿರವಧಿಕವಾದ ಐಶ್ವರ್ಯವನ್ನೂ ನನಗೆ ಬೇಡವೆಂದೇ ಕಡೆಗಣಿಸಿದೆ. ಆದರೆ ಆ ಐಶ್ವರ್ಯವಾದರೋ, ನನ್ನಲ್ಲಿಯೇ ಬಂದು ನೆಲಸಿ ಭಗವದ್ಭಾಗವತರ ಕೈಂಕರ್ಯದಲ್ಲಿ ವಿನಿಯೋಗವಾಗಬೇಕೆಂದು ತಾನಾಗಿಯೇ ಆಸೆಪಟ್ಟು ನನ್ನಲ್ಲಿಗೆ ಬಂದು ಸೇರಿದೆ. ಅಂತೆಯೇ ಪ್ರಭುವೇ ! ವಿತ್ತುವಕ್ಕೋಟ್ಟಮ್ಮಾ ! ನೀನು—"ದೈವೀಹ್ಯೇಷಾಗುಣಮಯೀ | ಮಮ ಮಾಯಾ ದುರತ್ಯಯಾ"—ಎಂದು ಹೇಳಿದಂತೆ, ನಿನ್ನ ಮಾಯೆಯಿಂದ ನನ್ನನ್ನು ಬಂಧಿಸಿ, ನನಗೆ ನೀನು ಕಾಣದಂತೆ ನನ್ನಲ್ಲಿಗೆ ಬಾರದೆ, ನಾನು ಬೇಡವೆಂದು ನೀನಿದ್ದರೂ, ನಾನಾಗಿ ನಿನ್ನಲ್ಲಿಗೆ ಬಂದು ನಿನ್ನ ಸೇವೆಯನ್ನೇ ಮಾಡಬೇಕೆಂಬ ಆಸೆಯಿಂದ ಕೂಡಿ ರುವ ನಾನು ನನ್ನಲ್ಲಿಗೆ ತಾನಾಗಿ ಬಂದ ಚಕ್ರವರ್ತಿತ್ವದಿಂದ ಕೂಡಿದ ಸಾಮ್ರಾಜ್ಯ ಶ್ರೀಯಂತೆ, ನಿನ್ನೊಡನೆ ಸೇರುವ ಕಾಲ ಎಂದು ಬರುತ್ತದೆಯೋ—ಎಂದು ಎದುರು ನೋಡುತ್ತಾ ನಿಂತಿದ್ದೇನೆ"—ಎಂದು ಹೇಳಿದ್ದಾರೆ. ||೯||

ವಿತ್ತುವಕ್ಕೋಟ್ಟೆಮ್ಮಾ ನೀ ವೇಂಡಾಯೇಯಾಯಿಡಿನುಮ್
ಮತ್ತಾರುಂ ಪತ್ತಿಲೇನೆನ್ರು ಅವನ್ನೈತ್ತಾಳ್‌ನಯೆನ್ದ
ಕೊಟ್ರವೇಲ್ ತಾನ್ನೈ ಕುಲಶೇಖರ್ನ ಶೊನ್ನ
ನಲ್‌ತಮಿಳ್ ಪತ್ತುಮ್‌ವಲ್ಲಾರ್ ನಣ್ಣಾರ್ ನರಕಮೇ ||೧೦||

**ವಿತ್ತುವಕ್ಕೋಟ್ಟೆಮ್ಮಾ**=ತಿರುವಿತ್ತುವಕ್ಕೋಡಿನಲ್ಲಿ ಬಿಜಯಮಾಡಿಸಿರುವ ಸರ್ವೇಶ್ವರನೇ! **ನೀ** = ನೀನು, **ವೇಂಡಾಯೇಯಾಯಿಡಿನುಂ** = ನನ್ನನ್ನು ಬೇಡವೆಂದು ಉಪೇಕ್ಷಿಸಿದರೂ, **ಮತ್ತಾರುಂ**=ಬೇರಾರನ್ನೂ, **ಪತ್ತಿಲೇನೆನ್ರು**= ರಕ್ಷಕನನ್ನಾಗಿ ಆಶ್ರಯಿಸುವುದಿಲ್ಲ—ಎಂದು, **ಅವನ್**=ಆ ಪರಮಾತ್ಮನ, **ತಾಳ್**= ತಿರುವಡಿಗಳನ್ನೇ, **ನಯೆನ್ದ**=ಆಸೆಪಟ್ಟವರಾಗಿ, **ಕೊಟ್ರಮ್**=ಜಯಪ್ರದವಾದ, **ವೇಲ್** = ವೇಲಾಯುಧವನ್ನೂ, **ತಾನ್ನೈ** = ಸೇನೆಯನ್ನೂ ಹೊಂದಿರುವ, **ಕುಲಶೇಖರ್ನ** = ಕುಲಶೇಖರಾಳ್ವಾರವರು, **ಶೊನ್ನ** = ಹೇಳಿರುವ, **ನಲ್**= ಒಳ್ಳೆಯ ಅರ್ಥಗಾಂಭೀರ್ಯವುಳ್ಳ, **ತಮಿಳ್**=ತಮಿಳಿನ, **ಪತ್ತುಮ್**=ಈ ಹತ್ತು ಪದ್ಯಗಳನ್ನೂ, **ವಲ್ಲಾರ್**=ಅಭ್ಯಾಸಮಾಡುವವರೂ, **ನರಕಮ್**= ನರಕವನ್ನು, **ನಣ್ಣಾರ್**=ಪ್ರವೇಶಿಸುವುದಿಲ್ಲ. ||೧೦||

ಎಲ್ಲೈ! ಸರ್ವೇಶ್ವರನಾದ ತಿರುವಿತ್ತುವಕ್ಕೋಡಿನಲ್ಲಿ ಅರ್ಚಾಮೂರ್ತಿಸ್ವರೂಪ ದಲ್ಲಿ ಬಿಜಯಮಾಡಿಸಿರುವ ನನ್ನ ಸ್ವಾಮಿಯೇ! "ಪರದುಃಖ ನಿರಾಚಿಕೀರ್ಷಾ" ದುಃಖದಲ್ಲಿರುವವನನ್ನು, ಆ ದುಃಖದಿಂದ ಪಾರುಮಾಡುವಿಕೆಯೇ 'ದಯಾಗುಣ'. —ನೀನು ಶ್ರೀವೈಕುಂಠದಲ್ಲಿದ್ದರೆ, ಅಲ್ಲಾರೊಬ್ಬರೂ ದುಃಖದಿಂದ ಕೂಡಿದವರೇ ಇಲ್ಲದಿರುವುದರಿಂದ ನಿನ್ನ ಈ ದಯಾಗುಣವು ಪ್ರಕಾಶಕ್ಕೆ ಬರುವುದಿಲ್ಲವೆಂದು, ದುಃಖಭೂಯಿಷ್ಠವಾದ ಸಂಸಾರದಿಂದ ಕೂಡಿದ ನಮ್ಮಂತಹ ಚೇತನರ ಮಧ್ಯದಲ್ಲಿ ನೀನು ಅರ್ಚಾಮೂರ್ತಿ ಸ್ವರೂಪದಲ್ಲಿ ಅವತರಿಸಿದ್ದೀಯೇ. ಈ ನಿನ್ನ ದಯಾಗುಣಕ್ಕೆ ನನಗಿಂತಲೂ ಮಿಗಿಲಾದ ಪಾತ್ರ ನಿನಗೆ ಲಭಿಸದು. ನಾನು ನಿನ್ನಲ್ಲಿಗೆ ಬಂದು ನಿನ್ನನ್ನು ಆಶ್ರಯಿಸಿದುದರಿಂದ, ನಿನ್ನಿಂದಲೂ, ನಿನ್ನ ದಯೆಗೆ ಅನುತ್ತಮವಾದ ಪಾತ್ರವೊಂದನ್ನು ಪಡೆದಂತಾಯಿತು. "ತ್ವಯಾಪಿ ಲಬ್ಧಂ ಭಗವನ್ನಿದಾನೀಂ ಅನುತ್ತಮಂ ಪಾತ್ರಮಿದಂ ದಯಾಯಾಃ" ಆದುದರಿಂದ ಅಲಭ್ಯವಾದ ವಸ್ತುವೊಂದು ಸಿಕ್ಕಿರುವಂತೆ, ನೀನು ನನ್ನನ್ನು ಖಂಡಿತ-ವಾಗಿಯೂ ಉಪೇಕ್ಷಿಸುವುದಿಲ್ಲ. ಒಂದು ವೇಳೆ ನೀನು ಉಪೇಕ್ಷಿಸಿದರೂ, ನಿನ್ನ ದಾಸಭೂತನಾದ ನಾನು ಸರ್ವಥಾ ಅನನ್ಯಗತಿಕನಾಗಿ ನಿನ್ನ ದಯೆಯನ್ನೇ ಎದಿರು ನೋಡುತ್ತಾ ನಿಂತಿರುತ್ತೇನೆ—ಎಂದು 'ಅನನ್ಯಾರ್ಹಶೇಷತ್ವ'–ಎಂಬ ಗುಣವನ್ನು ವಿಸ್ತಾರವಾಗಿ ಪ್ರಕಾಶಪಡಿಸಿ, ಆ ಪರಮಾತ್ಮನ ದಿವ್ಯ ತಿರುವಡಿಗಳನ್ನೇ ಆಸೆಪಟ್ಟು ನಿಂತಿರುವ, ಜಯಶೀಲವಾದ ವೇಲಾಯುಧವನ್ನೂ ಸೇನೆಯನ್ನೂ ಹೊಂದಿರುವ

ಕುಲಶೇಖರ ಪೆರುಮಾಳ್‌ರವರು ಹೇಳಿರುವ ಈ ದಶಕದ ಒಳ್ಳೆಯ ಅರ್ಥಗಾಂಭೀರ್ಯ ವುಳ್ಳ ಹತ್ತು ಹಾಡುಗಳನ್ನೂ ಅಭ್ಯಾಸಮಾಡುವವರು ಶ್ರೀಮದ್ರಾಮಾಯಣದಲ್ಲಿ ಸೀತಾದೇವಿಯು ಶ್ರೀರಾಮಚಂದ್ರನನ್ನು ಕುರಿತು—"ಯಸ್ತ್ವಯಾ ಸಹ ಸ ಸ್ವರ್ಗಃ ನಿರಯೋ ಯಸ್ತ್ವಯಾವಿನಾ"—"ನಿನ್ನೊಡನೆ ಕೂಡಿರುವುದೇ ನನಗೆ ಸ್ವರ್ಗ, ನಿನ್ನ ವಿಶ್ಲೇಷಕ್ಕೆ ಒಳಗಾಗುವುದೇ ನರಕ"—ಎಂದು ಹೇಳಿದಂತೆ ಭಗವಂತನ ವಿಶ್ಲೇಷವೆಂಬ ನರಕವನ್ನು ಹೊಂದುವುದಿಲ್ಲ. ಅಂದರೆ ನಿರಂತರವಾಗಿ ಭಗವದ್ಗುಣಾನುಭವ ಮಾಡುತ್ತಾ ಭಗವಂತನ ಸಂಸರ್ಗದಲ್ಲಿಯೇ ಇರುತ್ತಾರೆ—ಎಂದು ಈ ದಶಕಕ್ಕೆ ಫಲಶ್ರುತಿಯನ್ನು ಹೇಳಿ ಆಳ್ವಾರರು ಐದನೆಯ ದಶಕವನ್ನು ಮುಗಿಸಿದ್ದಾರೆ. ||೧೦||

## ಪೆರುಮಾಳ್ ತಿರುಮೊಳಿ — ಆರನೆಯ ದಶಕ

ಹಿಂದಿನ ದಶಕದಲ್ಲಿ ಆಳ್ವಾರವರು ತಾವು ಪರಮಾತ್ಮನನ್ನುಳಿದು, ಇನ್ನಾವ ಚೇತನರಿಗೂ ದಾಸಭೂತರಾಗಿರಲು ಅರ್ಹರಲ್ಲ—ಎಂಬ ತಮ್ಮ ಅನನ್ಯಾರ್ಹತ್ವವನ್ನು ಅನುಸಂಧಾನಮಾಡಿ; ಈಗ ಭಗವಂತನಿಗೂ—ದಾಸಭೂತರಾದ ಚೇತನರನ್ನು ಪಡೆ ಯುವುದಲ್ಲದೆ, ಬೇರೊಂದು ವಸ್ತುವಿನಲ್ಲಿ ಆಸೆಯಿಲ್ಲದಿರುವುದರಿಂದ, ದಾಸಭೂತರಾದ ಭಕ್ತರನ್ನು ಬಿಟ್ಟು ಬೇರಾರಿಗೂ ತನ್ನನ್ನು ಪಡೆಯಲು ಅರ್ಹತೆಯಿಲ್ಲದಿರುವುದರಿಂದ, ದಾಸಭೂತರಾದ ಭಕ್ತರಿಗೆ ಮಾತ್ರವೇ ತಾನು ಪೂರ್ಣತಯಾ ಅನುಗ್ರಹಮಾಡಲು, ತಾನು ಅರ್ಹನೆಂದೂ—ತನ್ನ ಅನನ್ಯರ್ಹತ್ವವನ್ನೂ, ಭಗವಂತನು ಹೇಳಿಕೊಂಡಿರುವ ವಿಷಯವನ್ನು ಈ ದಶಕದಲ್ಲಿ ವರ್ಣಿಸುತ್ತಾರೆ. ಕೃಷ್ಣಾವತಾರ ಕಾಲದಲ್ಲಿ ಭಗವಂತನು ತನ್ನಿಂದಲೇ ವಂಚಿಸಲ್ಪಟ್ಟು, ವಿರಹವ್ಯಥೆಯಿಂದ, ವಿಪ್ರಲಂಭಶೃಂಗಾರದಿಂದ ತೊಳಲು ತ್ತಿರುವ ಗೋಪಿಯರ ಮಧ್ಯದಲ್ಲಿ ತಾನು ಬಂದು ತನ್ನ ಮುಖವನ್ನು ತೋರಬೇಕೆಂದು ಆಸೆಪಟ್ಟು, ಸಮಯವನ್ನು ಕಾದುನೋಡಿ, ಗೋಪಿಯರು ಕೃಷ್ಣನ ವಿಶ್ಲೇಷದಿಂದಾದ ದುಃಖವನ್ನು ತಾಳಲಾರದೆ, ತಮ್ಮ ಮಾತಿನಿಂದ ಆ ದುಃಖವನ್ನು ಹೊರಗೆಡಹು ತ್ತಿರಲು, ಅವನ ಮಧ್ಯದಲ್ಲಿ ಕಾಣಿಸಿಕೊಳ್ಳಲು, ಗೋಪಿಯರು—'ಸುಳ್ಳು ಮಾತ ನ್ನಾಡುತ್ತಾ ನಮ್ಮನ್ನು ದುಃಖಕ್ಕೆ ಒಳಗುಮಾಡಿದ ಮೋಸಗಾರ ನೀನು, ಇನ್ನು ಮುಂದೆ ನಮ್ಮ ಹತ್ತಿರ ನೀನು ಬರಬೇಡ'—ಎಂದು ಹೇಳುತ್ತಾ, ಮನೆಯನ್ನು ಪ್ರವೇಶ ಮಾಡಲು ಸಿದ್ಧನಾಗಿದ್ದ ಅವನನ್ನು ತಳ್ಳಿ, ಮನೆಯ ಕದವನ್ನು ಹಾಕಿಕೊಂಡ ಗೋಪಿಯರನ್ನು ಕುರಿತು, ಕೃಷ್ಣನು—"ನಾನು ನಿಮ್ಮನ್ನು ಬಿಟ್ಟು ಬೇರೊಬ್ಬ ವ್ಯಕ್ತಿಯಲ್ಲಿಗೆ ಹೋಗುವೆನಾ? ನಾನು ಅನನ್ಯಾರ್ಹನಲ್ಲವೇ? (ನಾನೇ ಕುಲಶೇಖರ ನಾಗಿ ಬಂದಾಗ ನನ್ನ ಭಕ್ತರಿಗೋಸ್ಕರ ಸರ್ಪಭರಿತವಾದ ಕುಂಭದಲ್ಲಿ ಕೈಯಿಟ್ಟವ ನಲ್ಲವೇ?) ಎಂದು ತನ್ನ ಅನನ್ಯಾರ್ಹ ಶೇಷತ್ವವನ್ನು ಹೇಳಿಕೊಂಡನು.

ಈ ವೃತ್ತಾಂತವನ್ನೇ ಆಳ್ವಾರವರು ಈ ಹತ್ತು ಹಾಡುಗಳಲ್ಲಿ ಪರಿಪರಿಯಾಗಿ ವರ್ಣಿಸಿ ಭಗವಂತನ ಅನನ್ಯಾರ್ಹತ್ವವನ್ನು ಸ್ಥಾಪನೆ ಮಾಡಿದ್ದಾರೆ.

**ಏರ್‌ಮಲರ್‌ಪೂಂಕುಳಲಾಯರ್‌ಮಾದರ್**
**ಎನ್ನೈಪ್ಪಲರುಳ್ಳ ಇವ್ವೂರಿಲ್ ಉನ್ರನ್**
**ಮಾರ್ವುತಳುವುದರ್ಕಾಶೈಯಿನ್ಮೈ**
**ಅರಿನ್ದರಿನ್ದೇ ಉನ್ರನ್ ಪೊಯ್ಯೈಕ್ಕೇಟ್ಟು**
**ಕೂರ್‌ಮಳೈಪೋಲ್ ಪನಿಕ್ಕೂದಲೆಯ್‌ದಿ**
**ಕ್ಕೂಶಿನಡುಂಗಿ ಯಮುನೈಯಾಟ್ರಿಲ್**
**ವಾರ್‌ಮಣಲ್ಕುನ್ರಿಪ್ಪುಲರನಿನ್ರೇನ್**
**ವಾಸುದೇವಾ ! ಉನ್ ವರವುಪಾರ್ತೇ ॥೧॥**

**ವಾಸುದೇವಾ**=ವಸುದೇವನ ಪುತ್ರನಾದ ಶ್ರೀಕೃಷ್ಣನೇ ! **ಏರ್**=ಸುಂದರವಾದ, **ಮಲರ್**=ಹೂವುಗಳಿಂದ ಅಲಂಕೃತರಾದ, **ಪೂ**=ಸ್ವಭಾವಸಿದ್ಧವಾದ ಪರಿಮಳವನ್ನು ಹೊಂದಿರುವ, **ಕುಳಲ್**=ಕುಂತಲವನ್ನು ಹೊಂದಿರುವ, **ಆಯರ್‌ಮಾದರ್** = ಗೋಪಿಸ್ತ್ರೀಯರು, **ಎನ್ನೈಪಲರುಳ್ಳ** = ನನ್ನಂತೆಯೇ ಅನೇಕ ಜನರುಳ್ಳ, **ಇವ್ವೂರಿಲ್** = ಈ ನಂದಗೋಕುಲದಲ್ಲಿ, **ಉನ್ರನ್** = ನಿನ್ನ, **ಮಾರ್ವು**=ಎದೆಯನ್ನು, **ಕಳುವುದರ್ಕ್ಕು**=ಅಪ್ಪಿಕೊಳ್ಳಲು, **ಆಶೈಯಿನ್ಮೈ**= ಆಶೆಯಿಲ್ಲದಿದ್ದರೂ, **ಅರಿನ್ದರಿನ್ದೇ**=ಚೆನ್ನಾಗಿ ತಿಳಿದೂ ತಿಳಿದು, **ಉನ್ರನ್**= ನಿನ್ನ, **ಪೊಯ್ಯೈ**=ಸುಳ್ಳಾದ ಮಾತನ್ನು, **ಕೇಟ್ಟು**=ಕೇಳಿ ನಂಬಿ, **ಕೂರ್‌ಮಳೈಪೋಲ್**=ತೀಕ್ಷ್ಣವಾದ ಮಳೆಯ ಹನಿಗಳಂತೆ ಸುರಿಯುವ, **ಪನಿ**= ಮಂಜಿನಿಂದಲೂ, **ಕೂದಲೆಯ್ದಿ**=ಛಳಿಗೆ ಒಳಗಾಗಿಯೂ, **ಕೂಶಿ**=ಯಾರು ನೋಡುತ್ತಾರೆಯೋ ಎಂಬ ಸಂಕೋಚದಿಂದಲೂ, **ನಡುಂಗಿ**=ಛಳಿಯಿಂದಲೂ ಭಯದಿಂದಲೂ ನಡುಗುತ್ತಾ, **ಯಮುನೈಯಾಟ್ರಿಲ್** = ಯಮುನಾನದಿಯ ದಡದಲ್ಲಿನ, **ವಾರ್**=ದೊಡ್ಡದಾದ, **ಮಣಲ್ ಕುನ್ರಿಲ್**=ಮರಳಿನ ರಾಶಿಯಲ್ಲಿ **ಉನ್**=ನಿನ್ನ, **ವರವು**=ಬರುವಿಕೆಯನ್ನೇ, **ಪಾರ್ತು**=**ನಿರೀಕ್ಷಿಸುತ್ತಾ**, **ಪುಲರನಿನ್ರೇನ್**=ಬೆಳಕು ಹರಿಯುವವರೆವಿಗೂ ಕಾದು ನಿಂತಿದ್ದೆನು. ॥೧॥

ಒಬ್ಬ ಗೋಪಿಗೆ ಕೃಷ್ಣನು ಯಮುನಾನದಿಯ ದಡದಲ್ಲಿನ ಮರಳಿನ ದಿಣ್ಣೆಯ ಮೇಲೆ, ಯಾವುದೋ ಒಂದು ನಿಯತವಾದ ಸ್ಥಳದಲ್ಲಿ ಬೆಳಗಿನ ಝಾವದಲ್ಲಿಯೇ, ಆಕೆಯನ್ನು ಕಾಣುವುದಕ್ಕೆ ತಾನು ಬರುವುದಾಗಿ ಮಾತುಕೊಟ್ಟಿದ್ದನು. ಅವನ ಆ ಮಾತನ್ನು ಕೇಳಿ ನಂಬಿಕೆಗೆ ಒಳಗಾದ ಆ ಗೋಪಿಯು, ಅವನು ಹೇಳಿದಂತೆಯೇ ನಿಯತವಾದ ಕಾಲದಲ್ಲಿ, ನಿಯತವಾದ ಸ್ಥಳದಲ್ಲಿ ಎಷ್ಟು ಹೊತ್ತು ಕಾದರೂ, ಅವನು

ಬರದಿರಲು, ಆಕೆ ತಮ್ಮ ಮನೆಗೆ ಬಹಳ ದುಃಖದಿಂದ ಬಂದು ಸೇರುತ್ತಾಳೆ. ಆಗ ಶ್ರೀಕೃಷ್ಣನು ಆಕೆಯನ್ನು ಕಾಣಲೆಂದು ಆಕೆಯ ಮನೆಗೆ ಬಂದು ಕದವನ್ನು ತಟ್ಟುತ್ತಾನೆ. ಆಗ ಕದವನ್ನು ತೆಗೆದ ಆ ಗೋಪಿಯು ಬಾಗಿಲಲ್ಲೇ ನಿಂತಿರುವ ಆ ಕೃಷ್ಣನನ್ನು ಕಂಡು ಪ್ರಣಯಕೋಪದಿಂದ ಈ ಮಾತನ್ನಾಡುತ್ತಾಳೆ.

'ಎಲೈ ವಾಸುದೇವನೇ ! ಸುಂದರವಾದ ಹೂವುಗಳಿಂದಲಂಕೃತರಾದ, ಸ್ವಭಾವ ಸಿದ್ಧವಾದ ಪರಿಮಳವನ್ನೂ ಹೊಂದಿರುವ, ಆಕರ್ಷಕವಾದ ಕೇಶಪಾಶಗಳಿಂದ ಕೂಡಿರುವ, ನನ್ನಂತೆಯೇ ನಿನ್ನ ಎದೆಯನ್ನು ಆಲಂಗಿಸಿಕೊಳ್ಳುವ ಆಸೆಯುಳ್ಳ, ಇನ್ನೂ ಅನೇಕ ಜನ ಗೋಪಿಕಾಸ್ತ್ರೀಯರು ಈ ನಂದಗೋಕುಲದಲ್ಲಿರುವಲ್ಲಿ, ನಿನಗೆ ಇಷ್ಟಳಲ್ಲದ ನಾನೂ, ನನ್ನ ಗಾಢಾಲಿಂಗನದ ಆಸೆಯನ್ನೇ ನೀನು ತೋರದಿದ್ದರೂ, ನೀನು ಮೋಸ ಮಾಡುವವನೆಂದು ಚೆನ್ನಾಗಿ ತಿಳಿದಿದ್ದರೂ, ಬರೀ ಸುಳ್ಳುಗಳಿಂದ ತುಂಬಿರುವ ನಿನ್ನ ಮಾತನ್ನು ಕೇಳಿ ನಂಬಿ, ತೀಕ್ಷ್ಣವಾದ ಮಳೆಯ ಹನಿಯಂತೆ ಮಂಜು ಸುರಿಯುತ್ತಿರುವಲ್ಲಿ, ಅದೂ ಬೆಳಗಿನ ಝಾವದಲ್ಲಿ ಯಮುನಾನದಿಯಲ್ಲಿ ಮರಳಿನ ದಿಣ್ಣೆಯಲ್ಲಿ, ಛಳಿಯಿಂದ ನಡುಗುತ್ತಲೂ ಮತ್ತು ನಿನಗೋಸ್ಕರ ಕಾದು ನಿಂತಿರುವ ನನ್ನನ್ನು ಹಿರಿಯರಾರಾದರೂ ನೋಡಿ—'ಏಕೆ ಇಲ್ಲಿ ನಿಂತಿದ್ದೀಯೆ ?'–ಎಂದು ಕೇಳಿದರೆ ಏನು ಹೇಳುವುದು ?–ಎಂಬುವ ಶಂಕೆಯಿಂದಲೂ; ಸಂಕೋಚದಿಂದಲೂ, ಬೇರಾರಾದರೂ ನನ್ನನ್ನು ನೋಡಿಯಾರು—ಎಂಬ ಭಯದಿಂದ ನಡುಗುತ್ತಲೂ, ನೀನು ರಾತ್ರಿಯ ಕಾಲವೆಲ್ಲಾ ಯಾರೊಡನಾದರೂ ಸುಖವನ್ನನುಭವಿಸುತ್ತಿದ್ದರೂ ಬೆಳಕು ಹರಿದಾದ ನಂತರ ಬರಬಹುದೆಂದು ಕಗ್ಗತ್ತಲಿನಿಂದ ಕೂಡಿದ ಬೆಳಗಿನ ಝಾವದಲ್ಲಿ ಹೋದವಳು ಸೂರ್ಯೋದಯವಾಗಿ ಚೆನ್ನಾಗಿ ಬೆಳಕು ಹರಿಯುವವರೆವಿಗೂ ಅಲ್ಲೇ ಕಾದಿದ್ದು, ನೀನು ಬರಲಿಲ್ಲವೆಂದು ದುಃಖದಿಂದ ಮನೆಗೆ ಹಿಂತಿರುಗಿದೆನು'.—ಎಂದು ಹೇಳಿ (ಮುಂದಿನ ಹಾಡುಗಳ ಪ್ರಸಂಗದಿಂದ ತಿಳಿದು ಬರುವಂತೆ) ಅವನನ್ನು ತಳ್ಳಿ ತಮ್ಮ ಮನೆಯ ಬಾಗಿಲನ್ನು ಹಾಕಿಕೊಂಡಳು. ||೧||

ಕೆಂಡೈಯೊಣ್ ಕಣ್‌ಮಡವಾಳೊರುತ್ತಿ
ಕೀಳೈಯುಗತ್ತು ತಯಿರ್‌ಕಡೈಯ
ಕ್ಕಂಡು, ಒಲ್ಲೈನಾನುಂ ಕಡೈವನೆನ್ರು
ಕಳ್ಳವಿಳಯ್ಯೆ ವಿಳತ್ತುಪ್ಪುಕ್ಕು
ವಂಡಮರ್ ಪೂಂಗುಳಲ್ ತಾಳ್‌ನ್ದುಲಾವ
ವಾಣ್‌ಮುಗವ್ ವೇರ್ಪಚ್ಚೆವ್ವಾಯ್‌ತ್ ತುಡಿಪ್ಪ
ತಣ್ಡಯಿರ್ ನೀ ಕಡೈನ್ದಿಟ್ಟೆ ವಣ್ಣಮ್
ದಾಮೋದರಾಮೆಯ್ಯೆರಿವನ್ ನಾನೇ ||೨||

**ದಾಮೋದರಾ**=ಎಲೈ ದಾಮೋದರನಾದ ಶ್ರೀಕೃಷ್ಣನೇ! **ಕೀಳೈಯಕ್ಕಂಕತ್ತು**=ನಮ್ಮ ಮನೆಗೆ ಪೂರ್ವದಲ್ಲಿರುವ ಮನೆಯಲ್ಲಿ, **ಕೆಣ್ಡೈ**=ಮೀನಿನಂತೆಯೂ **ಒಳ್**=ಕಾಂತಿಯಿಂದಲೂ (ಕೂಡಿರುವ), **ಕಣ್**=ಕಣ್ಣುಗಳನ್ನು ಹೊಂದಿರುವ, **ಮಡವಾಳ್ ಒರುತ್ತಿ** = **ಪೆಣ್ಮಣಿಯೊಬ್ಬಳು, ತಯಿರ್ಕ್ಕಡೈಯಕ್ಕಂಡು**= ಒಬ್ಬೊಂಟಿಗಳಾಗಿ ಮೊಸರನ್ನು ಕಡೆಯುತ್ತಿರುವುದನ್ನು ಕಂಡು (ಅವಳನ್ನು ಕುರಿತು) **ನಾನುಂ**=ನಾನೂ, **ಒಲ್ಲೈಕ್ಕಡೈವನೆನ್ರು**=ಬಹಳ ಬೇಗ ಕಡೆವೆನೆಂದು ಹೇಳಿ, **ಕಳ್ಳವಮ್**=ಕಪಟವಾದ, **ವಿಳಿಯೈ**=ದೃಷ್ಟಿಯನ್ನು, **ವಿಳಿತ್ತು**=ಅವಳ ಮೇಲೆ ಬೀರಿ, **ಪುಕ್ಕು**=ಅವಳ ಹತ್ತಿರಕ್ಕೆ ಹೋಗಿ, **ವಂಡು**=ದುಂಬಿಗಳು, **ಅವರ್**= ಕೂಡಿಕೊಂಡಿರುವ, **ಪೂ**=ಹೂವುಗಳಿಂದ ಅಲಂಕೃತವಾದ, **ಕುಳಲ್**=ನಿನ್ನ ಮುಡಿಯು, **ತಾಳ್ನ್ದುಲಾವ**=ಬಿಚ್ಚಿಹೋಗಿ ಅತ್ತ ಇತ್ತ ಹರಡಿಕೊಂಡು ಆಡುವಂತೆ, **ವಾಳ್** = ತೇಜಸ್ಸಿನಿಂದ ಕೂಡಿದ, **ಮುಕಮ್**=ಮುಖವು, **ವೇರ್ಪ**=ಬೆವರುವಂತೆಯೂ, **ಶೆವ್ವಾಯ್**=ಅವಳ ಕೆಂತುಟಿಗಳು, **ತುಡಿಪ್ಪ**= ಅದಿರುವಂತೆಯೂ, **ತಣ್**=ತಣ್ಣಗಿರುವ, **ತಯಿರ್**=ಮೊಸರನ್ನು, **ನೀ**= ನೀನು, **ಕಡೈನ್ದಿಟ್ಟವಣ್ಣಮ್**=ಕಡೆದ ಪ್ರಕಾರದ, **ಮೆಯ್**=ಸತ್ಯಾಂಶವನ್ನು, **ನಾನ್**=ನಾನು, **ಅರಿವೇನ್**=ತಿಳಿದಿದ್ದೇನೆ.

ಶ್ರೀಕೃಷ್ಣನು ಮತ್ತೊಬ್ಬ ಸಖಿಯಲ್ಲಿ ಹೋಗಿ, ನಾನು ನಿನ್ನೊಬ್ಬಳನ್ನು ಬಿಟ್ಟು ಬೇರಾರನ್ನೂ ಪ್ರೇಮಿಸುವುದಿಲ್ಲವೆಂದು ಹೇಳಿದಾಗ ಆಕೆಯು, ಕೃಷ್ಣನನ್ನು ಕುರಿತು ಹೇಳುತ್ತಾಳೆ—'ಎಲೈ ದಾಮೋದರನಾದ ಶ್ರೀಕೃಷ್ಣನೇ! ನೀನು ಬೇರಾರನ್ನೂ ಪ್ರೇಮಿಸುವುದಿಲ್ಲ ಎನ್ನುವುದು ನನಗೆ ಚೆನ್ನಾಗಿ ಗೊತ್ತು. ನಮ್ಮ ಮನೆಯ ಪೂರ್ವ ದಿಕ್ಕಿನಲ್ಲಿರುವ ಮನೆಯೊಂದರಲ್ಲಿ, ನಿನ್ನ ಕಮಲದಂತಿರುವ ಕಣ್ಣುಗಳಿಗೆ ಸಾಟಿಯಾಗಿರುವ ಮೀನಿನಂತಿರುವ ಕಣ್ಣುಗಳನ್ನು ಹೊಂದಿದ ಭಾಗ್ಯವಂತೆಯಾದ ಮೀನಾಕ್ಷಿಯಾದ ಪೆಣ್ಮಣಿಯೊಬ್ಬಳು ಏಕಾಕಿಯಾಗಿ ಮೊಸರು ಕಡೆಯುತ್ತಿರುವುದನ್ನು ಕಂಡು, ನಾನೂ ವೇಗವಾಗಿ ಮೊಸರನ್ನು ಕಡೆಯಬಲ್ಲೆ. ಅಬಲೆಯಾದ ನೀನೊಬ್ಬಳೇ ಕಡೆದರೆ ಬಹಳ ಸಮಯವಾದೀತು. ನಾನು ಅತಿ ಶೀಘ್ರದಲ್ಲಿ ಕಡೆಯುತ್ತೇನೆಂದು ಹೇಳುತ್ತಲೇ ಆಕೆಯ ಬಳಿಗೆ ಹೋಗಿ, ಅವಳ ಪಕ್ಕದಲ್ಲಿಯೇ ಕುಳಿತು, ಕಪಟದಿಂದ ನಿನ್ನ ಪ್ರೇಮಪೂರಿತವಾದ ದೃಷ್ಟಿಯನ್ನು ಆಕೆಯ ಮೇಲೆ ಬೀರುತ್ತಾ, ಮೊಸರು ಕಡೆಯುತ್ತಾ, ಮಧುಪಾನ ಮಾಡಲು ಮುತ್ತಿಗೆ ಹಾಕಿರುವ ದುಂಬಿಗಳಿಂದ ಕೂಡಿದ ಪರಿಮಳಭರಿತವಾದ ಪುಷ್ಪಗಳಿಂದ ಅಲಂಕೃತವಾದ ನಿನ್ನ ಮುಡಿಯೂ, ಅವಳ ಮುಡಿಯೂ ಬಿಚ್ಚಿಹೋಗಿ ಅತ್ತ ಇತ್ತ ಸರಿಯುತ್ತಾ ಪರಸ್ಪರ ತಗಲುವಂತೆ ಮಾಡಿ, ನಿನ್ನ ತೋಳಿನೊಡನೆ ಅವಳ ತೋಳುಗಳು ಚೆನ್ನಾಗಿ ತಗಲುವಂತೆ ನೀನು ಮಾಡಲು, ತೇಜಸ್ಸಿನಿಂದ ಕೂಡಿದ ಅವಳ ಮುಖವು ಬೆವರಿತು, ಅವಳ ಕೆಂತುಟಿಗಳು ಅದುರು-

ತ್ತಿದ್ದನು. ಈ ತರಹದ ದೃಶ್ಯವನ್ನು ಕಂಡ ನಾನು, ಈ ನಿನ್ನ ಮೊಸರು ಕಡೆಯುವ ಕಪಟ ನಾಟಕದ ರಹಸ್ಯವನ್ನು ಚೆನ್ನಾಗಿ ಬಲ್ಲೆನು. ಆದುದರಿಂದ ನೀನು ನಿನ್ನ ಸುಳ್ಳು ಮಾತುಗಳಿಂದ ನನ್ನನ್ನು ಮಾರುಹೋಗುವಂತೆ ಮಾಡಲು ಸಾಧ್ಯವಿಲ್ಲ. "ಜನ್ಮ ಕರ್ಮ ಚ ಮೇ ದಿವ್ಯಂ ಏವಂ ಯೋವೇತ್ತಿ ತತ್ವತಃ"—ಎಂದು ನೀನೇ ಹೇಳಿರುವಂತೆ ನಿನ್ನ ದಿವ್ಯಚೇಷ್ಟಿತಗಳ ತತ್ವವನ್ನು ನಾನು ಅರಿತಿದ್ದೇನೆ. ಇಲ್ಲಿ ನನ್ನೊಡನೆ ಇರಲು ನಿನಗೆ ಅಭಿಪ್ರಾಯವಿಲ್ಲ. ಅಲ್ಲೇ ಹೋಗಿ ಮೊಸರು ಕಡೆಯಲು ಹೋಗಿ ಬಾ'—ಎಂದಳು. ||೨||

**ಕರುಮಲರ್ಕೂನ್ದಲ್ ಒರುತ್ತಿತನ್ನೈ**
**ಕ್ಕಡೈಕ್ಕಣಿತ್ತು ಆಂಗೇ ಒರುತ್ತಿ ತನ್ಪಾಲ್**
**ಮರುವಿಮನಮ್ ವೈತ್ತು ಮಟ್ರೊರುತ್ತಿಕ್ಕುರೈತ್ತು**
**ಒರುಪೇದೈಕ್ಕು ಪೊಯ್ ಕುರಿತ್ತು**
**ಪುರಿಕುಳಲ್ ಮಂಗೈಯೊರುತ್ತಿತನ್ನೈ**
**ಪುಣರ್ತಿ ಅವಳುಕ್ಕುಂ ಮೆಯ್ಯನಲ್ಲೈ**
**ಮರುತಿರುತ್ತಾಯ್ ಉನ್ವಳರ್ತಿಯೊಡೇ**
**ವಳರ್ಗಿನ್ರತಾಲುನ್ತನ್ ಮಾಯೈತಾನೇ ||೩||**

ಮಲರ್ = ಪುಷ್ಪಗಳಿಂದ ಅಲಂಕರಿಸಲ್ಪಟ್ಟ, **ಕರು** = ಕಪ್ಪಗಿರುವ, **ಕೂನ್ದಲ್** = ಕುಂತಲಗಳುಳ್ಳ, **ಒರುತ್ತಿತನ್ನೈ** = ಒಬ್ಬ ಗೋಪಬಾಲಿಕೆಯನ್ನು, **ಕಡೈಕ್ಕಣಿತ್ತು** = ತನ್ನ ಕಡೆಗಣ್ಣೋಟದಿಂದ ನೋಡಿ, **ಆಂಗೇ** = ಆ ರೀತಿ ಮಾಡು-ತ್ತಿರುವಲ್ಲಿಯೇ, **ಒರುತ್ತಿತನ್ಪಾಲ್** = ಮತ್ತೊಬ್ಬಳ ವಿಷಯದಲ್ಲಿ, **ಮನಂ** = ಮನಸ್ಸನ್ನು, **ಮರುವಿವೈತ್ತು** = ಇರುವಂತೆ ತೋರಿ, **ಮಟ್ರೊರುತ್ತಿಕ್ಕು** = ಮತ್ತೊಬ್ಬಳಿಗೆ, **ಉರೈತ್ತು** = ನಿನಗೇ ನಾನು ದಾಸನೆಂದು ಹೇಳಿ, **ಒರು-ಪೇದೈಕ್ಕು** = ಮತ್ತೊಬ್ಬ ಮುಗ್ಧಳಾದ ಕನ್ನಿಕೆಗೆ, **ಪೊಯ್** = ಸುಳ್ಳಾಗಿ, **ಕುರಿತ್ತು** = ತಾನು ಅವಳೊಡನೆ ಏಕಾಂತದಲ್ಲಿ ಬಂದು ಸೇರಲು ಜಾಗವೊಂದನ್ನು ನಿಷ್ಕರ್ಷಿಸಿ ಹೇಳಿ, **ಪುರಿ** = ಆಸೆಯುಂಟುಮಾಡುವ, **ಕುಳಲ್** = ಕೇಶಪಾಶವುಳ್ಳ, **ಮಂಗೈ** = ಯುವತಿ, **ಒರುತ್ತಿತನ್ನೈ** = ಒಬ್ಬಳನ್ನು, **ಪುಣರ್ತಿ** = ಆಲಿಂಗನ ಮಾಡಿಕೊಂಡು, **ಅವಳುಕ್ಕುಂ** = ಆ ಹೆಣ್ಣಿಗೂ, **ಮೆಯ್ಯನಲ್ಲೈ** = ಸುಳ್ಳುಹೇಳು-ವವನಾಗಿದ್ದು, **ಮರುತು** = ಯಮಳಾರ್ಜುನ ವೃಕ್ಷಗಳನ್ನು, **ಇರುತ್ತಾಯ್** = ಮುರಿದುಹಾಕಿದವನೇ, **ಉನ್ವಳರ್ತಿಯೊಡೇ** = ನಿನ್ನ ಪ್ರಾಯದ ಜೊತೆಯಲ್ಲಿ, **ಉನ್ಮಾಯೈ** = ನಿನ್ನ ಮೋಸಮಾಡುವಿಕೆಯೂ, ವಳರ್ಕಿನ್ರದು = ಬೆಳೆಯು-**ತ್ತ**ಲೇ ಇದೆ. ||೩||

ಗೀತಗೋವಿಂದದಲ್ಲಿ ಜಯದೇವನು ಹಾಡಿರುವ—"ಧೀರಸಮೀರೇ ಯಮುನಾ ತೀರೇ ವಸತಿವನೇ ವನಮಾಲೀ। ಶ್ಲಿಷ್ಯತಿ ಕಾಮಪಿ ರಾಮಾವಮ್ ॥"—ಎಂಬ ಶ್ಲೋಕದ ಅನುಭವವನ್ನೇ ಆಳ್ವಾರರೂ ಈ ಹಾಡಿನಲ್ಲಿ ಅನುಭವಿಸಿದ್ದಾರೆ.

ಪುಷ್ಪಗಳಿಂದ ಅಲಂಕರಿಸಲ್ಪಟ್ಟಿರುವ, ಕಪ್ಪುಬಣ್ಣದಿಂದ ಕೂಡಿದ ಕುಂತಲಗಳುಳ್ಳ ಒಬ್ಬ ಗೋಪಬಾಲಿಕೆಯನ್ನು ತನ್ನ ಕಡೆಗಣ್ಣೋಟದಿಂದ ಕಂಡು ಆಕೆಗೆ ತನ್ನ ಪ್ರೇಮವನ್ನು ಅವಳ ವಿಷಯದಲ್ಲಿರುವಂತೆ ಕಣ್ಣೋಟದಿಂದಲೇ ತಿಳಿಸುತ್ತಾ, ಆ ರೀತಿ ಮಾಡುತ್ತಲೇ ಮತ್ತೊಬ್ಬಳ ವಿಷಯದಲ್ಲಿ ತನಗೆ ಮನಸ್ಸನ್ನಿರುವಂತೆ ತೋರಿ, ಒಬ್ಬಳಿಗೆ ನಿನಗೇ ನಾನು ದಾಸನೆಂದು ಹೇಳಿ, ಮತ್ತೊಬ್ಬ ಏನೂ ಅರಿಯದ ಮುಗ್ಧೆಯಾದ ಕನ್ನಿಕೆಗೆ, ತಾನು ಅವಳೊಡನೆ ಏಕಾಂತದಲ್ಲಿ ಸಂಶ್ಲೇಷವನ್ನು ಪಡೆಯಲು, ಸ್ಥಳವೊಂದನ್ನು ಸೂಚಿಸಿ—ನಿರ್ದಿಷ್ಟವಾದ ಒಂದು ಕಾಲದಲ್ಲಿ ಆ ನಿರ್ದಿಷ್ಟವಾದ ಸ್ಥಳಕ್ಕೆ ಆಕೆಯನ್ನು ಬರಹೇಳಿ, ತನಗೂ ಆಸೆಯನ್ನುಂಟುಮಾಡುವ ಬೇರೊಬ್ಬ ಯುವತಿಯನ್ನು ಅಲ್ಲೇ ಆಲಿಂಗನ ಮಾಡಿಕೊಂಡು, ಅವಳಿಗೂ ಸುಳ್ಳನ್ನು ಹೇಳಿ, ಯಮಳಾರ್ಜುನ ವೃಕ್ಷವನ್ನು ಮುರಿದು ಹಾಕಿದ ಎಲೈ ಕೃಷ್ಣನೇ; ನಿನ್ನ ಪ್ರಾಯದ ಜೊತೆಯಲ್ಲಿ ನಿನ್ನ ಮೋಸಗಾರತನವೂ ಬೆಳೆಯುತ್ತಲೇ ಇದೆಯಲ್ಲವೇ? ॥೩॥

ತಾಯ್‌ಮುಲೈಪ್ಪಾಲಿಲಮುದಿರುಕ್ಕ
ತವಳ್‌ನ್ದು ತಳರ್‌ನಡೈಯಿಟ್ಟು ಚ್ಚೆನ್ರು
ಪೇಯ್‌ಮುಲೈವಾಯ್‌ವೈತ್ತು ನಂಜೈ-
ಯುಂಡು ಪಿತ್ತನೆನ್ರೇ ಪಿರರೇಶನಿನ್ರಾಯ್
ಆಯ್‌ಮಿಗುಕಾದಲೋಡುಯಾನಿರುಪ್ಪ
ಯಾನ್‌ವಿಡವನ್ದ ವೆನ್ ತೂದಿಯೋಡೇ
ನೀಮಿಗುಪೋಗತ್ತು ನನ್ಗುಕನ್ದಾಯ್
ಅದುವುಮುನ್ ಕೋರಂಬುಕ್ಕೇರ್ಕುಮನ್ರೇ ॥೪॥

**ತಾಯ್**=ತಾಯಿಯಾದ ಯಶೋದೆಯು, **ಮುಲೈಯಿಲ್**=ಸ್ತನಗಳಲ್ಲಿ, **ಅಮುದು**=ಭೋಗ್ಯವಾಗಿ, **ಪಾಲಿರುಕ್ಕ**=ನಿನಗೆ ಧಾರಕವಾದ ಮುಲೈ ಹಾಲಿರಲು, **ತವಳನ್ದು**=ತನ್ನ ತಾಯಿಯ ಮಡಿಲಿಂದ ಜಾರಿ, **ತಳರ್‌ನಡೆಯಿಟ್ಟು ಚ್ಚೆನ್ರು**=ಅಂಬೆಗಾಲಿಟ್ಟುಕೊಂಡು ಹತ್ತಿರಹೋಗಿ, **ಪೇಯ್**=ವಂಚಕಳಾದ ಪೂತನಿಯ, **ಮುಲೈ**=ಮುಲೈಯಲ್ಲಿ, **ವಾಯ್‌ವೈತ್ತು**=ತನ್ನ ಬಾಯನ್ನಿಟ್ಟು, **ನಂಜೈ**=ವಿಷಮಿಶ್ರವಾದ ಹಾಲನ್ನು, **ಉಂಡು**=ಪಾನಮಾಡಿ, **ಪಿತ್ತನೆನ್ರು**=ಹುಚ್ಚನೆಂದು, **ಪಿರರ್**=ಇತರರು, **ಏಶನಿನ್ರಾಯ್**=ಹೇಳುವಂತಾದ (ಎಲೈ ಶ್ರೀಕೃಷ್ಣನೇ;) **ಯಾನ್**=ನಾನು (ನಿನ್ನನ್ನು), **ಮಿಕಮಿಕಾದ**-

**ಲೋಡು**=(ಸೇರಬೇಕೆಂದು) ಅತ್ಯಧಿಕವಾದ ಪ್ರೇಮದಿಂದ ಆಸೆಪಟ್ಟು, **ಆಯ್**= ಇಂದ್ರಿಯ ವಿಕಾರಗಳನ್ನು ಹೊಂದಿದವಳಾಗಿ, **ಇರುಕ್ಕ** = ಇರುತ್ತಿರಲು, **ಯಾನ್**=ನಾನು, ವಿಡೆ=ಕಳುಹಿಸಿದ, ವನ್ದ=ನಿನ್ನ ಸಮೀಪಕ್ಕೆ ಬಂದ, **ಎನ್‌ತೂದಿಯೋಡೇ**=ನನ್ನ ದೂತಿಯೊಡನೆ, **ನೀ**=ನೀನು (ಈ ಕೆಲಸಕ್ಕೆ ಇವರು ಯೋಗ್ಯರೆಂಬ ನಿಯಮವನ್ನರಿಯದೇ), **ಮಿಕುಭೋಗಂ**=ಸರ್ವವಿಧವಾದ ಭೋಗವನ್ನೂ, **ನನ್ಗುಕನಾ್ದಯ್** = ಅವಳೊಡನೆ ಚೆನ್ನಾಗಿ ಅನುಭವಿಸಿದೆ. **ಅದುವುಂ**=ಆ ನಿನ್ನ ಕೃತ್ಯವೂ, **ಉನ್‌ಕೋರಂಬುಕ್ಕು** = (ಈ ಮೊದಲೇ ಹೇಳಿದ) ಬಾಲ್ಯದ ಚೇಷ್ಟೆಗೆ, **ಏರ್ಕುಮನ್ರೇ**=ತಕ್ಕುದಾಗಿದೆಯಲ್ಲವೇ ? ||೪||

ಒಬ್ಬ ಗೋಪಬಾಲಿಕೆಯು ಶ್ರೀಕೃಷ್ಣನ ವಿಷಯದಲ್ಲಿ ಅತ್ಯಧಿಕವಾದ ಪ್ರೇಮದಿಂದಿದ್ದು, ಅವನನ್ನೇ ಚಿಂತಿಸುತ್ತಾ, ಕಾಮಪೀಡೆಗೆ ಒಳಗಾಗಿ, ಆತನನ್ನು ಆದಷ್ಟು ಜಾಗ್ರತೆ ತನ್ನ ಸಮೀಪಕ್ಕೆ ಬರಹೇಳಬೇಕೆಂದು, ತನ್ನ ಸಮಾಚಾರವನ್ನು ಅವನಿಗೆ ತಿಳಿಸಲು ದೂತಿಯೊಬ್ಬಳನ್ನು ಅವಳಲ್ಲಿಗೆ ಕಳುಹಿಸುತ್ತಾಳೆ. ಕೃಷ್ಣನಾದರೋ ಆ ದೂತಿಯ ಸೌಂದರ್ಯವನ್ನು ಕಂಡು ಅವಳಲ್ಲಿಯೇ ಕಾಮಾಸಕ್ತನಾಗಿ, ಅವಳೊಡನೆ ಸರ್ವಭೋಗಗಳನ್ನೂ ಅನುಭವಿಸಿದನು. ಬಳಿಕ ಹಿಂತಿರುಗಿದ ಆ ದೂತಿಯ ದೇಹ ಮುಖಾದಿಗಳಲ್ಲಿದ್ದ ದಂತಕ್ಷತ ನಖಕ್ಷತಾದಿಗಳಿಂದ, ಅವಳೊಡನೆ ಕೃಷ್ಣನು ಸಂಭೋಗ ಸುಖವನ್ನನುಭವಿಸಿದನೆಂದು ತಿಳಿದು ಕೃಷ್ಣನನ್ನು ಕುರಿತು ಈ ರೀತಿ ಹೇಳುತ್ತಾಳೆ.

'ಎಲೈ ಕೃಷ್ಣನೇ ! ನೀನು ಬಾಲ್ಯದಲ್ಲಿದ್ದಾಗ ಒಮ್ಮೆ ಯಶೋದಾದೇವಿಯು ನಿನ್ನನ್ನು ಮಡಿಲಲ್ಲಿಟ್ಟುಕೊಂಡು, ತನ್ನ ಮೊಲೆತುಂಬ ತುಂಬಿಕೊಂಡಿರುವ ಹಾಲನ್ನು ವಾತ್ಸಲ್ಯಾತಿಶಯದಿಂದ ನಿನಗೆ ಉಣಿಸಬೇಕೆಂದಿರಲು, ಅವಳ ವಾತ್ಸಲ್ಯವನ್ನು ಲೆಕ್ಕಿಸದೆ, ಅವಳ ಮೊಲೆಹಾಲನ್ನು ಕುಡಿಯದೆ, ಅವಳ ಮಡಿಲಿನಿಂದ ಜಾರಿ, ಅಂಬೆಗಾಲಿಟ್ಟು ಕೊಂಡು ನಿನಗೆ ಮೋಸಮಾಡಿ ನಿನ್ನನ್ನು ಕೊಲ್ಲಬೇಕೆಂದು ಬಂದ ಪೂತನಿಯ ಬಳಿ ಹೋಗಿ ಅವಳ ವಿಷಮಿಶ್ರಿತವಾದ ಮೊಲೆಹಾಲನ್ನು ಭೋಗ್ಯವಾಗಿ "ರಸ್ಯಮಾಸೀತ್ ಜನಾರ್ದನಃ" ಎಂಬಂತೆ ಪಾನಮಾಡಿದೆ. ಆಗ ಕಂಡವರೆಲ್ಲರೂ ನಿನ್ನ ಈ ಚೇಷ್ಟೆಯನ್ನು ಕಂಡು ಈ ಬಾಲಕನಿಗೆ ಹುಚ್ಚು—ಶುದ್ಧವಾದ ರುಚಿಕರವಾದ ತಾಯಿಯ ಸ್ತನ್ಯವನ್ನು ಬಿಟ್ಟು, ವಿಷಮಿಶ್ರಿತವಾದ, ರಾಕ್ಷಸಿಯ ಸ್ತನ್ಯವನ್ನು ಬಹಳ ರಸ್ಯವಾಗಿ ಪಾನಮಾಡಿತು–ಎಂದು ಹೇಳಿದರಂತೆ. ನಿನ್ನನ್ನು ಆಗ ಹುಚ್ಚನೆಂದು ಹೇಳಿದುದು ಸತ್ಯವೆಂದೇ ತೋರುತ್ತೆ. ಏಕೆಂದರೆ, ನಿನ್ನಲ್ಲಿಯೇ ವಿಶೇಷವಾದ ಪ್ರೇಮದಿಂದ ಕೂಡಿದ ನಿನ್ನನ್ನೇ ಸ್ಮರಿಸುತ್ತಾ ಮನ್ಮಥ ಚೇಷ್ಟೆಗಳಿಗೊಳಗಾಗಿ, ಆದಷ್ಟು ಜಾಗ್ರತೆ ನಿನ್ನೊಡನೆ ಕೂಡಬೇಕೆಂದು, ನನ್ನ ದೂತಿಯ ಮುಖಾಂತರ ನಿನಗೆ ಹೇಳಿ ಕಳುಹಿಸಿದರೆ ಈ ಕೆಲಸಕ್ಕೆ ಇವರು ಅರ್ಹರು—ಎಂಬ ನಿಯಮವಿಲ್ಲದಂತೆ, ಆ ದೂತಿಯೊಡನೆಯೇ

ಸಂಭೋಗ ಸುಖವನ್ನು ಚೆನ್ನಾಗಿ ಅನುಭವಿಸಿದೆ. ಇದು ನಿನ್ನ ಮೇಲೆ ಹೇಳಿದ ಬಾಲ್ಯ ಚೇಷ್ಟಿತಗಳಿಗೆ ತಕ್ಕುದೇ ಆಗಿದೆಯಲ್ಲವೇ ?' ||೪||

**ಮಿನ್ನೊತ್ತ ನುಣ್ಣಿಡೈಯಾಳೈಕ್ಕೊಂಡು**
**ವೀಂಗಿರುಳ್ ವಾ ಯೆನ್ನ್ರನ್ ವೀದಿಯೂಡೇ**
**ಪೊನ್ನೊತ್ತವಾಡೈ ಕುಕ್ಕೂಡಲಿಟ್ಟು**
**ಪ್ಪೋಗಿನ್ರಪೋದುನಾನ್ ಕಂಡು ನಿನ್ರೇನ್**
**ಕಣ್ಣುಟ್ಟ್ರವಳೈ ನೀ ಕಣ್ಣಾಲಿಟ್ಟು**
**ಕೈವಿಳಿಕ್ಕಿನ್ರದುಂ ಕಂಡೇನಿನ್ರೇನ್**
**ಎನ್ನುಕ್ಕವಳೈ ವಿಟ್ಟಂಗುವಂದಾಯ್**
**ಇನ್ನಮಂಗೇನಡ ನಂಬಿ ನೀಯೇ ||೫||**

**ಮಿನ್ನೊತ್ತ**=ಮಿಂಚಿನ ಬಳ್ಳಿಯಂತೆ, **ನುಣ್**=ತೆಳ್ಳಗಿರುವ, **ಇಡೈ-ಯಾಳೈ**=ನಡುವುಳ್ಳ ಒಬ್ಬ ಪೆಣ್ಮಣಿಯನ್ನು, **ಕೊಂಡು**=ಆಲಿಂಗನ ಮಾಡಿ-ಕೊಂಡು, **ವೀಂಗಿರುಳ್‌ವಾಳ್** = ದಟ್ಟವಾದ ಕಗ್ಗತ್ತಲಲ್ಲಿ, **ಎನ್ರನ್‌ವೀದಿ-ಯೂಡೇ**=ನಮ್ಮ ಬೀದಿಯಲ್ಲಿಯೇ, **ಪೊನ್ನೊತ್ತ ವಾಡೈ**=ಪೀತಾಂಬರವನ್ನು, **ಕುಕ್ಕೂಡಲಿಟ್ಟು** = ಮುಸುಕುಹಾಕಿಕೊಂಡು, **ಪೋಕಿನ್ರಪೋದು** = ನೀನೂ ಅವಳೂ ಕೂಡಿಕೊಂಡು ಹೋಗುವಲ್ಲಿ, **ನಾನ್**=ನಿನ್ನನ್ನೇ ಪ್ರೇಮಿಸುವ ನಾನು, **ಕಂಡುನಿನ್ರೇನ್** = ನೋಡುತ್ತಲೇ ನಿಂತಿದ್ದೆನು; ಆಗಲೂ, **ನೀ** = ನೀನು, **ಕಣ್ಣುಟ್ಟ್ರವಳೈ**=ನಿನ್ನ ದೃಷ್ಟಿಗೆ ಬಿದ್ದ ಬೇರೊಬ್ಬಳನ್ನು, **ಕಣ್ಣಾಲಿಟ್ಟು**=ಅವಳು ಬೇರಾರನ್ನೂ ಅರಸಿಹೋಗದಂತೆ, ಕೇವಲ ನಿನ್ನ ಕಣ್ಣೋಟದಿಂದಲೇ ಅವಳ ಮನಸ್ಸನ್ನು ಸೆಳೆದು, **ಕೈ**=ಕೈಯಿಂದಲೇ, **ವಿಳಿಕ್ಕಿನ್ರದುಂ**=ಇಂತಹ ಸ್ಥಳಕ್ಕೆ ಏಕಾಂತದಲ್ಲಿ ನನ್ನೊಡನಿರಲು ಬಾ—ಎಂದು ಆಹ್ವಾನಿಸಿ ಕರೆದೊಯ್ದುದನ್ನೂ, **ಕಂಡೇನಿನ್ರೇನ್**=ನೋಡುತ್ತಲೇ ನಿಂತಿದ್ದೆನು. **ಅವಳೈವಿಟ್ಟು**=ಆ ಸ್ತ್ರೀಯನ್ನೂ ಬಿಟ್ಟು, **ಇಂಗು**=ಈ ನನ್ನಲ್ಲಿಗೆ, **ಎನ್ನುಕ್ಕುವಂದಾಯ್** = ಏಕೆ ಬಂದೆ? **ನಂಬಿ**=ಸಕಲ ಗುಣಪೂರ್ಣನೆ! **ನೀನೇ**=ನೀನಾಗಿಯೇ, **ಇನ್ನಂ**=ಇನ್ನು ಮುಂದೆಯೂ, **ಅಂಗೇನಡ**=ಅವಳಲ್ಲಿಗೇ ಹೋಗು. ||೫||

ಈ ದಶಕಕ್ಕೆ ಮುಖ್ಯವಾಗಿ ವಿವಕ್ಷಿತವಾದ ಅಂಶವು ಈ ಹಾಡಿನಲ್ಲಿ ಕಾಣುತ್ತದೆ. 'ಇಲ್ಲಿ ನೀನು ಬರಬೇಡ. ನಿನಗೆ ಅಭಿಮತರಾದವರೆಡೆಗೆ ನೀನು ಹೋಗು'—ಎಂದು ಹೇಳಿ ಗೋಪಕನ್ಯೆಯರು ಕೃಷ್ಣನನ್ನು ತಮ್ಮ ಮನೆಗೆ ಸೇರಿಸದೆ ಬಾಗಿಲು ಹಾಕಿ-ಕೊಂಡರು—ಎಂದು ತಿಳಿದುಬರುವ ಅರ್ಥವನ್ನು ಈ ದಶಕದ ಎಲ್ಲ ಹಾಡಿನ ಅರ್ಥಗಳಿಗೂ ಸೇರಿಸಿಕೊಳ್ಳಬೇಕು.

"ವಿದ್ಯುತ್ ಸನ್ನಿಭ ಮಧ್ಯಮಾಃ"—ಎಂದು ಹೇಳುವಂತೆ ಮಿಂಚಿನ ಬಳ್ಳಿಯಂತೆ ಅತಿ ಸೂಕ್ಷ್ಮವಾಗಿ ತೆಳ್ಳಗಿರುವ ನಡುವುಳ್ಳ ಒಬ್ಬ ಯುವತಿಯನ್ನು ಗಾಢಾಲಿಂಗನ ಮಾಡಿಕೊಂಡು, ಒಳ್ಳೆಯ ಮಧ್ಯರಾತ್ರಿಯಲ್ಲಿ, ಮಧ್ಯಾಹ್ನದಲ್ಲಿಯೇ ಮಾನಹೀನನಾದ ನೀನು, ಬೇರಾರಾದರೂ ನೋಡಿಯಾರೋ ಎಂಬಂತೆ, ನಿನ್ನ ಪೀತಾಂಬರದಿಂದ ಮುಸುಕುಹಾಕಿಕೊಂಡು–ನೀವಿಬ್ಬರೂ ನಮ್ಮ ಬೀದಿಯಲ್ಲಿಯೇ ಹೋಗುತ್ತಿದ್ದುದನ್ನು ನಾನು ಕಂಡೆ. ನನಗೆ ಹೊಟ್ಟೆಯುರಿಸಬೇಕೆಂದಲ್ಲವೇ ನೀನು ನಮ್ಮ ಬೀದಿಯಲ್ಲಿಯೇ ಹೋದುದು? ಆ ಭಾಗ್ಯಶಾಲಿನಿಯ ದೇಹವನ್ನು ಆಲಿಂಗಿಸಿಕೊಂಡಿದ್ದ ನಿನ್ನ ದೇಹದ ಸೌಂದರ್ಯವನ್ನು ಆಕೆಯೊಬ್ಬಳೇ ಕಾಣಬೇಕೆಂದಲ್ಲವೇ ನೀನು ಅವಳಿಂದೊಡಗೂಡಿ ಮುಸುಕುಹಾಕಿಕೊಂಡುದುದು? ಇದನ್ನು ಕಂಡ ನಾನು ವಿಸ್ಮಯದಿಂದಲೂ ಮಾತ್ಸರ್ಯದಿಂದಲೂ ಸ್ತಂಭಿತಳಾಗಿ ನೋಡುತ್ತಲೇ ನಿಂತಿದ್ದೆನು. ಅದೇ ಸಮಯ ದಲ್ಲಿ ನಿನ್ನ ದೃಷ್ಟಿಗೆ ಬಿದ್ದ ಮತ್ತೊಬ್ಬಳನ್ನು, ಅವಳ ಮನಸ್ಸು ಬೇರಾರನ್ನೂ ಅರಸಿ ಹೋಗದಂತೆ, ಅವಳ ಮೇಲೆ ದೃಷ್ಟಿ ಬೀರುತ್ತಾ, ಕೇವಲ ಕಣ್ಣೋಟದಿಂದಲೇ ಅವಳ ಮನಸ್ಸನ್ನು ಸೆಳೆದು, ಕೈಯಿಂದಲೇ ಏಕಾಂತ ಸುಖವನ್ನು ಪಡೆಯಲು ಇಂತಹ ಸ್ಥಳಕ್ಕೆ ಬಾ—ಎಂದು ಸೂಚಿಸುತ್ತಾ ಆಕೆಯನ್ನೂ ಕರೆದೊಯ್ದುದನ್ನು ನಾನು ಕಂಡೆನು. ಆ ಸ್ತ್ರೀಯನ್ನೂ ಬಿಟ್ಟು ನೀನು ಇಲ್ಲಿ ಏಕೆ ಬಂದೆ. ಸಕಲಗುಣ ಪೂರ್ಣನಾದ ನಿನಗೇ ಕಾಮಪೂರ್ತಿಯಾಗದಿದ್ದರೆ ನಿನ್ನ ಕಾಮವನ್ನು ನಾನು ತೃಪ್ತಿ-ಪಡಿಸಲಾರೆನು. ಯಾವಳ ಜೊತೆಯಲ್ಲಿ ಹೋಗಿದ್ದೆಯೋ ಅವಳಲ್ಲಿಗೇ ಈಗಲೂ ನೀನಾಗಿಯೇ ಹೊರಟುಹೋಗು. ನನ್ನಲ್ಲಿಗೆ ಬರಬೇಡ—ಎಂದು ಹೇಳುತ್ತಲೇ ಆ ಗೋಪಿಯು ತನ್ನ ಮನೆಯ ಬಾಗಿಲನ್ನು ಹಾಕಿಕೊಂಡಳು. ||೫||

ಮಲ್ಪೊರುತೋಳುಡೈ ವಾಸುದೇವಾ!
ವಲ್ವಿನೈಯೇನ್ ತುಯಿಲ್ ಕೊಂಡವಾರೇ
ಇಲ್ಲಿಯಿರವಿಡೈಯೇ ಮತ್ತಿನ್ನೈ
ಯಿನ್ನಣೈ ಮೇಲಿಟ್ಟ ಕನವು ನೀ ಪೋಯೆಯ್
ಅಟ್ಟಿಯಿರವುನೋರ್ ಪಿಟ್ಟಿನಾಳುಂ
ಅರಿವೈಯರೋಡುಮಣೈನ್ದುವನ್ದಾಯ್
ಎಟ್ಟುಕ್ಕುನೀಯೆನ್ಮರುಂಗಿಲ್ ವಂದಾಯ್
ಎಂಬೆರುಮಾನ್! ನೀ ಎಳುಂದರುಳೇ ||೬||

ಮಲ್=ಮಲ್ಲರ ಜೊತೆಯಲ್ಲಿ, ಪೊರು = ಯುದ್ಧಮಾಡಿ ಅವರನ್ನು ನಿರಸನಮಾಡಿದ, ತೋಳುಡೈ=ತೋಳುಗಳನ್ನು ಹೊಂದಿರುವ, ವಾಸುದೇವಾ!= ವಸುದೇವಪುತ್ರನೇ! ವಲ್‌ವಿನೈಯೇನ್ = ಮಹತ್ತರವಾದ ಪಾಪವನ್ನು ಮಾಡಿರುವ ನಾನು, ತುಯಿಲ್‌ಕೊಂಡವಾರೇ = ನಿದ್ರೆ ಮಾಡುತ್ತಿರಲು,

**ಯಿಟ್ರ್ರೈಯಿರವಿಡೈ**=ಆ ರಾತ್ರಿಯು, **ಏಮತ್ತು**=ಮಧ್ಯರ್ಯಾಮವದಲ್ಲಿ, **ಇನ್**=ಭೋಗ್ಯವಾಗಿರುವ, **ಅಣೈಮೇಲೆ**=ಹಾಸಿಗೆಯ ಮೇಲೆ, **ಎನ್ನೈ**=ನನ್ನನ್ನು, **ಇಟ್ಟು**=ಮಲಗಿಸಿ, **ನೀ**=ನೀನು, **ಅಕನ್ರುಪೋಯ್**=ನನ್ನಿಂದ ಅಗಲಿ ಹೋಗಿ, **ಅಟ್ರೈಯಿರವುಂ**=ಆ ರಾತ್ರಿಯೂ, **ಓರ್‌ಪಿಟ್ರೈನಾಳುಂ**=ಅದರ ಮಾರನೆಯ ದಿನವೂ, **ಅರಿವೈಯರೋಡುಮ್**=ಇತರ ಎಲ್ಲ ಯುವತಿಯರೊಡನೆ, **ಅಣೈನ್ದುವಂದಾಯ್**=ಕೂಡಿಕೊಂಡು ಆಲಿಂಗನಾದಿಗಳನ್ನು ಮಾಡಿಕೊಂಡು ಬಂದೆ. **ನೀ**=ಈ ರೀತಿಯಿರುವ ನೀನು, **ಎನ್‌ಮುರುಂಗಿಲ್** = ನನ್ನ ಸಮೀಪಕ್ಕೆ, **ಎಟ್ರುಕ್ಕುವಂದಾಯ್**=ಏಕೆ ಬಂದಿದ್ದೀಯೆ. **ಎಂಬೆರುಮಾನ್ ನೀ**=ನನ್ನ ಸ್ವಾಮಿಯಾದ ತಾವು, **ಎಳುನ್ದರುಳ್** = ಬೇರೊಂದು ಕಡೆಗೆ ದಯಮಾಡಿಸ ಬಹುದು. ||೬||

ಕೃಷ್ಣನು ಮತ್ತೊಬ್ಬ ಗೋಪಿಯ ಮನೆಯ ಬಾಗಿಲಿಗೆ ಹೋದಾಗ, ಆಕೆ ಅವನನ್ನು ಕುರಿತು ಹೇಳುತ್ತಾಳೆ—'ಮಲ್ಲರ ಜೊತೆಯಲ್ಲಿ ಯುದ್ಧಮಾಡಿ ಅವರನ್ನು ನಿರಸನಮಾಡಿದ ತೋಳುಗಳನ್ನು ಹೊಂದಿರುವ ವಾಸುದೇವನೇ ವಾಗ್ಯುದ್ಧದಲ್ಲಿ ನೀನು ನನ್ನನ್ನು ಜಯಿಸಲಾರೆ. ನೀನು ಮಾಡಿದ ಕೃತ್ಯವನ್ನು ಹೇಳುತ್ತೇನೆ ಕೇಳು. ನಿನ್ನೊಡನೆ ನಿತ್ಯಸಂಶ್ಲೇಷವನ್ನು ಪಡೆಯುವ ಭಾಗ್ಯವನ್ನು ಪಡೆದಿರುವವರು ಅನೇಕರಿದ್ದಾರೆ. ಆದರೆ ನಾನೇನು ಅಂತಹ ಬಲಿಷ್ಠವಾದ ಪಾಪವನ್ನು ಮಾಡಿದ್ದೇನೋ ?—ಎಂದೂ ನಿನ್ನ ವಿರಹವ್ಯಥೆಯಲ್ಲಿಯೇ ತೊಳಲುತ್ತಿದ್ದೇನೆ. ಮೊನ್ನೆ ಕಳೆದ ರಾತ್ರಿಯಂದು ನಿನ್ನೊಡನೆ ನಾನು ಏಕಶಯ್ಯೆಯಲ್ಲಿ ಮಲಗಿರಲು, ಮಧ್ಯರಾತ್ರಿಯಲ್ಲಿ ನನಗೆ ಒಳ್ಳೆಯ ಗಾಢನಿದ್ರೆ ಬಂದಿರಲಾಗಿ, ನನ್ನೊಬ್ಬಳನ್ನೇ ಹಾಸಿಗೆಯಲ್ಲಿ ಮಲಗಿಸಿ, ನನ್ನನ್ನಗಲಿ ಹೋದ ನೀನು ಅಂದು ರಾತ್ರಿಯೂ, ಅದರ ಮಾರನೆಯ ದಿನವೂ ಅನೇಕ ಪೆಣ್ಮಣಿಯರೊಡನೆ ಕೂಡಿಕೊಂಡು, ಅವರನ್ನು ಆಲಿಂಗನ ಮಾಡಿಕೊಳ್ಳುವುದೇ ಮೊದಲಾದ ಮನ್ಮಥ ಕ್ರೀಡೆಯನ್ನು ಅವರೊಡನಾಡುತ್ತಾ ನನ್ನ ಮುಂದೆಯೇ ಸುಳಿದಾಡುತ್ತಾ, ನನ್ನನ್ನು ಮಾತ್ರ ನಿನ್ನ ವಿಶ್ಲೇಷಕ್ಕೆ ಒಳಗುಮಾಡಿದೆ. ಈ ರೀತಿಯಾದ ನೀನು ಈಗ ನನ್ನ ಮುಂದೆ ಏಕೆ ಬಂದಿದ್ದೀಯೇ ? ವಿಪ್ರಲಂಭ ಶೃಂಗಾರರಸವನ್ನು ನನ್ನೊಡನೆ ಅನುಭವಿಸಲು ಬಂದೆಯಾ ? ಈಗ ನಾನು ಬಹಳ ಜಾಗರೂಕಳಾಗಿದ್ದೇನೆ. ಇನ್ನು ಮುಂದೆ ನಿನ್ನ ಮೋಸಕ್ಕೆ ನಾನಾಳಾಗುವುದಿಲ್ಲ. ನಿನ್ನ ವಿಪ್ರಲಂಭ ವೈದಗ್ಧ್ಯವು ಎಲ್ಲಿ ಫಲಿಸುತ್ತದೆಯೋ ಅಲ್ಲಿಗೆ ಹುಡುಕಿಕೊಂಡು ಹೋಗು. ||೬||

**ಪೈಯರವಿನಣೈಪ್ಪಳ್ಳಿಯಿನಾಯ್ !**
**ಪಂಡೈಯೋಮಲ್ಲೋಮ್ ನಾಮ್**
**ನೀಯುಗಕ್ಕುಮ್ ನಲ್ಲವರೊಡುಮ್**
**ಕಣ್ಣಿನಾರುಮಲ್ಲೋಂ ವೈಗಿಯುಂ ಶೇರಿವರವೊಳಿನೀ**

ಶೆಯ್ಯ್ಯವುಡ್ಯೈಯುಂ ತಿರುಮುಗಮುಂ
ಶೆಂಗನಿವಾಯುಂ ಕುಳಲುಂ ಕಂಡು
ಪೊಯ್ಯ್ಯೊರುನಾಟ್ಪಟ್ಟದೇಯುಮ್ಮೆಯುಂ
ಪುಳ್ಳುವಂಪೇಶಾದೇ ಪೋಗುನಂಬೀ ||೭||

**ಪೈ**=ಪಟ್ಟವನ್ನು ಹೊಂದಿರುವ, **ಅರವು** = ಆದಿಶೇಷನೆಂಬ ಸರ್ಪದ, **ಇನ್ ಅಣೈ**=ಸುಂದರವಾದ ಹಾಸಿಗೆಯನ್ನು, **ಪಳ್ಳಿಯಿನಾಯ್**=ಶಯ್ಯೆಯಾಗಿ ಹೊಂದಿರುವವನೇ! **ನಂಬೀ** = ಪೂರ್ಣನಾದವನೇ! **ನಾಮ್** = ನಾವುಗಳು (ನಿನ್ನ ಮಾತಿಗೆ ಕಟ್ಟುಬೀಳಲು), **ಪಣ್ಡೈಯಲ್ಲೋಮ್** = ಹಿಂದಿನಂತಿರುವ ಗೋಪಿಕೆಯರಲ್ಲ. **ನೀಉಕಕ್ಕುಂ**=ನೀನು ಆಸೆಪಡುವಂತೆ, **ಮೈ**=ಸುಂದರವಾದ ದೇಹವನ್ನು ಹೊಂದಿ, **ಅರಿ**=ಜಿಂಕೆಯ ಕಣ್ಣಿನಂತಿರುವ, **ಒಣ್**=ಒಳ್ಳೆಯ ತೇಜಸ್ಸಿನಿಂದ ಕೂಡಿದ, **ಕಣ್ಣಿನಾರುಮಲ್ಲೋಮ್**=ಕಣ್ಗಳನ್ನು ಹೊಂದಿದವರೂ ಅಲ್ಲ. **ನೀ**=ನೀನು, **ವೈಕಿ**=ವಿಳಂಬದಿಂದ, **ಎನ್ ಶೆರಿ**=ನನ್ನ ಸಮೀಪದಲ್ಲಿ, **ವರವ್ವೊಳ್**=ಬರಬೇಡ. (ಬಂದುದು ಸಾಕು) **ಶೆಯ್ಯ**=ಸುಂದರವಾದ, **ಉಡೈಯುಮ್**=ತಲೆಯ ಪೇಟವನ್ನೂ, **ತಿರುಮುಖಮುಂ**=ಮುಖಮಂಡಲವನ್ನೂ, **ಶೆಮ್** = ಸುಂದರವಾದ, **ಕನಿ** = ಬಿಂಬಫಲದಂತಿರುವ, (ಅಮೃತದಂತಿರುವ) **ವಾಯುಂ**=ಬಾಯನ್ನೂ, **ಕುಳಲುಂ**=ಕೊಳಲನ್ನೂದುವುದನ್ನೂ, **ಕಂಡು**= ನೋಡಿ, **ಪೊಯ್**=ನಿನ್ನ ಸುಳ್ಳು ಮಾತುಗಳನ್ನು ಸತ್ಯವೆಂದು ನಂಬಿ, **ಒರುನಾಳ್ ಪಟ್ಟದೇ**=ಒಂದು ದಿನ ಅನುಭವಿಸಿದ ಅನುಭವವೇ, **ಅಮ್ಮೆಯುಂ**= ಸಾಕು. **ಪುಳ್ಳುವಂ** = ಕೃತ್ರಿಮವಾದ ಮೋಸಗಾರತನದ ಮಾತುಗಳನ್ನು, **ಪೇಶಾದೇ**=ಆಡದಂತೆ, **ಪೋಕು**=ಈ ಜಾಗವನ್ನು ಬಿಟ್ಟು ಹೋಗು. ||೭||

'ಎರಡು ನಾಲಿಗೆಯನ್ನು ಹೊಂದಿರುವ ಸರ್ಪದ ಮೇಲೆಯೇ ಮಲಗಿ ಅದರ ಸಂಸರ್ಗದಿಂದ ಎರಡು ನಾಲಿಗೆಯುಳ್ಳ, ಪರಿಪೂರ್ಣನಾದ ಶ್ರೀಕೃಷ್ಣನೇ! ನಿನ್ನಮಾತಿಗೆ ಕಟ್ಟುಬೀಳಲು, ನಾವು ಹಿಂದಿನಂತಿರುವ ಗೋಪಿಕೆಯರಲ್ಲ. ನೀನು ಆಸೆಪಡುವಂತೆ ನಾವು ಸುಂದರವಾದ ದೇಹವನ್ನೂ, ಒಳ್ಳೆಯ ತೇಜಸ್ಸಿನಿಂದ ಕೂಡಿದ ಜಿಂಕೆಯ ಕಣ್ಣಿನಂತಿರುವ ಸುಂದರವಾದ ಕಣ್ಗಳನ್ನೂ ಹೊಂದಿದವರೂ ಅಲ್ಲ. ನೀನು ಮೆಲ್ಲ ಮೆಲ್ಲಗೆ ಅಡಿಯಿಡುತ್ತಾ ನನ್ನ ಹತ್ತಿರ ಬರಬೇಡ. ಬಂದುದು ಸಾಕು. ಸುಂದರವಾದ ತಲೆಯ ಪೇಟವನ್ನೂ, ಮುಖಾರವಿಂದವನ್ನೂ ಬಿಂಬಫಲದಂತೆಯೂ, ಅಮೃತ ಸೂಸುವ ಬಾಯನ್ನೂ ಕೊಳಲನ್ನೂದುವುದನ್ನೂ ಕಂಡು, ನಿನ್ನ ಸುಳ್ಳು ಮಾತು-ಗಳನ್ನು ಸತ್ಯವೆಂದು ನಂಬಿ, ಒಂದು ದಿನ ನಿನ್ನೊಡನನುಭವಿಸಿದ ಸುಖವೇ ಸಾಕು. ಕೃತ್ರಿಮವಾದ ಮೋಸಗಾರತನದ ಮಾತುಗಳನ್ನಾಡದಂತೆ ಈ ಜಾಗವನ್ನು ಬಿಟ್ಟು ಹೊರಡು.' ||೭||

ಎನ್ನೈವರುಗವೆನಕ್ಕುರಿತ್ತಿಟ್ಟಿನ
ಮುಲರ್ ಮುಲ್ಲೈಯಿನ್ ಪನ್ದರ್ ನೀಳಲ್
ಮುನ್ನಿಯವಳ್ಳೈಪ್ಪುಣರಪ್ಪುಕ್ಕು
ಮಟ್ರೆನ್ನೈಕ್ಕಂಡುಳರಾನೆಕಿಳ್ನ್ದಾಯರ್
ಪೊನ್ನಿರವಾಡೈಯೈಕ್ಕೈಯ್ಯಿಲ್ ತಾಂಗಿ
ಪೊಯ್ಯಚ್ಚಂಗಾಟ್ಟಿನೀಪ್ಪೋದಿ ಏಲುಂ
ಇನ್ನಮೆನ್‌ಕ್ಕೈಯುಗೆತ್ತೀಂಗೊರುನಾಳ್
ವರದಿಯೋಲೆನ್ ಶಿನಂ ತೀರ್ವನ್ ನಾನೇ ||೮||

ಎನ್ನೈ = ನನ್ನನ್ನು, **ವರುಕವೆನ** = ಈ ಸ್ಥಳಕ್ಕೆ ಬರಬೇಕೆಂದು, **ಕುರಿತ್ತಿಟ್ಟು** = ಸಂಕೇತ ಸ್ಥಳವನ್ನು ಸೂಚಿಸಿ, **ಇನಮುಲರ್** = ಹೂವುಗಳು ಸೇರಿದ ಹಾಗೆ ಹರಡಿಕೊಂಡಿರುವ, **ಮುಲ್ಲೈಯಿನ್ ಪನ್ದರ್ನೀಳಲ್** = ಮೊಲ್ಲೆ ಹೂವಿನ ಚಪ್ಪರದ ನೆರಳಿನಲ್ಲಿ, **ಮುನ್ನಿಯವಳ್ಳೈ** = ಬಹಳ ಕಾಲದಿಂದ ನಿನ್ನನ್ನೇ ಎದಿರುನೋಡುತ್ತಾ ನಿಂತಿದ್ದವಳೊಡನೆ, **ಪುಣರಪ್ಪುಕ್ಕು** = ಆಲಿಂಗನ ಮಾಡಿಕೊಳ್ಳಲು ತೊಡಗಿ, **ಎನ್ನೈಕಂಡು** = ನನ್ನನ್ನು ಕಂಡು, **ಉಳರಾ** = ಕಲಕಿ ಹೋದ ಮನಸ್ಸುಳ್ಳವನಾಗಿ, **ನೆಗಿಳ್ನ್ದಾಯರ್** = ಪಕ್ಕಕ್ಕೆ ಹೋದೆ. **ಪೊನ್ನಿರ-ವಾಡೈಯೈ** = ಪೀತಾಂಬರವನ್ನು, **ಕೈಯಿಲ್** = ಕೈಯಲ್ಲಿ, **ತಾಂಗಿ** = ಹಿಡಿದು-ಕೊಂಡು, **ಪೊಯರ್** = ಹೇಳಿದ ಸುಳ್ಳಿಗೆ, **ಅಚ್ಚಮ್‌ಕಾಟ್ಟಿ** = ಭಯಪಟ್ಟವನಂತೆ ನಟಿಸಿ, **ನೀಪ್ಪೋದಿಯೋಲುಂ** = ಅಂದು ನೀನು ಹೋದುದೇ ಆದರೂ, **ಇನ್ನಂ** = ಇನ್ನು ಮುಂದೆ, **ಈಂಗು** = ಈ ಸ್ಥಳದಲ್ಲಿ, **ಎನ್‌ಕ್ಕೈಯುಕೆತ್ತು** = ನನ್ನೊಡನೆ, **ಒರುನಾಳ್** = ಒಂದು ದಿನವಾದರೂ, **ವರುದಿಯೋಲ್** = ಸಂಶ್ಲೇಷವನ್ನು ಪಡೆಯುವುದಕ್ಕೆ ಬರುವುದೇ ಆದರೂ, ಎನ್‌**ಶಿನಂ** = ನನ್ನ ಕೋಪವನ್ನು, **ನಾನ್** = ನಾನು, **ತೀರ್‌ವೇನ್** = ತೀರಿಸಿಕೊಳ್ಳುತ್ತೇನೆ. ||೮||

'ಒಂದು ಸಂಕೇತ ಸ್ಥಲಕ್ಕೆ ನನ್ನನ್ನು ಬರಹೇಳಿ, ದಟ್ಟವಾಗಿ ಕೂಡಿಕೊಂಡು ಹರಡಿಕೊಂಡಿರುವ ಮಲ್ಲೈಹೂವಿನ ಚಪ್ಪರದ ನೆರಳಲ್ಲಿ, ನಿನ್ನನ್ನೇ ಎದಿರುನೋಡುತ್ತಾ ಬಹಳ ಕಾಲದಿಂದ ಕಾಯುತ್ತಿದ್ದ ಮತ್ತೊಬ್ಬ ಪೆಣ್ಮಣಿಯೊಡನೆ, ಆಲಿಂಗನ ಸುಖವನ್ನು ಅನುಭವಿಸಲು ಉದ್ಯುಕ್ತನಾಗಿರಲು, ನನ್ನನ್ನು ಕಂಡು, ಮರೆಯಲ್ಲಿ ನಿಂತು ಪೀತಾಂಬರವನ್ನು ಕೈಯಲ್ಲಿ ಹಿಡಿದುಕೊಂಡು, ನನಗೆ ಭಯಪಟ್ಟು ಹೋಗು-ವವನಂತೆ ನಟಿಸಿದೆ. ಆ ನೀನು ಇಂದು ಯಾವ ಮುಖದಿಂದ ಇಲ್ಲಿ ಬಂದೆ ತಿಳಿಯದು. ಮತ್ತೆಂದಾದರೂ ನನ್ನೊಡನೆ ಸಂಶ್ಲೇಷಕ್ಕೋಸ್ಕರ ಬಂದರೆ, ನಿನಗೆ ಮುಖಕೊಟ್ಟು ಮಾತಾಡದೇ, ನನ್ನ ಕೋಪವನ್ನು ತೀರಿಸಿಕೊಳ್ಳುತ್ತೇನೆ. ಎಚ್ಚರಿಕೆ! ಇಲ್ಲಿಂದ ಹೊರಟುಹೋಗು.' ||೮||

ಮಂಗಲನಲ್ ವನಮಾಲೈಮಾರ್ವಿಲಿಲಂಗ
ಮಯಿಲ್ ತಳೈಪ್ಪೀಲಿ ಶೂಡಿ
ಪೊಂಗಿಳವಾಡೈಯರೈಯಿಲ್ ಶಾತ್ತಿ
ಪೂಂಗೊತ್ತುಕ್ಕಾದಿಲ್ ಪುಣರಪ್ಪೆಯ್‌ದು
ಕೊಂಗುನರುಂಕುಳಲಾರ್‌ಗಳೋಡು
ಕುಳೈನ್ದು ಕುಳಲಿನಿತೂದಿವಂದಾಯ್
ಎಂಗಳುಕ್ಕೇ ಒರುನಾಳ್‌ವಂದೂದ
ವುನ್ ಕುಳಲಿನ್ನಿಶೈ ಪೋದರಾದೇ ॥೯॥

**ಮಂಗಳಂ**=ಮಂಗಳಸ್ವರೂಪವಾದ, **ನಲ್**=ದರ್ಶನೀಯವಾದ, **ವನಮಾಲೈ**=ವನಮಾಲೆಯು, **ಮಾರ್‌ಬಿಲ್**=ನಿನ್ನ ವಕ್ಷಸ್ಥಲದಲ್ಲಿ, **ಇಲಂಗ**=ಪ್ರಕಾಶಿಸುತ್ತಿರಲು, **ತಳೈ**=ಹರಡಿರುವ, **ಮಯಿಲ್‌ಪೀಲ್**=ನವಿಲುಗರಿಯನ್ನು ಶೂಡಿ=ತಲೆಯಮೇಲೆ ಧರಿಸಿಕೊಂಡು, **ಪೊಂಗು ಇಳವಾಡೈ**=ಅಧಿಕವಾದ ಸೌಂದರ್ಯದಿಂದ ಕೂಡಿದ ಪೀತಾಂಬರವನ್ನು, **ಅರೈಯಿಲ್**=ನಡುವಿನಲ್ಲಿ, **ಶಾತ್ತಿ**=ಧರಿಸಿಕೊಂಡು, **ಕಾದಿಲ್**=ಕಿವಿಯಲ್ಲಿ, **ಪೂಂಕೊತ್ತು**=ಹೂವಿನ ಗುಚ್ಛವನ್ನು, **ಪುಣರಪ್ಪೆಯ್ದು**=ಇಳಿಬಿಟ್ಟುಕೊಂಡು, **ಕೊಂಗು**=ಮಧುವನ್ನು ಸ್ರವಿಸುವ ಪುಷ್ಪಗಳಿಂದ ಅಲಂಕರಿಸಲ್ಪಟ್ಟು, **ನರು**=ಒಳ್ಳೆಯ ಪರಿಮಳದಿಂದ ತುಂಬಿರುವ, **ಕುಳಲಾರ್‌ಕಳೋಡು**=ಕುಂತಲಗಳಿಂದ ಶೋಭಿತರಾದ ಸ್ತ್ರೀಯರೊಡನೆ, **ಕುಳೈನ್ದು**=ಸಂಶ್ಲೇಷಿಸಿ (ಅದರಿಂದಾದ ಹರ್ಷದಿಂದ) **ಇನಿದು**=ಇಂಪಾಗಿ, **ಕುಳಲ್**=ನಿನ್ನ ಕೊಳಲನ್ನು, **ಊದಿವಂದಾಯ್**=ಊದಿಕೊಂಡೇ ಬಂದೆ. **ಎಂಗಳುಕ್ಕು**=ನಮ್ಮ ವಿಷಯದಲ್ಲಿ, **ಒರುನಾಳ್**=ಒಂದು ದಿನ, **ವನ್ದು ಊದ** = ಬಂದು ಊದಲು, **ಉನ್** = ನಿನ್ನ, **ಕುಳಲಿನ್**=ಕೊಳಲಿನ, **ಇಶೈ**=ಧ್ವನಿಯಾದರೋ, **ಪೋದರಾದು**=ಹೊರಡುವುದಿಲ್ಲವೆಂದು ತೋರುತ್ತಿ. ॥೯॥

ಮಂಗಳಾವಹವಾದ ವನಮಾಲೈಯನ್ನು ವಕ್ಷಸ್ಥಲದಲ್ಲಿ ಧರಿಸಿಕೊಂಡು, ಅಗಲವಾಗಿ ಹರಡಿಕೊಂಡಿರುವ ಸುಂದರವಾದ ನವಿಲುಗರಿಯನ್ನು ತಲೆಯಲ್ಲಿಮುಡಿದು ಕೊಂಡು, ಸುಂದರವಾದ ಪೀತಾಂಬರವೊಂದನ್ನು ಸೊಂಟದಲ್ಲಿ ಕಟ್ಟಿಕೊಂಡು, ಒಂದು ಹೂವಿನ ಗೊಂಚಲನ್ನು ಕರ್ಣಾಭರಣದಂತೆ ಕಿವಿಯಲ್ಲಿ ಜೋಲಾಡುತ್ತಿರುವಂತೆ ಧರಿಸಿ, ಮಧುವನ್ನು ಸ್ರವಿಸುತ್ತಿರುವ ಪುಷ್ಪಗಳಿಂದ ಅಲಂಕೃತರಾಗಿ ಪರಿಮಳದಿಂದ ಪೂರಿತವಾದ ಕುಂತಲಗಳಿಂದ ಶೋಭಿತರಾದ ಕೆಲ ಭಾಗ್ಯವಂತೆಯರಾದ ಪೆಣ್ಮಣಿಗಳೊಡನೆ ಸಂಶ್ಲೇಷಿಸಿ, ಅದರಿಂದಾದ ಹರ್ಷದಿಂದ, ಅವರೊಡನೆ ಇಂಪಾಗಿ ನಿನ್ನ

ಕೊಳಲನ್ನೂದುತ್ತಾ ಬಂದೆಯಲ್ಲಾ, ನಮ್ಮ ವಿಷಯದಲ್ಲಿ ಒಂದು ದಿನವಾದರೂ ಕೊಳಲನ್ನೂದಲು, ಅದರ ಧ್ವನಿಯೇ ಹೊರಬರುವುದಿಲ್ಲವೆಂದು ತೋರುತ್ತೆಯಲ್ಲವೇ ?' ||೯||

**ಅಲ್ಲಿಮಲರ್ ತಿರುಮಂಗೈ ಕೇಳ್ವನ್ತನ್ನೈ**
**ನಯನ್ದಿಳವಾಯ್ಚ್ಚಿಮಾರ್ಕಳ್**
**ಎಲ್ಲಿಪ್ಪೊಳುದಿನಿಲೇಮತ್ತೂಡಿ**
**ಎಳ್ಕಿಯುರೈತ್ತ ವುರೈಯದನೈ**
**ಕೊಲ್ಲಿನಗರ್ಕಿರೈ ಕೂಡರ್ ಕೋಮಾನ್**
**ಕುಲಶೇಖರ ನಿನ್ನಿಶೈಯಿನ್ಮೇವಿ**
**ಶೊಲ್ಲಿಯವಿನ್ತಮಿಳ್ ಮಾಲೈಪತ್ತುಂ**
**ಶೊಲ್ಲವಲ್ಲಾರ್ಕಿಲ್ಲೈ ತುನ್ಬಂದಾನೇ ||೧೦||**

ಇಳವಾಯ್ಚ್ಚಿಮಾರ್ಕಳ್=ನವಯುವತಿಯರಾದ ಗೋಪಬಾಲಿಕೆಯರು **ಅಲ್ಲಿಮಲರ್**=ಕೆಂದಾವರೆಯನ್ನು ಅವತಾರ ಸ್ಥಳವಾಗಿ ಹೊಂದಿದ, **ತಿರುಮಂಗೈ**=ಮಹಾಲಕ್ಷ್ಮಿದೇವಿಗೆ, **ಕೇಳ್ವನ್ತನ್ನೈ**=ವಲ್ಲಭನಾದ ಕೃಷ್ಣನನ್ನು, **ನಯನ್ದು**=ಆಸೆಪಟ್ಟು, **ಎಲ್ಲಿ**=ರಾತ್ರಿಯ, **ಏಮಪ್ಪೊಳುದಿಲ್**=ಮಧ್ಯಮಝಾವದಲ್ಲಿ, **ಊಡಿ** = ಕಾಮಪೀಡಿತರಾಗಿ, **ಎಳ್ಕಿ** = ಕಾಮಾಸಕ್ತರಾಗಿ, **ಉರೈತ್ತ** = ಹೇಳಿದ, **ಉರೈಯದನೈ** = ಪದ್ಯಗಳನ್ನು, **ಕೊಲ್ಲಿನಗರ್ಕು**= 'ಕೊಲ್ಲಿ' ಎಂಬ ನಗರಕ್ಕೆ, **ಇರೈ**=ಪ್ರಧಾನನಾಗಿ, **ಕೂಡಲ್**=ಮಧುರೈಗೆ, **ಕೋಮಾನ್**=ರಾಜನಾದ, **ಕುಲಶೇಖರನ್**=ಕುಲಶೇಖರರು, **ಇನ್**= ಇಂಪಾಗಿ, **ಇಶೈಯಿಲ್ಮೇವಿ**=ರಾಗಗಳಿಂದ ಕೂಡಿದ, **ಶೊಲ್ಲಿಯ**=ರಚಿಸಿಕೊಟ್ಟಿರುವ, **ಇನ್** = ಪರಮಭೋಗ್ಯವಾದ, **ತಮಿಳ್ಮಾಲೈ** = ತಮಿಳಿನ ಪದ್ಯಮಾಲಿಕೆಯ ರೂಪವಾದ, **ಪತ್ತುಂ**=ಈ ಹತ್ತು ಹಾಡುಗಳನ್ನೂ, **ಶೊಲ್ಲವಲ್ಲಾರ್ಕು**=ಅನುಸಂಧಾನ ಮಾಡುವವರಿಗೆ, **ತುನ್ಬಮಿಲ್ಲೈ**=ಭಗವದನುಭವ ವಿರೋಧವಾದ ದುಃಖವು ಬರುವುದಿಲ್ಲ. ||೧೦||

'ಕೇಸರಾಲಂಕೃತವಾದ ತಾವರೆಯ ಹೂವಿನಲ್ಲಿ ಅವತರಿಸಿದ ಮಹಾಲಕ್ಷ್ಮಿಯ ವಲ್ಲಭನಾದ ಕೃಷ್ಣನ ಸಂಶ್ಲೇಷವನ್ನು ಪಡೆಯಬೇಕೆಂದು ಆಸೆಪಟ್ಟ ಗೋಪಕನ್ನಿಕೆಯರು ಪ್ರಣಯರೋಷದಿಂದ ಹೇಳಿದ ಮಾತುಗಳನ್ನೇ ಅನುಕರಣೆ ಮಾಡುತ್ತಾ, ಕುಲಶೇಖರಾಳ್ವಾರ್ರವರು ರಚಿಸಿಕೊಟ್ಟ ಈ ಹತ್ತು ಪದ್ಯಗಳಿಂದ ಕೂಡಿದ ಪದ್ಯಮಾಲಿಕೆಯನ್ನು ರಾಗವಾಗಿ ಹಾಡಬಲ್ಲವರಿಗೆ ಸಾಂಸಾರಿಕ ದುಃಖವಿರುವುದಿಲ್ಲ' ಎಂದು—ಈ ದಶಕಕ್ಕೆ ಫಲಶ್ರುತಿಯನ್ನು ಹಾಡಿ, ಆಳ್ವಾರರು ಈ ದಶಕವನ್ನು ಮುಗಿಸಿದ್ದಾರೆ. ||೧೦||

# ಪೆರುಮಾಳ್ ತಿರುಮೊಳಿ — ಏಳನೆಯ ದಶಕ

ಶ್ರೀಕೃಷ್ಣನನ್ನು ಮಗನಾಗಿ ಹಡೆದರೂ, ಅವನ ಬಾಲಲೀಲೆಗಳನ್ನು ನೋಡಿ ಅನುಭವಿಸದಿದ್ದು, ಅದನ್ನು ಕಾಣಬೇಕೆಂದು ಪ್ರಲಪಿಸಿದ ದೇವಕಿಯ ಭಾವವನ್ನೇ ಹೊಂದಿದವರಾಗಿ ಆಳ್ವಾರರು ಈ ಹತ್ತು ಹಾಡುಗಳನ್ನು ಹಾಡಿದ್ದಾರೆ.

**ಆಲೈನೀಳ್ ಕರುಂಬನ್ನವನ್ ತಾಲೋ !**
**ಅಂಬುಯತ್ತಡಂ ಕಣ್ಣಿನನ್ ತಾಲೋ !**
**ವೇಲೈನೀರ್ ನಿರತ್ತನ್ನವನ್ ತಾಲೋ !**
**ವೇಳಪ್ಪೋದಕಮನ್ನವನ್ ತಾಲೋ !**
**ಏಲವಾರ್ ಕುಳಲೆನ್ಮಗನ್ ತಾಲೋ !**
**ಎನ್ರೆನ್ರುನ್ನೈಯೆನ್ ವಾಯಿಡೈ ನಿರೈಯ**
**ತಾಲೊಲಿತ್ತಿಡುಂದಿರುವಿನ್ನೈಯಿಲ್ಲಾ**
**ತ್ತಾಯರಿಲ್ ಕಡೈಯಾಯಿನತಾಯೇ ||೧||**

**ನೀಳ್**=ಉದ್ದವಾಗಿಯೂ, ರಸಭರಿತವಾಗಿಯೂ ಬೆಳೆದಿರುವ, **ಆಲೈ**= ಕಬ್ಬಿನ ರಸವನ್ನು ತೆಗೆಯುವ 'ಆಲೈ' ಎಂಬ ಯಂತ್ರದಲ್ಲಿಟ್ಟ, **ಕರುಂಬನ್ನವನ್**= ಕಬ್ಬನ್ನು ಹೋಲುವವನೇ ! **ತಾಲೋ**=ಲಾಲಿ, **ಅಂಬುಯಮ್**=ಕಮಲದ ಹೂವಿನ ದಳಗಳನ್ನು ಹೋಲುವ, **ತಡ**=ವಿಶಾಲವಾದ, **ಕಣ್ಣಿನನ್**=ಕಣ್ಣು-ಗಳನ್ನು ಹೊಂದಿರುವವನೇ, **ತಾಲೋ**=ಲಾಲಿ, **ವೇಲೈನೀರ್**=ಸಮುದ್ರದ ನೀರಿನಂತೆ, **ನಿರತ್ತನ್ನವನ್**=ದೇಹಕಾಂತಿಯುಳ್ಳವನೇ, **ತಾಲೋ**=**ಲಾಲಿ**, **ವೇಳಪ್ಪೋದಕಮನ್ನವನ್**=ಎಳೆಯ ಆನೆಯನ್ನು ಹೋಲುವ ಚರಿತಗಳುಳ್ಳವನೇ, **ತಾಲೋ** = **ಲಾಲಿ**, **ಏಲಮ್** = ಪರಿಮಳಗೊಂಡ, **ವಾರ್** = ಉದ್ದವಾದ, **ಕುಳಲ್** = ಮುಡಿಯಿಂದ ಕೂಡಿದ, **ಎನ್‌ಮಗನ್** = ನನ್ನ ಮಗುವೇ ! **ತಾಲೋ**=ಲಾಲಿ, **ಎನ್ರೆನ್ರು**=ಎಂದೆಂದೂ ಈ ರೀತಿ ಹಲವು ಬಾರಿ ಹೇಳುತ್ತಾ, **ಉನ್ನೈ**=ನಿನ್ನನ್ನು, **ಎನ್‌ವಾಯಿಡೈ**=ನನ್ನ ಬಾಯಿಂದ, **ನಿರೈಯ**=ತುಂಬು-ವಂತೆ, **ತಾಲೊಲಿತ್ತಿಡುಮ್**=ಲಾಲಿಯನ್ನು ಹಾಡುವ, **ತಿರುವಿನ್ನೈಯಿಲ್ಲಾ**= ಸಂಪತ್ತಿಲ್ಲದ, **ತಾಯರಿಲ್**=ತಾಯಂದಿರಲ್ಲಿ, **ಕಡೈಯಾಯಿನ**=ಬಹಳ ಕಡೈ-ಯವಳಾಗಿರುವ, **ತಾಯೇ**=ತಾಯಿಯೇ ನಾನಾಗಿದ್ದೇನೆ. ||೧||

ಚೆನ್ನಾಗಿ ಬಲಿತಿರುವ ನೀಳವಾಗಿಯೂ, ದಪ್ಪನಾಗಿಯೂ ಇದ್ದು ರಸಭರಿತವಾದ ಕಬ್ಬನ್ನು 'ಆಲೈ' ಯಂತ್ರದಲ್ಲಿಟ್ಟು ಹಿಂಡಿದಾಗ ಅದು ಹೇಗೆ ಮಧುರವಾದ ರಸಯುಕ್ತವಾದ ಕಬ್ಬಿನಹಾಲನ್ನು ಸ್ರವಿಸುತ್ತದೆಯೋ, ಹಾಗೆಯೇ ಶ್ರೀಕೃಷ್ಣ-

ಕಿಶೋರನನ್ನೂ ಪ್ರೇಮದಿಂದ ವಾತ್ಸಲ್ಯದಿಂದ ಹಿಸುಕಿದಾಗ 'ರಸೋ ವೈ ಸಃ'— ಎಂದು ಉಪನಿಷತ್ಪ್ರತಿಪಾದ್ಯನಾದ ಆ ಕೃಷ್ಣನ ಮಾಧುರ್ಯವೂ ನಮ್ಮ ಅನುಭವಕ್ಕೆ ಬರುತ್ತದೆ. ಆದುದರಿಂದಲೇ ಕುಲಶೇಖರಾಳ್ವಾರರೂ ಇಲ್ಲಿ ಆಲೈಯಂತ್ರದಲ್ಲಿಟ್ಟ ಬಲಿತಿರುವ ಕಬ್ಬಿಗೆ ಕೃಷ್ಣನನ್ನು ಹೋಲಿಸಿದ್ದಾರೆ. "ಕಪ್ಯಾಸಂ ಪುಂಡರೀಕಮೇವ-ಮಕ್ಷಿಣೀ"— ಎಂದು ಹೇಳಿರುವಂತೆ ಕಮಲದ ದಳದಂತಿರುವ ಕಣ್ಣುಗಳುಳ್ಳವನು ಶ್ರೀಕೃಷ್ಣ. ಕರುಣೆಯ ಕಡಲಿನಂತಿರುವ ಪರಮಾತ್ಮನು ಸಮುದ್ರದ ನೀರಿನಂತೆ ನೀಲವರ್ಣದಿಂದ ಶೋಭಿಸುತ್ತಿದ್ದಾನೆ. "ಗಜಸಿಂಹಗತೀ ವೀರೌ"—ಎಂಬಂತೆ ಎಳೆಯ ಆನೆಯಂತೆ ಗಂಭೀರವಾದ ನಡೆಯುಳ್ಳವನು. 'ಸರ್ವಗಂಧಃ'—ಎಂದು ಉಪನಿಷತ್ತುಗಳು ಘೋಷಿಸುವ ಪರಿಮಳಗೊಂಡ ನೀಳವಾದ ಕೇಶಪಾಶದಿಂದ ಕೂಡಿದವನಾಗಿದ್ದಾನೆ ಶ್ರೀಕೃಷ್ಣನು. ಈ ರೀತಿಯಾದ ಗುಣಗಳಿಂದ ಕೂಡಿದ ಕೃಷ್ಣ ಕಿಶೋರನ ಬಾಲಲೀಲೆಗಳನ್ನು ಅನುಭವಿಸುತ್ತಾ, ಅವನನ್ನು ತೊಟ್ಟಿಲಲ್ಲಿ ಬಿಟ್ಟು ಆಡಿಸುತ್ತಾ, ಅವನಿಗೆ ತನ್ನ ಬಾಯಿತುಂಬಾ ಅವನ ಗುಣಗಾನ ಮಾಡುತ್ತಾ ಲಾಲಿಯ ಹಾಡುಗಳನ್ನು ಹಾಡುವ ಸಂಪತ್ತು ಯಶೋದೆಯೊಬ್ಬಳನ್ನು ಬಿಟ್ಟು ಬೇರಾರಿಗೂ ಲಭಿಸಲಿಲ್ಲ. ಆ ರೀತಿಯಾದ ಸಂಪತ್ತಿಲ್ಲದ ಭಾಗ್ಯಹೀನರಾದ ತಾಯಂದಿರಲ್ಲಿಯೂ, ತಾನು ಬಹಳ ಕಡೆಯಾದವಳು. ಏಕೆಂದರೆ ಶ್ರೀಕೃಷ್ಣನನ್ನು ಮಗನಾಗಿ ಹಡೆದರೂ, ಅವನನ್ನು ಆಡಿಸುವ ಭಾಗ್ಯವಿಲ್ಲದ ದೌರ್ಭಾಗ್ಯಶಾಲಿ ತಾನು ಎಂದು ದುಃಖಪಟ್ಟ ದೇವಕಿಯ ಭಾವವನ್ನು ಈ ಹಾಡಿನಲ್ಲಿ ಆಳ್ವಾರರು ಹೊರಗೆಡಹಿದ್ದಾರೆ. ||೧||

**ವಡಿಕೊಳಂಜನಮೆಳುದು ಶೆಮ್ಮಲರ್ಕಣ್**
**ಮರುವಿಮೇಲಿನಿದೊನ್ರಿನೈನೋಕ್ಕಿ**
**ಮುಡಕ್ಕಿಚ್ಚೇವಡಿ ಮಲರ್ಚಿರುಕರುನ್ದಾಳ್**
**ಪೊಲಿಯುನೀರ್ ಮುಗಿಕ್ಕುಳವಿಯೇಪೋಲ್**
**ಅಡಕ್ಕಿಯೊರಚ್ಚೆಂಚಿರುವಿರಲನೈತ್ತು**
**ಮಂಗೈಯೋಡಣನ್ದಾನೈಯಿರ್ಕಿಡನ್ದ**
**ಕಿಡಕ್ಕೈ ಕಣ್ಡಿಡ ಪೆತ್ತಿಲೇನನ್ದೋ!**
**ಕೇಶವಾ! ಕೆಡುವೇನ್ ಕೆಡುವೇನೇ ||೨||**

**ವಡಿಕ್ಕೊಳ್** = ತೀಕ್ಷ್ಣವಾದ, **ಅಂಜನಮೆಳುದು** = ಕಾಡಿಗೆಯಿಂದ ಅಲಂಕರಿಸಲ್ಪಟ್ಟ, **ಶೆಮ್ಮಲರ್** = ಕೆಂದಾವರೆಯನ್ನು ಹೋಲುವ, **ಕಣ್** = ಕಣ್ಗಳಿಂದ, **ಮೇಲ್** = ಮೇಲ್ಕಟ್ಟಿನಲ್ಲಿ ತೂಗುಬಿಟ್ಟಿರುವ, **ಒನ್ರಿನೈ** = ಗಿಳಿಯೇ ಮೊದಲಾದುವುಗಳಲ್ಲೊಂದನ್ನು, **ಇನಿದು** = ಬಹಳ ಆಸೆಯಿಂದ, **ಮರುವಿ-ನೋಕ್ಕಿ** = ದಿಟ್ಟಿಸಿನೋಡುತ್ತಾ, **ಕರು** = ಕಪ್ಪಾಗಿರುವ, **ತಾಳ್** = (ಮೇಲ್ಭಾಗದ) ಕಾಲಿನಿಂದ ಕೂಡಿ, **ಮಲರ್** = ಕೆಂದಾವರೆಯ ಹೂವಿನಂತೆ, **ಶಿರು** = ಚಿಕ್ಕದಾಗಿ,

**ಶೇವಡಿ**=ಕೆಂಪಗಿರುವ ಅಂಗಾಲುಗಳನ್ನು, **ಮುಡಕ್ಕಿ**=ಮಡಿಸಿಕೊಳ್ಳುತ್ತಾ, **ನೀರ್‌ಪ್ಪೊಲಿಯುಂ**=ನೀರನ್ನು ಸ್ರವಿಸಲು ಸಿದ್ಧವಾಗಿ ನಿಂತಿರುವ, **ಮುಕಿಲ್-ಕುಳವಿಪ್ಪೋಲ** = ಮೇಘಸಮೂಹಗಳಂತೆ, **ಶೆವ್**=ಸುಂದರವಾದ, **ಶಿರು**= ಪುಟ್ಟದಾದ, **ವಿರಲನೈತ್ತುಂ**=ತನ್ನ ಬೆರಳುಗಳೆಲ್ಲವನ್ನೂ, **ಅಂಗೈಯೋಡು**= ತನ್ನ ಅಂಗೈಯಲ್ಲಿಯೇ, **ಅಡಕ್ಕಿಯಾರ**=ಅಡಗುವಂತೆ, **ಅಣೈಂದು**=ಮುದುಡಿ-ಕೊಂಡು, **ಆನೈಯಿಲ್‌ಕಿಡನ್ದ ಕಿಡಕ್ಕೈ** = ಆನೆಮರಿಯಂತೆ ಮಲಗಿದ್ದ ಸೌಂದರ್ಯವನ್ನು, **ಕಂಡಿಡ** = ಕಂಡು ಅನುಭವಿಸುವ ಭಾಗ್ಯವನ್ನು, **ಪೆತ್ತಿಲೇನ್**=ಪಡೆಯದ ಭಾಗ್ಯಹೀನಳಾಗಿದ್ದೇನೆ. **ಅಂದೋ**=ಅಯ್ಯೋ! **ಕೇಶವಾ**=ಸುಂದರವಾದ ಕೇಶಪಾಶವುಳ್ಳವನೇ, **ಕೆಡುವೇನ್ ಕೆಡುವೇನ್**= ಒಂದೂ ಅನುಭವಿಸದಿರುವ ಮಹಾಪಾಪವುಳ್ಳವಳಾದ ನನಗೆ ಧಿಕ್ಕಾರ! ಧಿಕ್ಕಾರ! ||೨||

ಶ್ರೀಕೃಷ್ಣ ಕಿಶೋರನು ಚಿಕ್ಕ ಶಿಶುವಾಗಿದ್ದಾಗ, ಅವನನ್ನು ತೊಟ್ಟಿಲಲ್ಲಿ ಬಿಟ್ಟದ್ದಾಗ, ತೀಕ್ಷ್ಣವಾದ ಕಾಡಿಗೆಯಿಂದ ಅಲಂಕರಿಸಲ್ಪಟ್ಟ, ಕೆಂದಾವರೆಯನ್ನು ಹೋಲುವ, ತನ್ನ ಕಣ್ಣುಗಳಿಂದ, ತಾನು ಮಲಗಿದ್ದ ತೊಟ್ಟಿಲಿನ ಮೇಲ್ಕಟ್ಟಿನಲ್ಲಿ ತೂಗುಬಿಟ್ಟಿರುವ ಗಿಳಿಯೇ ಮೊದಲಾದುವುಗಳಲ್ಲೊಂದನ್ನು ಬಹಳ ಆಸೆಯಿಂದ ದಿಟ್ಟಿಸಿನೋಡುತ್ತಾ, ಕಪ್ಪಗಿರುವ ಮೇಲ್ಭಾಗದ ಕಾಲಿನಿಂದ ಕೂಡಿ, ಕೆಂದಾವರೆಯ ಹೂವಿನಂತೆ ಚಿಕ್ಕದಾಗಿ ಕೆಂಪಗಿರುವ ತನ್ನ ಅಂಗಾಲುಗಳನ್ನು ಮುದುಡಿಕೊಳ್ಳುತ್ತಾ, ನೀರನ್ನು ಸ್ರವಿಸಲು ಸಿದ್ಧನಾಗಿ ನಿಂತಿರುವ ಮೇಘ ಸಮೂಹಗಳಂತೆ, ಅತಿಮೃದುಲ-ವಾಗಿ ದಟ್ಟವಾಗಿ ಕೂಡಿಕೊಂಡಿರುವ ಸುಂದರವಾಗಿರುವ ಪುಟ್ಟಪುಟ್ಟದಾದ ತನ್ನ ಬೆರಳುಗಳೆಲ್ಲವನ್ನೂ, ತನ್ನ ಅಂಗೈಯಲ್ಲಿಯೇ ಅಡಗುವಂತೆ ಮುದುಡಿಕೊಂಡು, ಮರಿಯಾನೆಯಂತೆ ಮಲಗಿದ್ದ ಸೌಂದರ್ಯವನ್ನು ಕಂಡು ಅನುಭವಿಸುವ ಭಾಗ್ಯವನ್ನು ಪಡೆಯದ ಭಾಗ್ಯಹೀನಳಾಗಿದ್ದೇನೆ ನಾನು. ಎಲೈ ಸುಂದರವಾದ ಕೇಶಪಾಶವುಳ್ಳ ಕೇಶವನೇ, ಯಾವ ಒಂದು ನಿನ್ನ ಲೀಲಾಚೇಷ್ಟಿತಗಳನ್ನೂ ಅನುಭವಿಸದಿರುವ ಮಹಾ ಪಾಪವನ್ನು ಮಾಡಿರುವ ನನಗೆ ಧಿಕ್ಕಾರ-ಧಿಕ್ಕಾರ—ಎಂದು ಹೇಳುತ್ತಾ ದೇವಕಿಯು ತನ್ನನ್ನು ತಾನೇ ಮೂದಲಿಸಿಕೊಳ್ಳುತ್ತಾ ತನ್ನ ದುಃಖವನ್ನು ತೋಡಿಕೊಂಡಿದ್ದಾಳೆ. —ಎಂದು ಆಳ್ವಾರರು ಇಲ್ಲಿ ತಿಳಿಸಿದ್ದಾರೆ. ||೨||

**ಮುನ್‌ದೈ ನನ್ಮೈಯುನ್ಟುಡೈಮಗಳಿರ್**
**ಮುಕೈ ಮುಕೈ ತನ್ದಂಗುರಂಗಿಡ್ಡೆಯಿರುತ್ತಿ**
**ಎನ್‌ದೈಯೇ! ಎನ್ರನ್ ಕುಲಪ್ಪೆರುಂಶುಡರೇ!**
**ಎಳುಮುಗಿಲ್ ಕಣತ್ತೆಳಿಲ್ ಕವರೇರೇ!**

ಉನ್ದೈಯಾವನೆನ್ರುರೈಪ್ಪನಿನ್ ಶೆಂಗೇಳ್
ವಿರಲಿನುಮ್ ಕಡ್ಕೈಕ್ಕಣ್ಣಿನುಂ ಕಾಟ್ಟ
ನನ್ದನ್ ಪೆತ್ತನನ್ ನಲ್ವಿನೈಯಿಲ್ಲಾ
ನಂಗಳ್ ಕೋನ್ ವಸುದೇವನ್ ಪೆತ್ತಿಲನೇ ||೩||

**ಮುನ್ದೈ** = ಮೊದಲಿನಿಂದಲೂ, **ನಲ್ಮುರೈ** = ಪರಂಪರಾಗತವಾಗಿ ಬಂದಿರುವ ಅಜ್ಜಿ, ಮುತ್ತಜ್ಜಿ, ಚಿಕ್ಕಮ್ಮ, ದೊಡ್ಡಮ್ಮ ಮೊದಲಾದ ಬಂಧುಗಳಾದ **ಮಕಳಿರ್**=ಸ್ತ್ರೀಯರು, **ಅನ್ಬುಡೈ**=ಅತ್ಯಧಿಕವಾದ ಅಭಿಮಾನದಿಂದ(ನಿನ್ನನ್ನು) **ತಮ್ ತಮ್**=ತಮ್ಮ ತಮ್ಮ, **ಕುರಂಗಿಡೈ**=ಮಡಿಲಲ್ಲಿ ಅಥವಾ ಸೊಂಟದಲ್ಲಿ, **ಮುರೈಮುರೈ** = ಒಬ್ಬರಾದ ಬಳಿಕ ಮತ್ತೊಬ್ಬರು–ಕ್ರಮವಾಗಿ, **ಇರುತ್ತಿ** = ಎತ್ತಿಕೊಂಡು, **ಎನ್ದೈಯೇ**=ನನ್ನಪ್ಪನೇ ! **ಎನ್ರನ್ ಕುಲಮ್**=ನಮ್ಮ ಕುಲಕ್ಕೆ, **ಪೆರುಂಶುಡರೇ**=ಉಜ್ವಲವಾದ ದೀಪಪ್ರಾಯನಾಗಿರುವವನೇ, **ಎಳು-ಮುಕಿಲ್ ಕಣತ್ತು**=ನೀರನ್ನು ವರ್ಷಿಸಲು ನಿಂತಿರುವ ಮೇಘಗಳ ಸಮೂಹದಂತೆ, **ಎಳಲ್**=ದೇಹಸೌಂದರ್ಯವನ್ನು, **ಕವರ್**=ಹೊಂದಿರುವವನೇ ! **ಏರೇ**= ಗಂಡುಸಿಂಹವನ್ನು ಒಪ್ಪುವಂತಿರುವವನೇ ! (ಎಂದು ನಾನಾ ರೀತಿಯಲ್ಲಿ ಸ್ತುತಿಸುತ್ತಾ ಮುದ್ದಾಡಿ), **ಉನ್ದೈ** = ನಿನ್ನ ತಂದೆಯು, **ಯಾವನ್** = ಯಾರು ? **ಎನ್ರುರೈಪ್ಪ**=ಎಂದು ಕೇಳಲು, **ನಿನ್**=ನಿನ್ನ, **ಶೆಮ್ ಕೇಳ್**=ಕೆಂಪಡರ್ದಿರುವ, **ವಿರಲಿನುಮ್**=ಬೆರಳುಗಳಿಂದಲೂ, **ಕಡ್ಕೈಕಣ್ಣಿನುಂ**=ಕಡೆಗಣ್ಣೋಟದಿಂದಲೂ, **ಕಾಟ್ಟ** = ತೋರಲು (ಆ ಸೌಂದರ್ಯಯುತವಾದ ದೃಶ್ಯವನ್ನು ಕಾಣುವ ಭಾಗ್ಯವನ್ನು) **ನನ್ದನ್**=ನಂದಗೋಪನು, **ಪೆತ್ತನನ್**=ಪಡೆದನು, **ನಲ್-ವಿನೈಯಿಲ್ಲಾ** = ಪುಣ್ಯ ಕೆಲಸಗಳನ್ನೇ ಮಾಡದಿರುವ, **ನಂಗಳ್** = ನಮ್ಮ, **ಕೋನ್** = ಪತಿಯಾದ, **ವಸುದೇವನ್** = ವಸುದೇವನು, **ಪೆತ್ತಿಲನ್**= ಪಡೆಯಲಿಲ್ಲ. ||೩||

ಲೋಕದಲ್ಲಿ ಯಾರ ಮನೆಯಲ್ಲಾದರೂ ಶಿಶುವು ಹುಟ್ಟಿ, ಮುದ್ದುಮುದ್ದಾಗಿ ಅದು ಬೆಳೆಯುತ್ತಿರಲು, ಅದರ ಬಂಧುವರ್ಗದವರಾದ ಅಜ್ಜಿ, ಮುತ್ತಜ್ಜಿ, ಚಿಕ್ಕಮ್ಮ, ದೊಡ್ಡಮ್ಮ ಮೊದಲಾದವರು, ಆ ಶಿಶುವನ್ನು ಬಹಳ ಅಭಿಮಾನದಿಂದ ಒಬ್ಬರಾದ ಬಳಿಕ ಮತ್ತೊಬ್ಬರು, ತಮ್ಮ ತಮ್ಮ ಮಡಿಲಲ್ಲಾಗಲೀ ಸೊಂಟದಲ್ಲಾಗಲಿ ಎತ್ತಿ-ಕೊಂಡು, ನನ್ನಪ್ಪನೇ, ನಮ್ಮ ವಂಶದ ಕುಡಿಯೇ, ಮರಿಸಿಂಹವೇ—ಎಂಬ ನಾನಾ ತರಹದ ಮಾತುಗಳಿಂದ ಶಿಶುವನ್ನು ಮುದ್ದಾಡುತ್ತಾ, ಮುತ್ತಿಟ್ಟು—ಆ ಶಿಶುವನ್ನು ಕುರಿತು ನಾನಾ ರೀತಿಯಾಗಿ ಪ್ರಶ್ನೆ ಮಾಡುತ್ತಾರೆ: ಆಗ ನಿಮ್ಮಪ್ಪನಾರು ? ತೋರಿಸು'—ಎಂದು ಕೇಳಿದಾಗ, ಇನ್ನೂ ಮಾತನ್ನರಿಯದ ಆ ಶಿಶುವು ಕೇವಲ ತನ್ನ ಕಣ್ಣೋಟದಿಂದಲೂ ಮತ್ತು ಪುಟ್ಟದಾದ ತನ್ನ ಕೈಬೆರಳುಗಳಿಂದಲೂ ತನ್ನ

ತಂದೆಯನ್ನು ತೋರುತ್ತೆ. ಅಂತೆಯೇ ಕೃಷ್ಣ ಕಿಶೋರನನ್ನೂ ಅವನ ಬಂಧುಗಳು ಎತ್ತಿಕೊಂಡು ಮುದ್ದಾಡುತ್ತಾ, 'ನಿಮ್ಮಪ್ಪನಾರು?'—ಎಂದು ಕೇಳಿದಾಗ, ತನ್ನ ಕಡೆಗಣ್ಣೋಟದಿಂದಲೂ, ಮತ್ತು ಮುದ್ದಾದ ತನ್ನ ಪುಟ್ಟ ಬೆರಳುಗಳಿಂದಲೂ ನಂದಗೋಪನನ್ನೇ ತನ್ನ ತಂದೆಯೆಂದು ತೋರಿಸಿದನು. ಅದನ್ನು ಸ್ಮರಿಸಿಕೊಂಡ ದೇವಕಿಯು ಕೃಷ್ಣನಿಂದ ತಂದೆಯೆಂದು ಕರೆಯಿಸಿಕೊಳ್ಳುವ ಭಾಗ್ಯ ನಂದಗೋಪನಿಗೆ ಲಭಿಸಿತೇ ವಿನಹ, ಆ ರೀತಿ ಕೃಷ್ಣನಿಂದ ಕರೆಯಿಸಿಕೊಳ್ಳುವ ಭಾಗ್ಯವಿಶೇಷವನ್ನು ಹೊಂದಲು ಕಾರಣವಾದ ಪುಣ್ಯಕೆಲಸಗಳನ್ನು ಮಾಡದ ತನ್ನ ಪತಿಯಾದ ವಸುದೇವನಿಗೆ ಆ ಭಾಗ್ಯ ಲಭಿಸಲಿಲ್ಲವೆಂದು ದುಃಖದಿಂದ ಹೇಳಿಕೊಳ್ಳುತ್ತಾಳೆ. ||೩||

**ಕಳಿನಿಲಾವೆಳಿಲ್ ಮದಿಪುರೈ ಮುಗಮುಮ್**
**ಕಣ್ಣನೇ! ತಿಣ್ಕೈಮಾರ್ವುಂ ತಿಣ್ ತೋಳುಂ**
**ತಳಿರ್ ಮಲರ್ ಕರುಂಕುಳಲ್ ಪಿರೈಯದುವುಂ**
**ತಡಂಗೊಳ್ ತಾಮರೈಕ್ಕಣ್ಗಳುಂ ಪೊಲಿನ್ದ**
**ಇಳಮೈಯಿನ್ಬತ್ತೈಯಿನ್ರೆನ್ರನ್ ಕಣ್ಗಾಲ್**
**ಪರುಗುವೇರ್ಕಿವಳ್ ತಾಯೆನ ನಿನ್ನೈನ್ದ**
**ಅಳವಿಲ್ಪಿಳ್ಳೈಮೈಯಿನ್ಬತ್ತೈಯಿಳನ್ದ**
**ಪಾವಿಯೇನ್ ಎನದಾವಿನಿಲ್ಲಾದೇ ||೪||**

ಕಣ್ಣನೇ = ಎಲೈ ಕೃಷ್ಣನೇ! **ಕಳಿ**=ಆಹ್ಲಾದಕರವಾದ, **ನಿಲಾ**= ಬೆಳದಿಂಗಳಿನಿಂದ ಕೂಡಿದ, **ಎಳಿಲ್ಮದಿಪುರೈ**=ಪೂರ್ಣಚಂದ್ರನನ್ನು ಒಪ್ಪುವ, **ಮುಗಮುಂ**=ಮುಖವನ್ನೂ, **ತಿಣ್**=ಪುಷ್ಟವಾದ, **ಕೈಯುಮ್**=ಕೈಗಳನ್ನೂ **ಮಾರ್ವುಮ್**=ಎದೆಯನ್ನೂ, **ತಿಣ್**=ಬಲಿಷ್ಠವಾದ, **ತೋಳುಂ**=ತೋಳು, ಗಳನ್ನೂ, **ತಳಿರ್**=ಚಿಗುರುಗಳನ್ನೂ, **ಮಲರ್**=ಪುಷ್ಪಗಳನ್ನೂ ಮುಡಿದಿರುವ- **ಕರು**=ಕಪ್ಪಗಿರುವ, **ಕುಳಲ್**=ಮುಂಗುರುಳುಗಳ ಅಡಿಯಲ್ಲಿ ಪ್ರಕಾಶಿಸುತ್ತಿರುವ, **ಪಿರೈಯದುವುಂ** = ಅಷ್ಟಮಿ ಚಂದ್ರನನ್ನು ಹೋಲುವ ಹಣೆಯನ್ನೂ, **ತಡಂಗೊಳ್**=ವಿಶಾಲವಾದ, **ತಾಮರೈ**=ತಾವರೆ ಪುಷ್ಪಗಳಂತಿರುವ, **ಕಣ್ಗಳುಂ**= ಕಣ್ಣುಗಳನ್ನೂ (ಹೊಂದಿ) **ಪೊಲಿಂದ**=ಪ್ರಕಾಶಿಸುತ್ತಿರುವ ನಿನ್ನ, **ಇಳಮೈ**= ಯೌವನಾವಸ್ಥೆಯ, **ಇನ್ಬತ್ತೈ**=ಸೌಂದರ್ಯವನ್ನೂ, **ಇನ್ರು**=ಈಗ, **ಎನ್ರನ್**= ನನ್ನ, **ಕಣ್ಗಾಲ್** = ಕಣ್ಣುಗಳಿಂದ, **ಪರುಕುವೇರ್ಕು** = ಪಾನಮಾಡುತ್ತಾ ಅನುಭವಿಸುತ್ತಿರುವ ನನಗೆ, **ಇವಳ್ ತಾಯೆನನಿನೈನ್ದವಳವಿಲ್**=ತಾಯಿಯನ್ನು ಬಿಟ್ಟು ಮತ್ತಾರನ್ನೂ ಅರಿಯದಿರುವ, **ಪಿಳ್ಳೈಮೈಯಿನ್ಬತ್ತೈ**=ಶೈಶವಾವಸ್ಥೆಯ ಸುಖವನ್ನು (ಅನುಭವಿಸುವ **ಭಾಗ್ಯ** ಪಡೆಯದೆ) **ಇಳನ್ದ** = ವಂಚಿತಳಾದ,

**ಪಾವಿಯೇನ್** = ಮಹಾಪಾಪಿಯಾದ, **ಎನದು**=ನನ್ನ, **ಆವಿ** = ಪ್ರಾಣ-ವಾದರೋ, **ನಿಲ್ಲಾದು**=ಧರಿಸಿರಲಾರದು. ||೪||

ಕಂಸನನ್ನು ಸಂಹರಿಸಿದ ಬಳಿಕ, ದೇವಕೀ ವಸುದೇವರನ್ನು ಸೆರೆಮನೆಯಿಂದ ಬಿಡಿಸಿ, ಶ್ರೀಕೃಷ್ಣನು, ಅವರಿಗೆ ತನ್ನ ದರ್ಶನವೀಯುತ್ತಾನೆ. ಆಗ ಯೌವನಾವಸ್ಥೆಯಲ್ಲಿದ್ದ ಶ್ರೀಕೃಷ್ಣನನ್ನು ಕಂಡು ಅವನ ಮುಗ್ಧವಾದ ಶೈಶವಾವಸ್ಥೆಯ ಸುಖವನ್ನು ಅನುಭವಿಸಲಾಗದಿದ್ದುದರಿಂದ ದುಃಖಿತಳಾಗಿ ಕೃಷ್ಣನನ್ನು ಕುರಿತು ಹೇಳುತ್ತಾಳೆ. 'ಎಲೈ ! ಶ್ರೀಕೃಷ್ಣನೇ ! ಆಹ್ಲಾದಕರವಾದ ಬೆಳದಿಂಗಳಿನಿಂದ ಕೂಡಿದ ಹುಣ್ಣಿಮೆಯ ಪೂರ್ಣಚಂದ್ರನನ್ನು ಒಪ್ಪುವ ಮುಖವನ್ನೂ, ಪುಷ್ಟವಾದ ಕೈಗಳನ್ನೂ, ಪುಷ್ಟ-ವಾಗಿಯೂ ವಿಶಾಲವಾಗಿಯೂ ಇರುವ ಎದೆಯನ್ನೂ, ಬಲಿಷ್ಠವಾದ ತೋಳು-ಗಳನ್ನೂ, ಚಿಗುರುಗಳನ್ನೂ ಪುಷ್ಪಗಳನ್ನೂ ಮುಡಿದಿರುವ ಮುಂಗುರುಳುಗಳ ಅಡಿಯಲ್ಲಿ ಪ್ರಕಾಶಿಸುತ್ತಿರುವ ಅಷ್ಟಮಿಾ ಚಂದ್ರನನ್ನು ಹೋಲುವ ಹಣೆಯನ್ನೂ, ವಿಶಾಲವಾದ ತಾವರೆಯ ಪುಷ್ಪಗಳಂತಿರುವ ಕಣ್ಣುಗಳನ್ನೂ ಹೊಂದಿ, ಪ್ರಕಾಶಿಸುತ್ತಿರುವ ನಿನ್ನ ಯೌವನಾವಸ್ಥೆಯ ಸೌಂದರ್ಯವನ್ನು ಈಗ ನನ್ನ ಕಣ್ಣುಗಳಿಂದ ಪಾನ ಮಾಡುವಂತೆ ನೋಡುತ್ತಾ ಅನುಭವಿಸುತ್ತಿರುವ ನನಗೆ, ತಾಯಿಯನ್ನು ಬಿಟ್ಟು ಮತ್ತಾರನ್ನೂ ಅರಿಯದಿರುವ ನಿನ್ನ ಶೈಶವಾವಸ್ಥೆಯ ಸುಖವನ್ನು ಪಡೆಯದೆ ವಂಚಿತಳಾದ, ಮಹಾಪಾಪಿಯಾಗಿ ಭಾಗ್ಯಹೀನಳಾದ ನನ್ನ ಪ್ರಾಣಗಳು ಧರಿಸಲಾರ-ದುದಾಗಿವೆ'—ಎಂದು ತನ್ನ ದುಃಖವನ್ನು ತೋಡಿಕೊಳ್ಳುತ್ತಾಳೆ. ||೪||

**ಮರುವು ನಿನ್ತಿರುನೆತ್ತಿಯಿಲ್ ಶುಟ್ಟಿಯಶೈತರ**
**ಮಣಿವಾಯಿಡೈಮುತ್ತಮ್—**
**ತರುದಲಮ್, ಉನ್ರನ್ ತಾದೈಯೈಪ್ಪೋಲುಂ**
**ವಡಿವು ಕಂಡುಕೊಂಡುಳ್ಳಮುಳ್‌ಕುಳಿರ**
**ವಿರಲೈಚ್ಚೆಂಚಿರುವಾಯಿಡೈಚ್ಚೇರ್ತು**
**ವೆಕುಳಿಯಾಯ್ ನಿನ್ರುರೈಕ್ಕುಮವ್ವುರೈಯುಮ್**
**ತಿರುವಿಲೇನೊನ್ರುಮ್ ಪೆತ್ತಿಲೇನ್ ಎಲ್ಲಾಮ್**
**ದೆಯ್ವನಂಗೈಯಶೋದೈ ಪೆತ್ತಾಳೇ ||೫||**

**ನಿನ್**=ನಿನ್ನ, **ತಿರುನೆತ್ತಿಯಿಲ್**=ಹಣೆಯಲ್ಲಿ, **ಮರುವು**=ಸಹಜ-ವಾಗಿಯೇ ಕೂಡಿಕೊಂಡಿರುವ, **ಶುಟ್ಟಿ**=ಮುಂಗುರುಳುಗಳು, **ಅಶೈತರ**=ಅಲುಗಾಡುವಂತೆ, **ಮಣಿ**=ಸುಂದರವಾದ, **ವಾಯಿಡೈ**=(ನಿನ್ನ) ಬಾಯಿಂದ, **ಮುತ್ತಂ** = ಮುತ್ತುಗಳನ್ನು, **ತರುದಲುಂ** = ನೀನು ಕೊಡುವುದನ್ನೂ, **ಉನ್ರನ್**=ನಿನ್ನ, **ತಾತಯೈಪ್ಪೋಲುಂ**=ತಂದೆಯನ್ನೇ ಹೋಲುವ, **ವಡಿವು**=

ದೇಹದ ಸೌಂದರ್ಯವನ್ನೂ, **ಕಂಡುಕೊಂಡ**=ಕಂಡು, **ಉಳ್ಳಮ್**=ಮನಸ್ಸು **ಉಳ್ಕುಳಿರ**=ಒಳಗಡೆಯೇ ಸಂತೋಷಿಸುವಂತೆ ಇರುವಿಕೆಯೂ, **ಶೆಮ್**=ಕೆಂಪಡರ್ದ, **ಶಿರು**=ಪುಟ್ಟದಾದ, **ವಾಯಿಡ್ಕೈ**=ಬಾಯಲ್ಲಿ, **ವಿರಲೈ**=ಬೆರಳು-ಗಳನ್ನು, **ಶೇರು**=ಇಟ್ಟುಕೊಂಡಿರುವಿಕೆಯನ್ನೂ, **ವೆಕುಳಿಯಾಯ್ ನಿನ್ರು**=ಕೋಪದಿಂದ ನಿಂತು, **ಉರೈಕ್ಕುಂ**=ಹೇಳುವ, **ಅಪ್ಪುರೈಯುಂ**=ಆ ತೊದಲು ನುಡಿಗಳನ್ನೂ (ಕೇಳುವಿಕೆಯನ್ನೂ), **ಒನ್ರುಮ್** = ಯಾವ ಒಂದನ್ನೂ, **ತಿರುವಿಲೇನ್** = ಭಾಗ್ಯಹೀನಳಾದ ನಾನು, **ಪೆತ್ತಿಲೇನ್** = ಅನುಭವಿಸುವ ಭಾಗ್ಯವನ್ನು ಪಡೆಯಲಿಲ್ಲ. **ದೆಯ್ವನಂಗೈ**=ದೇವಸ್ತ್ರೀಯರಿಗೆ ಸದೃಶಳಾದ, **ಅಶೋದೈ**=ಆ ಯಶೋದಾದೇವಿಯು, **ಎಲ್ಲಾಮ್**=ಆ ಎಲ್ಲ ಬಾಲ್ಯಚೇಷ್ಟಿತ-ಗಳನ್ನೂ, **ಪೆತ್ತಾಳ್**=ಅನುಭವಿಸುವ ಭಾಗ್ಯವನ್ನು ಪಡೆದಳು. ||೫||

ನಿನ್ನ ಹಣೆಯಲ್ಲಿ ಸಹಜವಾಗಿಯೇ ಕೂಡಿಕೊಂಡಿರುವ, ಮುಂಗುರುಳುಗಳು ಅಲುಗಾಡುವಂತೆ, ಸುಂದರವಾದ ನಿನ್ನ ಬಾಯಿಂದ ನೀನು ಕೊಡುವ ಮುತ್ತು-ಗಳನ್ನು ಸ್ವೀಕರಿಸುವಿಕೆಯನ್ನೂ, ನಿನ್ನ ತಂದೆಯನ್ನೇ (ವಸುದೇವನನ್ನೇ) ಹೋಲುವ ದೇಹದ ಸೌಂದರ್ಯವನ್ನೂ ಕಣ್ಣಾರೆ ಕಂಡು ಮನದಲ್ಲಿಯೇ ಸಂತೋಷಿಸುವಿಕೆ-ಯನ್ನೂ, ಕೆಂತುಟಿಗಳಿಂದ ಕೂಡಿ ಪುಟ್ಟದಾದ ಬಾಯಲ್ಲಿ ನೀನು ನಿನ್ನ ಬೆರಳಿಟ್ಟು-ಕೊಂಡು ಆಟವಾಡುವಿಕೆಯನ್ನೂ, ಕೋಪದಿಂದ ನಿಂತು ನೀನು ನುಡಿಯುತ್ತಿದ್ದ ತೊದಲು ನುಡಿಗಳನ್ನು ಆಲಿಸುವಿಕೆಯನ್ನೂ—ಈ ಯಾವ ಒಂದನ್ನೂ ಭಾಗ್ಯ ಹೀನಳಾದ ನಾನು ಅನುಭವಿಸುವ ಭಾಗ್ಯ ಪಡೆಯಲಿಲ್ಲ, ದೇವಸ್ತ್ರೀಯರಿಗೆ ಸದೃಶಳಾದ ಆ ಯಶೋದಾದೇವಿಯು, ಆ ಎಲ್ಲ ನಿನ್ನ ಬಾಲ್ಯಚೇಷ್ಟಿತಗಳನ್ನೂ ಅನುಭವಿಸುವ ಭಾಗ್ಯವನ್ನು ಪಡೆದಳು. ||೫||

**ತಣ್ಣಂತಾಮರೈಕ್ಕಣ್ಣನೇ ಕಣ್ಣಾ ತವಳ್ನ್ದು**
**ಎಳುನ್ದು ತಳರ್ನ್ದ ದೋರ್ ನಡೈಯಾಲ್**
**ಮಣ್ಣಿರ್ಚೆಂಪ್ಪೊಡಿಯಾಡಿವನ್ದೆನ್ರನ್**
**ಮಾರ್ಬಿಲ್ ಮನ್ನಿಡಪೆತ್ತಿಲೇನನ್ದೋ**
**ವಣ್ಣಚ್ಚೆಂಚಿರುಕ್ಕೈವಿರಲನೈತ್ತುಮ್**
**ವಾರಿವಾಯ್ಕ್ಕೊಂಡ ವಡಿಶಿಲನ್ಮಿಚ್ಚಿಲ್**
**ಉಣ್ಣಪ್ಪೆತ್ತಿಲೇನೋ ಕೊಡುವಿನೈಯೇನ್ !**
**ಎನ್ನೈ ಎನ್ಶೆಯ್ಯಪ್ಪೆತ್ತದೆಮ್ಮೋಯೇ** ||೬||

**ತಣ್** = ತಣ್ಣಗಿರುವ, **ಅಮ್** = ಸುಂದರವಾದ, **ತಾಮರೈ** = ತಾವರೆ ಪುಷ್ಪದಂತಿರುವ, **ಕಣ್ಣನೇ**=ಕಣ್ಣುಗಳನ್ನು ಹೊಂದಿರುವವನೇ! **ಕಣ್ಣಾ**=ಕೃಷ್ಣನೇ! **ತವಳ್ನ್ದು**=(ನೀನು ಅಲ್ಲಲ್ಲೇ) ಎಡವಿ ಬೀಳುತ್ತಾ, **ಎಳುನ್ದು**=

ಏಳುತ್ತಾ, **ತಳರ್ನ್ದದೋರ್ ನಡೆಯೊಲ್**=ತೂರಾಡುತ್ತಾ ನಡೆದು ಬರುವಲ್ಲಿ, **ಶೆವ್ವಣ್ಣಿಲ್ ಪೊಡಿ**=ಕೆಮ್ಮಣ್ಣಿನ ಧೂಳಿನಲ್ಲಿ, **ಆಡಿ**=ಆಟವಾಡಿ, **ವನ್ದು**=ಹಾಗೆಯೇ ಆ ಧೂಳಿನಿಂದ ಕೂಡಿದವನಾಗಿಯೇ ಬಂದ, **ಎನ್ರ್**=ನನ್ನ, **ಮಾರ್ಬಿಲ್**=ಎದೆಯಲ್ಲಿ, **ಮನ್ನಿಡ**=ಅಪ್ಪಿಕೊಂಡು ಹೊರಳಾಡುತ್ತಾ ಮಲಗುವಿಕೆಯನ್ನು, **ಪೆತ್ತಿಲೇ**=ನಾನು ಪಡೆಯಲಿಲ್ಲ. **ಅನ್ದೋ** = ಅಯ್ಯೋ! **ವಣ್ಣಂ** = ಸುಂದರವಾದ, **ಶೆವ್** = ಕೆಂಪಗಿರುವ, **ಶಿರು** = ಪುಟ್ಟದಾದ, **ಕೈವಿರಲನೈತ್ತುಮ್**=ಕೈಯಿನ ಐದೂ ಬೆರಳುಗಳಿಂದಲೂ, **ವಾರಿ**=ಬಾಚಿಕೊಂಡು, **ವಾಯ್‌ಕೊಂಡ** = ಬಾಯಲ್ಲಿಟ್ಟುಕೊಂಡು ಊಟಮಾಡಿದ, **ಅಡಿಶಿಲ್**=ನಿನ್ನ ಪ್ರಸಾದದ, **ಮಿಚ್ಚಲ್**=ಮಿಕ್ಕ ಶೇಷವನ್ನು, **ಉಣ್ಣಪೆತ್ತಿಲೇ**=ತಿನ್ನುವ ಭಾಗ್ಯವನ್ನು ನಾನು ಪಡೆಯಲಿಲ್ಲ. **ಕೊಡುವಿನೈಯೇ**=ಮಹಾಪಾತಕವನ್ನು ಮಾಡಿದ್ದೇನೆ. **ಓ!**=ಅಯ್ಯೋ! **ಎನ್ಮೋಯ್**=ನನ್ನ ತಾಯಿಯಾದರೋ, **ಎನ್ನೈ**=ನನ್ನನ್ನು, **ಎಶೆಯ್ಯ**=ಯಾವುದಕ್ಕೋಸ್ಕರವಾಗಿ, **ಪೆಟ್ರಾ**=ಹಡೆದಳೋ! ||೬||

ತಣ್ಣಗಿರುವ ಸುಂದರವಾದ ತಾವರೆಪುಷ್ಪದಂತಿರುವ ಕಣ್ಣುಗಳುಳ್ಳ ಎಲೈ! ಶ್ರೀಕೃಷ್ಣನೇ! ನೀನು ಅಲ್ಲಲ್ಲೇ ಎಡವಿಬೀಳುತ್ತಾ, ತೂಗಾಡುತ್ತಾ ಪುಟ್ಟ ಪುಟ್ಟ ಹೆಜ್ಜೆಯಿಟ್ಟು ನಡೆಯುತ್ತಾ ಕೆಮ್ಮಣ್ಣಿನ ಧೂಳಿನಲ್ಲಿ ಆಟವಾಡಿ, ಆ ಧೂಳಿನಿಂದ ಕೂಡಿದ ಮೈಯಿಂದಲೇ ಓಡಿಬಂದು, ನನ್ನ ಎದೆಯಲ್ಲಿ ನನ್ನನ್ನು ಅಪ್ಪಿಕೊಂಡು ಹೊರಳಾಡುತ್ತಾ ನನ್ನ ಮಡಿಲಲ್ಲಿ ನೀನು ಮಲಗುವುದನ್ನು ಕಾಣುವ ಭಾಗ್ಯವನ್ನು ನಾನು ಪಡೆಯಲಿಲ್ಲ. ಕೆಂಪಗಿರುವ ಮತ್ತು ಪುಟ್ಟದಾಗಿರುವ ನಿನ್ನ ಕೈಯಿನ ಐದೂ ಬೆರಳುಗಳಿಂದ ಬಾಚಿಕೊಂಡು ನಿನ್ನ ಪುಟ್ಟ ಬಾಯಲ್ಲಿಟ್ಟುಕೊಂಡು ಊಟಮಾಡಿದ ಅನ್ನದ ಶೇಷವನ್ನು (ಎಂಜಿಲನ್ನು) ತಿನ್ನುವ ಭಾಗ್ಯವನ್ನೂ ಪಡೆಯಲಿಲ್ಲ. ಈ ರೀತಿಯಾದ ಭಾಗ್ಯಹೀನಳಾಗಿ ಮಹಾಪಾತಕಿಯಾದ ನನ್ನನ್ನು, ನಮ್ಮ ತಾಯಿಯು ಯಾವ ಪ್ರಯೋಜನಕ್ಕಾಗಿ ಹಡೆದಳೋ ತಿಳಿಯದು. ||೬||

**ಕುಳಗನೇ! ಎನ್ರನ್ ಕೋಮುಳಪ್ಪಿಳ್ಳಾಯ್!**
**ಗೋವಿನ್ದಾ! ಎಕುಡರ್ಕೈಯಿಲ್‌ಮನ್ನಿ**
**ಒಳುಗುಪೇರೆಳಿಲಿಳಂಜಿರುತಳಿರ್‌ಪೋಲ್**
**ಒರುಕೈಯಾಲೊರುಮುಲೈಮುಗಮ್ ನೆರುಡಾ**
**ಮುಯಲ್ವೈಮೆನ್ನಗ್ಯೆಯಿಡ್ಯೆಯಿಡ್ಯೆಯರುಳಾ**
**ವಾಯಿಲೇಮುಲ್ಯೆಯಿರುಕ್ಕವೆನ್ನುಗತ್ತೇ**
**ಎಳಲ್‌ಕೊಳ್ ನಿನ್ರಿರುಕ್ಕಣ್ಣಿಣೈನೊಕ್ಕುವ್**
**ತನ್ನೈಯುಯುಮಿಳನ್ದೇನಿಳನ್ದೇನೇ ||೭||**

**ಕುಳಕನೇ**=ಎಲ್ಲರೊಡನೆಯೂ ಕೂಡುವ ಸೌಶೀಲ್ಯ ಗುಣವುಳ್ಳ, **ಎನ್ರನ್**= ನನ್ನ, **ಕೋವುಳಪ್ಪಿಳ್ಳಾಯ್** = ಕೋಮಲವಾಗಿ ಸುಂದರನಾದ ಮಗನೇ! **ಗೋವಿಂದಾ**=ಎಲೈ ಗೋವಿಂದನೇ!, **ಎನ್**=ನನ್ನ, **ಕುಡಂಕೈಯಿಲ್**= ಒಳಗೈಯ್ಯಲ್ಲಿ, **ವುನ್ನಿ**=ಅಡಗುವಂತಿದ್ದು, **ಪೇರೆಳಿಲ್**=ಸೌಂದರ್ಯಪ್ರವಾಹವು, **ಒಳುಕು**=ಪ್ರವಹಿಸುವಂತೆ, **ಇಳಂಶಿರು**=ಬಹಳ ಎಳೆಯದಾದ, **ತಳಿರ್-ಪೋಲ್**=ಚಿಗುರಿನಂತಿರುವ, **ಒರುಕೈಯಾಲ್**=ನಿನ್ನ ಒಂದು ಕೈಯಿಂದ, **ಒರುಮುಲೈ ಮುಕಂ**=ನನ್ನ ಒಂದು ಮುಲೆಯ ತುದಿಯನ್ನು, **ನೆರುಡಾ**= ಸವರುತ್ತಾ, **ವಾಯಿಲೇ**=ನಿನ್ನ ಬಾಯಲ್ಲಿ, **ಮುಲೈಯಿರುಕ್ಕ**=ಮತ್ತೊಂದು ಮುಲೈಯಿರಲು, **ಎನ್‌ಮುಕತ್ತು**=ನನ್ನ ಮುಖದಲ್ಲಿ, **ಇಡೈ ಇಡೈ**=ಮಧ್ಯ ಮಧ್ಯದಲ್ಲಿ, **ಮುಳಲ್ನೆಮ್ನಕೈ ಅರುಳಾ**=ಮುಗುಳ್ನಗೆಯಿಂದ ಕೂಡಿ, **ಎಳಿಲ್-ಕೊಳ್** = ಸುಂದರವಾದ, **ನಿನ್** = ನಿನ್ನ, **ತಿರುಕಣ್ಣಿಣೈ** = ಪವಿತ್ರವಾದ ಕಣ್ಣುಗಳಿಂದ ಕಟಾಕ್ಷಿಸುವ, **ನೋಕ್ಕನ್ತನ್ನೈಯುಂ** = ನೋಡುವಿಕೆಯನ್ನೂ, (ಅನುಭವಿಸುವ ಭಾಗ್ಯವನ್ನು ಪಡೆಯದ ನಾನು) **ಇಳನ್ದೇನ್**=ನಿನ್ನನ್ನು ಹಡೆದ ಕೂಡಲೇ ಕಳುಹಿಸಿಕೊಟ್ಟು, **ಇಳನ್ದೇನೇ**=ಭಾಗ್ಯದಿಂದ ವಂಚಿತಳಾದೆ ||೭||

ಎಲ್ಲರೊಡನೆಯೂ ಕೂಡುವ ಸ್ವಭಾವವುಳ್ಳ ಸೌಶೀಲ್ಯ ಗುಣವುಳ್ಳ, ಕೋಮಲವಾಗಿಯೂ, ಸುಂದರವಾಗಿಯೂ ಇರುವ ದಿವ್ಯದೇಹವುಳ್ಳ, ನನ್ನ ಮಗನಾದ ಎಲೈ ಗೋವಿಂದನೇ, ನೀನು ಪುಟ್ಟ ಶಿಶುವಾಗಿದ್ದಾಗ ನನ್ನ ಒಳಕೈಯಲ್ಲಿ ಧರಿಸಿದ್ದರೆ ಸೌಂದರ್ಯವೇ ಘನೀಭೂತವಾಗಿರುವಂತಿದ್ದು, ನನ್ನ ಸ್ತನ್ಯಪಾನ ಮಾಡಬೇಕೆಂದು ನನ್ನ ಕೈಯಿಂದ ಜಾರಿ ನನ್ನ ಮಡಿಲನ್ನು ಸೇರಿದಾಗ, ಘನೀಭೂತವಾದ ಸೌಂದರ್ಯವು ಕರಗಿ ದ್ರವೀಭೂತವಾಗಿ ಪ್ರವಹಿಸುತ್ತಿರುವ ಸೌಂದರ್ಯದ ಪ್ರವಾಹದಂತೆ ಕಾಣಿ-ಸುತ್ತಿದ್ದು, ನಿನ್ನನ್ನು ನನ್ನ ಮಡಿಲಲ್ಲಿ ಮಲಗಿಸಿಕೊಂಡು, ಸ್ತನ್ಯಪಾನ ಮಾಡುವಾಗ ಬಹಳ ಎಳೆಯದಾದ ಚಿಗುರಿನಂತಿರುವ ನಿನ್ನ ಪುಟ್ಟದಾದ ಒಂದು ಕೈಯಿಂದ, ನನ್ನ ಒಂದು ಮುಲೆಯ ತುದಿಯನ್ನು ಸವರುತ್ತಾ, ನಿನ್ನ ಬಾಯಲ್ಲಿಯೇ ಮತ್ತೊಂದು ಮುಲೈಯಿಟ್ಟುಕೊಂಡು ಸ್ತನ್ಯಪಾನ ಮಾಡುತ್ತಲೇ, ಮಧ್ಯಮಧ್ಯದಲ್ಲಿ ಮುಗುಳ್ನಗೆ-ಯಿಂದ ಕೂಡಿ, ನಿನ್ನ ಸುಂದರವಾದ ಕಣ್ಣುಗಳಿಂದ ನನ್ನ ಮುಖವನ್ನು ಕಟಾಕ್ಷಿಸು-ವುದನ್ನು, ನನ್ನ ಕಣ್ಣಾರೆ ಕಾಣುವ ಭಾಗ್ಯವನ್ನು ಪಡೆಯದ ನಾನು ನಿನ್ನನ್ನು ಹಡೆದ ಕೂಡಲೇ ಯಶೋದಾ ನಂದಗೋಪರಲ್ಲಿಗೆ ಕಳುಹಿಸಿಕೊಟ್ಟು, ಭಾಗ್ಯದಿಂದ ವಂಚಿತಳಾದೆ. ||೭||

**ಮುಳುದುಂ ವೆಣ್ಣೆಯಳೈನ್ದು ತೊಟ್ಟುಣ್ಣುಂ**
**ಮುಗಿಳಿಳಂಜಿರುತ್ತಾಮರೈಕ್ಕೈಯುಂ**

ಎಳಿಲ್‌ಕೊಳ್ ತಾಂಬುಕೊಂಡಡಿಪ್ಪದರ್ಕ್ಕು
ಎಳ್‌ಗುನಿಲ್ಲೈಯುಂ ವೆಣ್‌ತಯಿರ್‌ತೋಯ್‌ನ್ದ
ಶೆವ್ವಾಯುಂ, ಅಳುಗ್ಗೈಯುಂ ಅಂಜಿನೋಕ್ಕುಮನ್ನೋಕ್ಕುಂ
ಅಣಿಗೊಳ್‌ಶೆಂಜಿರುವಾಯ್‌ನೆಳಿಪ್ಪದುವುಂ,
ತೊಳುಗ್ಗೈಯುಮಿವೈ ಕಂಡವಶೋದೈ
ತೊಲ್ಲೈಯಿನ್‌ಬತ್ತಿರುದಿಕಂಡಾಳೇ ॥೮॥

**ವೆಣ್ಣೆಯ್** = ಬೆಣ್ಣೆಯನ್ನು, **ಮುಳುದುಂ** = ಕೊಡದಲ್ಲಿದ್ದುದನ್ನು ಪೂರ್ಣವಾಗಿ, **ಅಳೈನ್ದು** = ಅದರೊಳಗೆ ಕೈಬಿಟ್ಟು 'ಎಷ್ಟಿದೆ ?'—ಎಂದು ಅಳೆದು, **ತೊಟ್ಟುಣ್ಣುಂ** = (ಬಹಳ ರುಚಿಕರವಾಗಿರುವುದರಿಂದ ಒಟ್ಟಿಗೆ ಒಮ್ಮೆಲೇ ಪೂರ್ಣ-ವಾಗಿ ತಿಂದು ಮುಗಿಸಲು ಇಷ್ಟವಿಲ್ಲದ, ಅದರ ಮೇಲಿನ ಚಾಪಲ್ಯದಿಂದ) ಮತ್ತೆ ಮತ್ತೆ ಅದನ್ನು ಮುಟ್ಟಿ ಮುಟ್ಟಿ ತನ್ನ ಕೈಯಿಗಂಟಿಕೊಂಡಿದ್ದ ಬೆಣ್ಣೆಯನ್ನು ನೆಕ್ಕುತ್ತಾ (ನಿಂತಿದ್ದ ನಿನ್ನ ಸ್ಥಿತಿಯನ್ನು ಕಂಡು), **ಇಳಮುಕಿಳ್** = ಎಳೆಯದಾದ ಚಿಗುರಿನಂತಿರುವ, **ತಾಮರೈ** = ತಾವರೆಯ ಹೂವಿನಂತಿರುವ, **ಶಿರುಕ್ಕೈಯುಂ** = ನಿನ್ನ ಪುಟ್ಟ ಕೈಗಳನ್ನೂ, **ಎಳಿಲ್‌ಕೊಳ್** = ಸುಂದರವಾದ, **ತಾಂಬುಕೊಂಡು** = ಸೆಣಬು ಹಗ್ಗದಿಂದ, **ಅಡಿಪ್ಪದರ್ಕು** = ಹೊಡೆಯಲು (ನಿನ್ನ ತಾಯಿಯು ಉದ್ಯುಕ್ತಳಾದಾಗ), **ಎಳ್‌ಗುನಿಲ್ಲೈಯುಂ** = ಅದಕ್ಕೆ ಭಯಪಟ್ಟು ನಿಂತ ನಿನ್ನ ಸ್ಥಿತಿಯೂ, **ವೆಣ್** = ಬೆಳ್ಳಗಿರುವ, **ತಯಿರ್‌ತೋಯ್‌ನ್ದ** = ಮೊಸರಿನಿಂದ ಸವರಲ್ಪಟ್ಟ, **ಶೆವ್ವಾಯುಂ** = ನಿನ್ನ ಸುಂದರವಾದ ವದನವೂ, **ಅಳುಕ್ಕೈಯುಂ** = ಅಳುವಿಕೆಯೂ, **ಅಂಜಿ** = ಭಯದಿಂದ, **ನೋಕ್ಕುಂ** = ನೋಡುತ್ತಿದ್ದ, **ಅನ್ನೋಕ್ಕುಂ** = ಆ ನೋಡುವಿಕೆಯನ್ನೂ, **ಅಣಿಕೊಳ್** = ಸುಂದರವಾದ, **ಶೆಮ್** = ಕೆಂಪಗಿರುವ, **ಶಿರುವಾಯ್** = ಪುಟ್ಟ ಬಾಯಲ್ಲಿನ ತುಟಿಗಳು, **ನೆಳಿಪ್ಪದುವುಂ** = ಅದುರುವಿಕೆಯನ್ನೂ, **ತೊಳುಕ್ಕೈಯುಮಿವೈ** = (ಮತ್ತೊಮ್ಮೆ ಮಾಡುವುದಿಲ್ಲಾ—ಕ್ಷಮಿಸಬೇಕೆಂದು ಕೇಳಿಕೊಳ್ಳುತ್ತಾ) ಕೈಮುಗಿದು ನಮಸ್ಕರಿಸು-ವಿಕೆಯನ್ನೂ, **ಕಂಡ** = ತನ್ನ ಕಣ್ಣಾರೆ ಕಂಡು ಅನುಭವಿಸಿದ, **ಅಶೋದೈ** = ಆ ಯಶೋದಾದೇವಿಯು, **ತೊಲ್ಲೈ** = ಅನಾದಿಸಿದ್ಧವಾದ, **ಇನ್ಬತ್ತೆ** = ಆನಂದ ಮಯನಾಗಿ ಆನಂದಸ್ವರೂಪನಾದ ಪರಬ್ರಹ್ಮನ, **ಇರುದಿಕಂಡಾಳ್** = ತತ್ವವನ್ನೇ ಸಾಕ್ಷಾತ್ಕರಿಸಿದಳು.

ಕೃಷ್ಣಕಿಶೋರನು ತನಗೆ ಇಷ್ಟವಾದ ಬೆಣ್ಣೆಯನ್ನು ತಿನ್ನಬೇಕೆಂದು ಒಮ್ಮೆ ಉದ್ಯುಕ್ತನಾಗಿ, ಬೆಣ್ಣೆಯಿಟ್ಟಿದ್ದ ಕೊಡದಲ್ಲಿ ಬೆಣ್ಣೆ ಎಷ್ಟಿದೆ ಎಂದು ತಿಳಿಯಲು ತನ್ನ ಕೈಯನ್ನೇ ಅದರೊಳಗೆ ಪೂರ್ಣವಾಗಿ ಬಿಟ್ಟು ಅಳೆದು, ಬಹಳ ರುಚಿಕರವಾದ ಆ ಬೆಣ್ಣೆಯನ್ನು ಒಮ್ಮೆಲೇ ಒಟ್ಟಿಗೆ ತಿಂದು ಮುಗಿಸಲು ಇಷ್ಟಬಾರದೆ, ಮುಗಿದು

ಹೋಗುತ್ತದಲ್ಲಾ ಎಂದು, ಅದನ್ನು ಮುಟ್ಟಿ ಮುಟ್ಟಿ ತನ್ನ ಕೈಯಿಗೆ ಅಂಟಿಕೊಂಡಿದ್ದ ಅಲ್ಪಸ್ವಲ್ಪ ಬೆಣ್ಣೆಯನ್ನು ಚಾಪಲ್ಯದಿಂದ ನೆಕ್ಕುತ್ತಾ ನಿಂತಿರಲು, ಅದನ್ನು ಕಂಡು ಕುಪಿತಳಾದ ಯಶೋದೆಯು, ಇವನನ್ನು ಚೆನ್ನಾಗಿ ಹೊಡೆದು ಇವನು ಮತ್ತೊಮ್ಮೆ ಹೀಗೆ ಮಾಡದಂತೆ ಮಾಡುತ್ತೇನೆಂದು ಸೆಣಬಿನ ಹಗ್ಗವೊಂದನ್ನು ತೆಗೆದುಕೊಂಡು ಬಂದಳು. ಆಗ ತಾವರೆಯ ಹೂವಿನಂತೆಯೂ, ಎಳೆಯ ಚಿಗುರಿನಂತೆಯೂ ಇದ್ದ ಕೃಷ್ಣನ ಕೈಗಳನ್ನು ಕಂಡು, ತನ್ನ ಮಾತೃವಾತ್ಸಲ್ಯದ ಕೋಡಿ ಹರಿದು, ಹೊಡೆಯಲು ಇಷ್ಟ ಬಾರದಿದ್ದರೂ, ಅವನನ್ನು ಭಯಪಡಿಸುವ ಸಲುವಾಗಿ, ಹೊಡೆಯಲು ಉದ್ಯುಕ್ತಳಾಗಿ ಹೊಡೆಯುವವಳಂತೆ ನಟಿಸುತ್ತಾಳೆ. ಅಷ್ಟರೊಳಗೆ ಶ್ರೀಕೃಷ್ಣನು ತಾನು ಕೇವಲ ಬೆಣ್ಣೆಯನ್ನೇ ತಿಂದ—ಎಂದು ತನ್ನ ತಾಯಿಯು ತಿಳಿಯದಿರಲೆಂದು, ಪಕ್ಕದಲ್ಲಿಯೇ ಇದ್ದ ಮೊಸರಿನ ಪಾತ್ರೆಯಲ್ಲಿದ್ದ ಮೊಸರನ್ನೂ ಕೈಯಿಂದ ತೆಗೆದು ಕುಡಿದು, ಕೈಗೆ ಅಂಟಿಕೊಂಡಿದ್ದ ಮೊಸರನ್ನು ತನ್ನ ಬಾಯಿ ಸುತ್ತಲೂ ಸವರಿಕೊಂಡು ತಾಯಿಯು, ತನ್ನನ್ನು ಎಲ್ಲಿ ಹೊಡೆಯುತ್ತಾಳೆಯೋ–ಎಂದು ಅಳುತ್ತಾ ಭಯದಿಂದ ಆಕೆಯನ್ನೇ ನೋಡುತ್ತಾ, ಭಯದಿಂದ ಅದಿರುತ್ತಿರುವ ತುಟಿಗಳಿಂದ ಕೂಡಿ, ಮತ್ತೊಮ್ಮೆ ತಾನು ಈ ತಪ್ಪನ್ನು ಮಾಡುವುದಿಲ್ಲವೆಂದೂ, ಈಗ ಮಾಡಿದುದು ತಪ್ಪಾಯಿತು, ಕ್ಷಮಿಸಬೇಕೆಂದು ಬೇಡಿಕೊಳ್ಳುತ್ತಾ ಕೈಮುಗಿದು ನಮಸ್ಕರಿಸುತ್ತಾ ನಿಂತುದುದನ್ನು ಕಂಡ ಯಶೋದಾದೇವಿಯು, ಅನಾದಿಸಿದ್ಧವಾಗಿ, ಉಪನಿಷತ್ತುಗಳಲ್ಲಿ ಪ್ರತಿಪಾದ್ಯವಾದ ಆನಂದಮಯ ಸ್ವರೂಪನಾದ ಪರಬ್ರಹ್ಮನ ಸಾಕ್ಷಾತ್ಕಾರವನ್ನು ಪಡೆದು ಪರಿಪೂರ್ಣ ಬ್ರಹ್ಮಾನಂದವನ್ನೇ ಅನುಭವಿಸಿದಳು.

ಪರಮಾತ್ಮನು ವಿಭವಾವತಾರದಲ್ಲಿ ಲೀಲಾವಿಭೂತಿಯಲ್ಲಿ ಮಾಡಿರುವ ಒಂದೊಂದು ಲೀಲಾಚೇಷ್ಟಿತವೂ ಒಂದೊಂದು ವಿಧವಾದ ತತ್ತ್ವವನ್ನು ಹೊರಗೆಡಹುತ್ತದೆ. ಅದರಲ್ಲಿ 'ನವನೀತ ಚೋರ ಪ್ರಸಂಗವೂ' ಅತ್ಯುತ್ತಮವಾದ ತತ್ತ್ವವನ್ನು ಬೋಧಿಸುವುದರಿಂದ, ಎಲ್ಲ ಆಚಾರ್ಯರ ಮನವನ್ನೂ ಇದು ಸೆಳೆಯುತ್ತದೆ. ಈ ಪ್ರಸಂಗವನ್ನು ಎಲ್ಲ ಆಳ್ವಾರಾಚಾರ್ಯರು ಅನುಭವಿಸಿ ಪರಮಾತ್ಮನ ಈ ಲೀಲಾ ಕೃತ್ಯಕ್ಕೆ ಮನಸೋತಿದ್ದಾರೆ. ಈ ವಿಷಯವನ್ನು ವೇದಾಂತ ದೇಶಿಕರು ತಮ್ಮ 'ಗೋಪಾಲವಿಂಶತಿ'ಯೆಂಬ ಸ್ತೋತ್ರದಲ್ಲಿ "ಹರ್ತುಂ ಕುಂಭೇ ವಿನಿಹಿತಕರಃ ಸ್ವಾದು ಹೈಯ್ಯಂಗವೀನಂ । ದೃಷ್ಟ್ವಾ ದಾಮಗ್ರಹಣಚಟುಲಾಂ ಮಾತರಂ ಜಾತರೋಷಾಮ್ ॥ ಪಾಯಾದೀಷತ್ ಪ್ರಚಲಿತಪದಃ ನಾಪಗಚ್ಛನ್ ನತಿಷ್ಠನ್, ಮಿಥ್ಯಾಗೋಪಃ ಸಪದಿ ನಯನೇ ಮೀಲಯನ್ ವಿಶ್ವಗೋಪ್ತಾ ॥"—ಎಂಬ ಶ್ಲೋಕದಲ್ಲಿ ಹೃದಯಂಗಮವಾಗಿ ವರ್ಣಿಸಿದ್ದಾರೆ. ಇದರ ತತ್ತ್ವಾರ್ಥ ಇಂತಿದೆ :—

ಪ್ರಕೃತಿಯ ಬಂಧಕ್ಕೆ ಒಳಗಾಗದ ಚೇತನ ಹಾಲಿನಂತೆ ಪರಿಶುದ್ಧನಾಗಿರುತ್ತಾನೆ. ಕರ್ಮಬಂಧದಿಂದ ಉಂಟಾದ ಪ್ರಕೃತಿ ಪರಿಣಾಮರೂಪವಾದ ದೇಹವು ಮೊಸರಿ-

ನಂತಿರುತ್ತವೆ. ಹಾಲು ಮೊಸರು ಮಿಶ್ರವಾದಾಗ ಹಾಲು ತನ್ನ ಗುಣವನ್ನು ಕಳೆದು-ಕೊಂಡು ಮೊಸರಿನ ಗುಣವನ್ನು ಹೊಂದುವಂತೆ, ವಿಕಾರವನ್ನು ಹೊಂದದ ಪರಿಶುದ್ಧ-ನಾದ, ಆನಂದಮಯನಾಗಿ ಪರಿಶುದ್ಧನಾಗಿ ಅಣುಸ್ವರೂಪಿಯಾದ ಚೇತನನು, ವಿಕಾರಗಳಿಗೆ ಆಸ್ಪದವಾದ ದೇಹದೊಳಗೆ ಸೇರಿ, ತನ್ನ ಸ್ವರೂಪವನ್ನು ಮರೆತು, ದೇಹದ ಧರ್ಮಗಳನ್ನು ತನ್ನಲ್ಲಿ ಆರೋಪಿಸಿಕೊಂಡು, ಅಣುಸ್ವರೂಪನಾದ ತನ್ನಲ್ಲಿ ಇಲ್ಲದ, ದೇಹಗತವಾದ ಧರ್ಮಗಳಿಂದ, ತಾನು ದಪ್ಪನಾಗಿದ್ದಾನೆ, ತಾನು ಕೃಶನಾಗಿದ್ದಾನೆ, ತಾನು ಕುಂಟ, ತಾನು ಕುರುಡ, ತಾನು ದುಃಖಿ, ಇತ್ಯಾದಿ ವ್ಯವಹಾರಗಳಿಂದ ಕೂಡಿದವನಾಗಿರುತ್ತಾನೆ. ಆಗ ಆಚಾರ್ಯೋಪದೇಶವೆಂಬ ಹಗ್ಗದಿಂದ ಕಟ್ಟಿ ತನ್ನ 'ಬುದ್ಧಿ' ಎಂಬ ಕಡೆಗೋಲಿನಿಂದ ತನ್ನನ್ನು ತಾನೇ ಕಡೆದು-ಕೊಂಡರೆ, ಬೆಣ್ಣೆಯಂತೆ ಪರಿಶುದ್ಧನಾದ ಜೀವಾತ್ಮ ಮೇಲೆ ನಿಲ್ಲುತ್ತಾನೆ. ಅಂದರೆ ಆಚಾರ್ಯರಿಂದ ತತ್ತ್ವೋಪದೇಶವನ್ನು ಪಡೆದು, ತನ್ನ ಬುದ್ಧಿಯಿಂದ ವಿಚಾರಣೆ ಮಾಡಿದರೆ, ಆಗ ಮೊಸರಿನಲ್ಲಿಯೇ ಇರುವ ಬೆಣ್ಣೆಯಂತೆ, ದೇಹದಲ್ಲಿಯೇ ಇದ್ದರೂ ಜೀವಾತ್ಮನು, ತಾನು ಪ್ರಕೃತಿಗತವಾದ ದೇಹಕ್ಕಿಂತಲೂ ಬೇರೆ, ತಾನು ಕುಂಟುತನ ಕುರುಡುತನ ಇತ್ಯಾದಿ ದೇಹಧರ್ಮಗಳಿಗೆ ಒಳಗಾದವನಲ್ಲ, ತನ್ನ ಸ್ವರೂಪವೇನಿದ್ದರೂ ಮತ್ತೊಬ್ಬರಿಗೇ ಭೋಗ್ಯಭೂತವಾಗಿರುವ ಬೆಣ್ಣೆಯಂತೆ, ಪರಮಾತ್ಮನಿಗೆ ಭೋಗ್ಯ ಭೂತವಾಗಿರುತ್ತದೆ. ಆದುದರಿಂದ ತನ್ನನ್ನು ಪರಮಾತ್ಮನಿಗೆ ಅರ್ಪಣೆ ಮಾಡಿ, ಅವನ ಕೈಂಕರ್ಯವನ್ನು ಮಾಡುವುದೇ ತನ್ನ ಸ್ವರೂಪವೆಂದು ಚೇತನನಿಗೆ ಅರಿವುಂಟಾಗಿ, ಪರಮಾತ್ಮನನ್ನು ಸಾಕ್ಷಾತ್ಕರಿಸಿ ಅರ್ಪಿಸಬೇಕೆಂದು, ಅವನ ಬರುವಿಕೆ-ಯನ್ನೇ ಎದುರು ನೋಡುತ್ತಾ ದೇಹವೆಂಬ ಕೊಡದಲ್ಲಿ ನವನೀತವೆಂಬ ಶುದ್ಧ ಚೇತನವನ್ನು ಇಟ್ಟುಕೊಂಡು ಕಾಯುತ್ತಿರುವಲ್ಲಿ, "ಶೌರೇಃ ನಿತ್ಯ ಹೃದ್ಯೋಽಪಿ ಜೀವಃ"—ಎಂದು ಹೇಳಿದಂತೆ, ತನಗೆ ಪರಮಭೋಗ್ಯಭೂತವಾದ ನವನೀತ ಸದೃಶವಾದ ಚೇತನನ್ನು ಅಪಹರಿಸಲು, ಈ ಕೊಡವೆಂಬ ದೇಹದಲ್ಲಿ ಮುಳುಗಿ ಮೈಗೆಲ್ಲಾ ಬೆಣ್ಣೆ ಮೊಸರನ್ನು ಅಂಟಿಸಿಕೊಂಡಂತೆ, ದೇಹ ಮತ್ತು ಜೀವಾತ್ಮರಿಬ್ಬರಿಗೂ ಅಂತರ್ಯಾಮಿಯಾಗಿ ಇರುವ ತನ್ನ ಸ್ವರೂಪವನ್ನು ತೋರ್ಪಡಿಸಿಕೊಳ್ಳುತ್ತಾನೆ. ಆಗ ನಾವೂ ನಮ್ಮ ಭಕ್ತಿ ಎಂಬ ಪಾಶದಿಂದ ನವನೀತ ಚೋರನನ್ನು ಕಟ್ಟಿ-ಹಾಕಬೇಕು. ಆಗ ಭಕ್ತಪರಾಧೀನನಾದ ಅವನು ನಾವು ಹೇಳಿದಂತೆಲ್ಲಾ ಕೇಳುತ್ತೇನೆಂದು ಹೇಳುತ್ತಾ ತನ್ನ ನಾನಾ ತರಹದ ನರ್ತನವನ್ನು ಮಾಡುತ್ತಾ, ಅದನ್ನು ಸಾಕ್ಷಾತ್ಕರಿಸುವಂತೆ ಮಾಡಿ ನಮಗೆ ಪರಿಪೂರ್ಣ ಬ್ರಹ್ಮಾನಂದವನ್ನೇ ಅನುಗ್ರಹಿಸಿಕೊಡುತ್ತಾನೆ. ||೮||

ಕುನ್ರಿನಾಲ್ ಕುಡೈಕವಿತ್ತದುಂ ಕೋಲ
ಕ್ಕುರವೈಕೋತ್ತದುಂ ಕುಡಮಾಟ್ಟುಂ

ಕನ್ರಿನಾಲ್ ವಿಳವೆರಿಂದದುಂ ಕಾಲಾಲ್
ಕಾಳಿಯನ್ತಲೈ ಮಿದಿತ್ತದುಂ ಮುದಲಾ
ವೆನ್ರಿಶೇರ್ ಪಿಳ್ಳೈ ನಲ್ವಿಳೈಯಾಟ್ಟನೈ
ಅನ್ನೈತ್ತಿಲುಂ ಅಂಗೆನ್ನುಳ್ಳಮುಳ್‌ಕುಳಿರ
ಒನ್ರುಂ ಕಂಡಿಡ ಪೆತ್ತಿಲೇನಡಿಯೇನ್
ಕಾಣುಮಾರಿನಿಯುಂಡೆನಿಲರುಳೇ ||೯||

**ಕುನ್ರಿನಾಲ್** = (ಇಂದ್ರನಿಂದುಂಟಾದ ಮಳೆಯಿಂದ ಗೋವುಗಳಿಗೂ ಗೋಕುಲದ ಜನರಿಗೂ ಉಂಟಾದ ತೊಂದರೆಯನ್ನು ನೀಗಲು) ಗೋವರ್ಧನ ಗಿರಿಯನ್ನು, **ಕುಡೈ** = ಒಂದು ಕೊಡೆಯಂತೆ, **ಕವಿತ್ತದುಂ** = ಧರಿಸಿ ನಿಂತುದುದೂ, **ಕೋಲವನ್** = ಸುಂದರವಾದ, **ಕುರವೈಕೊತ್ತದುಂ** = ರಾಸಕ್ರೀಡೆಯಲ್ಲಿ ಗೋಪ-ಕನ್ಯೆಯರೊಡನೆ ಕೂಡಿಕೊಂಡು ಆಡಿದುದೂ, **ಕುಡಮಾಟ್ಟುಂ** = ಕುಂಭನರ್ತನ ಮಾಡಿದುದೂ, **ಕನ್ರಿನಾಲ್** = ಚಿಕ್ಕ ಕರುವಿನಂತೆ ಬಂದ ವತ್ಸಾಸುರನಿಂದಲೇ, **ವಿಳವು** = ಬೇಲದಕಾಯಿನ ರೂಪದಲ್ಲಿದ್ದ ಕಪಿತ್ಥಾಸುರನನ್ನು, **ಎರಿಂದದುಂ** = ಮೇಲೆ ಎಸೆದು ಇಬ್ಬರೂ ಏಕಕಾಲದಲ್ಲಿ ಸಾಯುವಂತೆ ಮಾಡಿದುದೂ, **ಕಾಲಾಲ್** = ತನ್ನ ಪಾದದಿಂದಲೇ, **ಕಾಳಿಯನ್** = ಕಾಳಿಂಗ ಸರ್ಪದ, **ತಲೈ** = ಹೆಡೆಯನ್ನು, **ಮಿದಿತ್ತು-ಅದುಮುದಲ್** = ತುಳಿದುದೇ ಮೊದಲಾದ, **ವೆನ್ರಿ** = ಜಯವನ್ನು, ಗಳಿಸಿದ ನಿನ್ನ ಲೀಲಾಕೃತ್ಯಗಳೂ, **ಪಿಳ್ಳೈ** = ಬಾಲಲೀಲೆಗಳೂ, **ಶೇರ್** = ಕೂಡಿಕೊಂಡಿರುವ, **ನಲ್** = ಅತಿಮನೋಹರವಾದ, **ಅಂಗು** = ಅಲ್ಲಿ ನೀನು ಆಡಿದ **ವಿಳೈಯಾಟ್ಟುಂ ಅನ್ನೈತ್ತಿಲುಂ** = ನಿನ್ನ ಎಲ್ಲ ಆಟಗಳನ್ನೂ, **ಎನ್ ಉಳ್ಳಂ** = ನನ್ನ ಮನಸ್ಸು, **ಉಳ್‌ಕುಳಿರ** = ಒಳಗೇ ಹರ್ಷಿಸುವಂತೆ, **ಅಡಿಯೇನ್** = (ಇವುಗಳನ್ನು ನೋಡುವುದೇ ಪ್ರಯೋಜನವಾಗಿ ಉಳ್ಳ) ನಾನು, **ಒನ್ರುಂ** = ಈ ನಿನ್ನ ಚೇಷ್ಟಿತಗಳಲ್ಲಿ ಯಾವುದೊಂದನ್ನೂ, **ಕಂಡಿಡಪೆತ್ತಿಲೇನ್** = ಕಾಣುವಂತಹ ಭಾಗ್ಯವನ್ನು ಪಡೆದುಕೊಂಡು ಬಂದಿಲ್ಲ. **ಇನಿ** = ಇನ್ನು ಮುಂದಾದರೂ, **ಕಾಣು-ಮಾರು** = ಈ ರೀತಿಯಾದ ನಿನ್ನ ಲೀಲಾಚೇಷ್ಟಿತಗಳನ್ನು ಕಾಣುವಂತಹ ಭಾಗ್ಯವು, **ಉಂಡೆನಿಲ್** = ಒದಗುವುದಾದರೆ, **ಅರುಳ್** = (ಅದನ್ನು ಒದಗಿಸಿಕೊಟ್ಟು) ಕೃಪೆಮಾಡು. ||೯||

ಇಂದ್ರನಿಂದುಂಟಾದ ಮಳೆಯಿಂದ, ಗೋವುಗಳಿಗೂ, ಗೋಪಾಲಕರಿಗೂ ಉಂಟಾದ ತೊಂದರೆಯನ್ನು ನೀಗಲು, ಗೋವರ್ಧನಗಿರಿಯನ್ನು ಏಳು ದಿನಗಳ ಕಾಲ ನಿರಂತರವಾಗಿ ತನ್ನ ಕಿರುಬೆರಳಿನಿಂದ ಹೊತ್ತು ಕೊಡೆಯನ್ನು ಧರಿಸಿದವನಂತೆ ನಿರಾಯಾಸವಾಗಿ ನಿಂತುದುದೂ; ಯಮುನಾ ತೀರದಲ್ಲಿ ಆಡಿದ ಸುಂದರವಾದ ರಾಸಕ್ರೀಡೆಯಲ್ಲಿ ಗೋಪಬಾಲಕರೊಡನೆ ಕೂಡಿಕೊಂಡು ಆಡಿದುದೂ, ಕುಂಭನರ್ತನ

ಮಾಡಿದುದೂ, ನಿನ್ನನ್ನು ಕೊಲ್ಲಬೇಕೆಂದೇ ಬಂದು ಮರದ ಮೇಲೆ ಒಂದು ಬೇಲದ ಕಾಯಿನ ರೂಪದಲ್ಲಿದ್ದು ನಿನ್ನ ಬರುವಿಕೆಯನ್ನೇ ನಿರೀಕ್ಷಿಸುತ್ತಿದ್ದ ಕಪಿತ್ಥಾಸುರನನ್ನು, ಅದೇ ಉದ್ದೇಶ್ಯದಿಂದ ಒಂದು ಚಿಕ್ಕ ಕರುವಿನ ರೂಪದಲ್ಲಿ ಬಂದು ನಿನ್ನ ಮೇಲೆ ಹಾದ ವತ್ಸಾಸುರನನ್ನು ಕವಣೆಯ ಕಲ್ಲಿನಂತೆ ಮೇಲೆಸೆದು ಕಪಿತ್ಥಾಸುರನಿಗೆ ಹೊಡೆದು ಇಬ್ಬರೂ ಏಕಕಾಲದಲ್ಲಿ ಮರಣವನ್ನು ಅಪ್ಪುವಂತೆ ಮಾಡಿದುದೂ, ತನ್ನ ಕಾಲಿಂದ ತುಳಿಯುತ್ತಾ ಕಾಳಿಂಗನ ಹೆಡೆಯುಮೇಲೆ ನರ್ತನ ಮಾಡಿದುದೂ—ಇವೇ ಮೊದಲಾದ ನಿನ್ನ ವೀರಕೃತ್ಯಗಳೂ ಬಾಲಲೀಲೆಗಳೂ ಕೂಡಿಕೊಂಡಿರುವ ಅತಿಮನೋಹರವಾದ ಲೀಲಾಚೇಷ್ಟಿತಗಳಲ್ಲಿ ಯಾವ ಒಂದನ್ನೂ ನೋಡಿ ನನ್ನ ಮನಸ್ಸು ಹರ್ಷಿಸುವ ಭಾಗ್ಯವನ್ನು ನಾನು ಪಡೆಯಲಿಲ್ಲ. ಇನ್ನು ಮುಂದಾದರೂ, ಈ ತರಹವಾದ ನಿನ್ನ ಲೀಲಾಚೇಷ್ಟಿತಗಳನ್ನು ಕಾಣುವ ಭಾಗ್ಯವನ್ನು ನಾನು ಪಡೆಯಲು ಸಾಧ್ಯವಾಗುವು-ದಾದರೆ, ಅದನ್ನು ನೀನು ನನಗೆ ಕರುಣಿಸಿ ಅನುಗ್ರಹಿಸು. ||೯||

**ವಂಜಮೋವಿಯ ನೆಂಜುಡ್ೈ ಪ್ಪೇಯ್ಚ್ಚಿ**
**ವರಂಡುನಾರ್ ನರಂಬೆಳಕ್ಕರಿನ್ದುಕ್ಕ**
**ನಂಜಮಾರ್ಕರುಶುಳಿ ಮುಲ್ೈಯನ್ದೋ**
**ಶುವೈತ್ತುನೀಯುದುಳ್ ಶೆಯ್ದುವಳನ್ದಾಯ್**
**ಕಂಜನಾಳ್ ಕವರ್ ಕರುಮುಗಿಲೆನ್ದಾಯ್**
**ಕಡೈಪ್ಪಟ್ಟೇನ್ ವೆರಿದೇ ಮುಲ್ೈ ಶುಮನ್ದು**
**ತಂಜಮೇಲೊನ್ರಿಲೇನ್ ಉಯಿರ್ನ್ದಿದುನ್ದೇನ್**
**ತಕ್ಕದೇನಲ್ಲತಾಯ್ೈ ಪೆತ್ತಾಯೇ ||೧೦||**

**ವಂಜಂ** = ವಂಚನೆ ಮಾಡುವುದರಲ್ಲಿಯೇ, **ಮೋವಿಯ** = ತುಂಬಿದ, **ನೆಂಜುಡ್ೈ**=ಮನಸ್ಸಿನಿಂದ ಕೂಡಿದ, **ಪೇಯ್ಚ್ಚಿ**=ಅಸುರೆಯಾದ ಪೂತನಿಯು, **ವರಂಡು ಎಳ** = ಮಾಂಸರುಧಿರಾದಿಗಳು ಹೊರಬರುವಂತೆಯೂ, **ನಾರು-ನರುಂಬು**=ಉಳಿದಿರುವ ನರಗಳ ಸಮೂಹಗಳೂ, **ಕರಿನ್ದು ಉಕ್ಕ**=ಸಡಿಲಗೊಂಡು ಬೀಳುವಂತೆ, **ನಂಜಂ**=ವಿಷದಿಂದಲೇ, **ಆರುತರು**=ಪೂರ್ಣವಾಗಿ ತುಂಬಿದ್ದ, **ಶುಳಿಮುಲ್ೈ** = ದುಂಡಗಿದ್ದ ಸ್ತನಗಳನ್ನು, **ನೀ**=ನೀನು, **ಶುವೈತ್ತರುಳ್-ಶೆಯ್ದು**=ರುಚಿಕರವಾಗಿರುವಂತೆ ಆಸ್ವಾದಿಸಿ, **ವಳರ್ನ್ದಾಯ್**=ಅದನ್ನೇ ಧಾರಕವನ್ನಾಗಿ ಹೊಂದಿರುವವನಂತೆ ಹರ್ಷಿಸಿ ನಿಂತು ಬೆಳದೆ, **ಅಂದೋ**=ಆಶ್ಚರ್ಯ ! **ಕಂಜನ್**=ಕಂಸನ, **ನಾಳ್**=ಆಯುಸ್ಸನ್ನು, **ಕವರ್**=ಅಪಹರಿಸಿದವನಾಗಿ, **ಕರು**=ಕಪ್ಪಗಿರುವ, **ಮುಕಿಲ್** = ಮೇಘದಂತಿರುವ, **ಎಂದಾಯ್** = ನನ್ನ ಸ್ವಾಮಿಯೇ! **ವೆರಿದೇ**=ವ್ಯರ್ಥವಾಗಿ, **ಮುಲ್ೈ**=ಮುಲ್ೈಗಳನ್ನು, **ಶುಮನ್ದು** = (ನಿನಗೆ ಮೊಲೆಹಾಲನ್ನುಣಿಸದೆ) ಹೊತ್ತು, **ಕಡೈಪ್ಪಟ್ಟೇನ್**=ಎಲ್ಲರಿಗಿಂತಲೂ

ನಿಕೃಷ್ಟಳಾಗಿದ್ದೇನೆ. **ತಂಜಂ ಒನ್ರಿಲೇನ್**=ಧಾರಕವಾಗಿ ಬೇರೊಂದನ್ನೂ ನಾನು ಹೊಂದಿಲ್ಲ. **ಉಯಿರ್‌ನ್ದಿರುನ್ದೇನ್**=ಕೇವಲ ಪ್ರಾಣಗಳನ್ನು ಮಾತ್ರ ಧರಿಸಿದ್ದೇನೆ. **ತಕ್ಕದು** = ನಿನಗೆ ತಕ್ಕವಳಾದ, **ನಲ್ಲತಾಯಿ್** = ಒಳ್ಳೆಯ ತಾಯಿಯನ್ನು (ಯಶೋದೆಯನ್ನೂ, ಪೂತನಿಯನ್ನೂ) **ಪೆತ್ತಾಯ್**=ನೀನು ಪಡೆದೆ. ||೧೦||

ನಿನಗೆ ವಂಚನೆಯನ್ನು ಮಾಡಬೇಕೆಂದು ತುಂಬಿದ ಮನಸ್ಸಿನಿಂದ ನಿನ್ನ ಬಳಿಗೆ ಬಂದ ಅಸುರೆಯಾದ ಪೂತನಿಯ ರಕ್ತಮಾಂಸಗಳು ಹೊರಬರುವಂತೆಯೂ, ದೇಹದಲ್ಲಿ ಉಳಿದಿರುವ ನರಗಳ ಸಮೂಹಗಳು ಸಡಿಲಗೊಂಡು ಬೀಳುವಂತೆಯೂ, ವಿಷದಿಂದಲೇ ಪೂರ್ಣವಾಗಿ ತುಂಬಿದ್ದ ಆ ಪೂತನಿಯ ದುಂಡಗಿದ್ದ ಸ್ತನಗಳನ್ನು—"ರಸ್ಯಮಾಸೀದ್ ಜನಾರ್ಧನಃ"—ಎಂದು ಹೇಳುವಂತೆ ರುಚಿಕರವಾಗಿರುವಂತೆ ಆಸ್ವಾದಿಸಿ, ಆ ಸ್ತನಗಳನ್ನೇ ನಿನ್ನ ಬದುಕಿಗೆ ಧಾರಕವನ್ನಾಗಿ ಹೊಂದಿರುವವನಂತೆ, ಅದರ ಆಸ್ವಾದನೆಯಿಂದ ಹರ್ಷಿತನಾಗಿ ನಿಂತು ಬೆಳೆದೆ. ಇದೇನಿದು ನಿನ್ನ ಆಶ್ಚರ್ಯಕರವಾದ ಚೇಷ್ಟಿತ! ಕಂಸನ ಆಯುಸ್ಸನ್ನು ಅಪಹರಿಸಿದವನಾಗಿ, ನೀಲಮೇಘಶ್ಯಾಮನಾಗಿ ನಿಂತಿರುವ ನನ್ನ ಸ್ವಾಮಿಯೇ! ನಿನಗೆ ಮೊಲೆಹಾಲನ್ನುಣಿಸದೆ ವ್ಯರ್ಥವಾಗಿ ಮೊಲೆಗಳನ್ನು ಹೊತ್ತಿರುವ ನಾನು ಸ್ತ್ರೀಯರಲ್ಲಿಯೇ ಬಹಳ ನಿಕೃಷ್ಟಳಾಗಿದ್ದೇನೆ. ಧಾರಕವಾಗಿ ಬೇರೊಂದನ್ನೂ ನಾನು ಹೊಂದಿಲ್ಲ; ಕೇವಲ ಪ್ರಾಣಗಳನ್ನು ಮಾತ್ರ ಧರಿಸಿದ್ದೇನೆ. ನೀನಾದರೋ, ನಿನ್ನ ಋಜು ಸ್ವಭಾವಕ್ಕೆ ಯೋಗ್ಯಳಾದ ಯಶೋದೆಯನ್ನೂ, ನಿನ್ನ ಮಾಯಾಗುಣಕ್ಕೆ ತಕ್ಕವಳಾದ ಪೂತನಿಯನ್ನೂ, ನಿನ್ನ ತಾಯಿಯನ್ನಾಗಿ ಹೊಂದಿದೆ. ||೧೦||

ಮಲ್ಲೈಮಾನಗರ್ಕಿರೈಯವನ್ತನ್ನೈ
ವಾನ್‌ಶೆಲುತ್ತಿವಂದೀಂಗಣ್ಣೈ ಮಾಯುತ್ತು
ಎಲ್ಲೈಯಿಲ್ ಪಿಳ್ಳೈ ಶೆಯ್‌ವನ ಕಾಣಾ
ತೆಯ್‌ವತ್ತೇವಕಿ ಪುಲಂಬಿಯ ಪುಲಂಬಲ್
ಕೊಲ್ಲಿಕಾವಲನ್ ಮಾಲಡಿ ಮುಡಿಮೇಲ್
ಕೋಲಮಾಂಕುಲಶೇಖರನ್ ಶೊನ್ನ
ನಲ್ಲಿಶೈತ್ತಮಿಳ್‌ಮಾಲೈ ವಲ್ಲಾರ್‌ಗಳ್
ನಣ್ಣುವಾರೊಲ್ಲೈ ನಾರಣನುಲಗೇ ||೧೧||

**ಮಲ್ಲೈ**=ಅತ್ಯಧಿಕವಾದ ಸಂಪತ್ತನ್ನು ಹೊಂದಿರುವ, **ಮಾ**=ಶ್ಲಾಘ್ಯವಾದ, **ನಗರ್ಕು**=ಮಥುರಾಪುರಿಗೆ, **ಇರೈಯವನ್ ತನ್ನೈ**=ರಾಜನಾದ ಕಂಸನನ್ನು (ಕೊಂಡು), **ವಾನ್**=ಅವನು ವೀರಸ್ವರ್ಗವನ್ನು ಸೇರುವಂತೆ, **ಶೆಲುತ್ತಿ**=ಅವನನ್ನು ಕಳುಹಿಸಿಕೊಟ್ಟು, **ಈಂಗಣ್ಣೈ**=ಈ ಲೀಲಾವಿಭೂತಿಯಲ್ಲಿ, **ವಂದು**=

ಒಂದು, ಎಲ್ಲೈಯಿಲ್=ಎಲ್ಲೆಯಿಲ್ಲದ, **ಮಾಯತ್ತು**=ಆಶ್ಚರ್ಯ ಚೇಷ್ಟಿತ-ಗಳನ್ನು ಮಾಡಿದ ಶ್ರೀಕೃಷ್ಣನ, **ಪಿಳ್ಳೈಶೆಯ್‌ವನ** = ಬಾಲಚೇಷ್ಟಿತಗಳನ್ನು, **ಕಾಣಾ**=ಕಾಣದಿದ್ದು, **ತಿರ್‌ವಂ** = ಇವನನ್ನು ಮಗನಾಗಿ ಹಡೆಯುವ ಒಂದು ಭಾಗ್ಯವನ್ನು ಮಾತ್ರ ಹೊಂದಿದ, **ದೇವಕಿಪಿರಾಟ್ಟಿ**=ದೇವಕೀದೇವಿಯು, **ಪುಲಂಬಿಯ**=ತನ್ನ ದುಃಖವನ್ನು ಹೊರಗೆಡಹುವಂತೆ ಅಳುತ್ತಾ ಹೇಳಿದ ಮಾತು-ಗಳನ್ನು, **ಪುಲಂಬಲ್**=(ತಿಳಿಸುವ) ಪಾಶುರ (ಪದ್ಯ)ಗಳನ್ನು, **ಕೊಲ್ಲಿ**='ಕೊಲ್ಲಿ' ಎಂಬ ಕುಲಕ್ಕೆ, **ಕಾವಲನ್**=ನಿರ್ವಾಹಕರಾಗಿ, **ಮಾಲ್**=ಸರ್ವೇಶ್ವರನಾದ ಶ್ರೀಮನ್ನಾರಾಯಣನ, **ಅಡಿ** = ತಿರುವಡಿಗಳನ್ನೇ, **ಮುಡಿಮೇಲ್**=ತನ್ನ ಶಿರಸ್ಸಿನಲ್ಲಿ, **ಕೋಲಮಾಂ** = ಅಲಂಕಾರವಾಗಿ ಧರಿಸಿರುವವರಾದ, **ಕುಲ-ಶೇಖರನ್**=ಕುಲಶೇಖರಾಳ್ವಾರ್‌ರವರು, **ಶೊನ್ನ**=ಕೃಪೆಯಿಂದ ಹಾಡಿಕೊಟ್ಟಿರುವ, **ನಲ್**=ಸುಂದರವಾದ, **ಇಶೈ**=ರಾಗದಿಂದ ಕೂಡಿದ, **ತಮಿಳ್‌ಮಾಲೈ**= ಈ ತಮಿಳಿನ ಪದ್ಯಮಾಲೆಯನ್ನು, **ವಲ್ಲಾರ್‌ಕಳ್**=ಅರ್ಥಸಹಿತವಾಗಿ ತಿಳಿದು ಅಭ್ಯಾಸ ಮಾಡುವವರು, **ಒಲ್ಲೈ**=ಶೀಘ್ರವಾಗಿ, **ನಾರಣನ್**=ಶ್ರೀಮನ್ನಾರಾ-ಯಣನ, **ಉಲಹು** = ಶ್ರೀವೈಕುಂಠ ಲೋಕವನ್ನು, **ನಣ್ಣುವಾರ್**= ಹೊಂದುವವರಾಗುತ್ತಾರೆ.

ಅತ್ಯಧಿಕವಾದ ಸಂಪತ್ತನ್ನು ಹೊಂದಿರುವ ಶ್ಲಾಘ್ಯವಾದ ಮಥುರಾಪುರಿಗೆ ರಾಜನಾಗಿದ್ದ ಕಂಸನನ್ನು ಕೊಂದು, ತನ್ನ ಕೈಯಿಂದಲೇ, ತನ್ನನ್ನು ಅಂತ್ಯಕಾಲದಲ್ಲಿ ನೋಡಿಕೊಂಡೇ ಅವನು ಪ್ರಾಣವನ್ನು ನೀಗಿದುದರಿಂದ ಅವನು ವೀರಸ್ವರ್ಗವನ್ನು ಸೇರುವಂತೆ ಅವನನ್ನು ಕಳುಹಿಸಿಕೊಟ್ಟು, ಈ ಲೀಲಾವಿಭೂತಿಯಲ್ಲಿ ಅವತರಿಸಿ ಎಲ್ಲೆಯಿಲ್ಲದ ಆಶ್ಚರ್ಯ ಚೇಷ್ಟಿತಗಳನ್ನು ಮಾಡಿದ ಶ್ರೀಕೃಷ್ಣನ ಬಾಲಚೇಷ್ಟಿತ-ಗಳನ್ನು ಕಾಣುವ ಭಾಗ್ಯವನ್ನು ಪಡೆಯದೆ, ಅವನನ್ನು ತನ್ನ ಮಗನಾಗಿ ಹಡೆಯುವ ಭಾಗ್ಯವೊಂದನ್ನು ಮಾತ್ರ ಹೊಂದಿದ ದೇವಕೀದೇವಿಯು, ತನ್ನ ದುಃಖವನ್ನು ಹೊರಗೆಡಹುತ್ತಾ ಅಳುತ್ತಾ ಹೇಳಿದ ಮಾತುಗಳನ್ನು, ಅದೇ ಭಾವದಿಂದ 'ಕೊಲ್ಲಿ'-ಎಂಬ ಕುಲಕ್ಕೆ ನಿರ್ವಾಹಕರಾಗಿ, ಶ್ರೀಮನ್ನಾರಾಯಣನ ತಿರುವಡಿಗಳನ್ನೇ ತನ್ನ ಶಿರಸ್ಸಿನಲ್ಲಿ ಅಲಂಕಾರವಾಗಿ ಧರಿಸಿರುವವರಾದ, ಕುಲಶೇಖರಾಳ್ವಾರ್‌ರವರು ಕೃಪೆಯಿಂದ ಹಾಡಿಕೊಟ್ಟಿರುವ, ಸುಂದರವಾದ ರಾಗದಿಂದ ಕೂಡಿದ ಈ ತಮಿಳಿನ ಪದ್ಯಮಾಲೆಯನ್ನು, ಅರ್ಥಸಹಿತವಾಗಿ ತಿಳಿದು ಅಭ್ಯಾಸಮಾಡುವವರು, ಶೀಘ್ರವಾಗಿ ಶ್ರೀಮನ್ನಾರಾಯಣನ ಶ್ರೀವೈಕುಂಠಲೋಕವನ್ನು ಹೊಂದುವವರಾಗುತ್ತಾರೆ— ಎಂದು ಸಪ್ತಮ ದಶಕಕ್ಕೆ ಫಲಶ್ರುತಿಯನ್ನು ಹಾಡಿ ಆಳ್ವಾರರು ಈ ದಶಕವನ್ನು ಮುಗಿಸಿದ್ದಾರೆ. ||೧೧||

# ಪೆರುಮಾಳ್ ತಿರುಮೊಳಿ — ಎಂಟನೆಯ ದಶಕ

ಅವತರಣಿಕೆ : ಕೃಷ್ಣನನ್ನು ಮಗನಾಗಿ ತನ್ನ ಗರ್ಭದಲ್ಲಿ ಹೊತ್ತು ಹಡೆಯುವ ಭಾಗ್ಯವೊಂದನ್ನು ಪಡೆದಿದ್ದರೂ, ದೇವಕಿದೇವಿಯು ಅವನ ಬಾಲ್ಯಲೀಲಾನುಭವ ರೂಪ ದಾರಿದ್ರ್ಯದಿಂದ ನಿರ್ವೇದಕ್ಕೊಳಗಾಗಿ ವಿಲಪಿಸಿದ ವೃತ್ತಾಂತವನ್ನಾದರೋ ಹಿಂದಿನ ದಶಕದಲ್ಲಿ ವರ್ಣಿಸಿದರು. "ಏಕಸಂಬಂಧಿ ಜ್ಞಾನಂ ಅಪರಸಂಬಂಧಿ ಸ್ಮಾರಕಂ" (ಒಂದು ವಸ್ತುವಿನ ಸಂಬಂಧದಿಂದ ಉಂಟಾದ ಜ್ಞಾನವು, ಮತ್ತೊಂದು ವಸ್ತುವಿನ ಸಂಬಂಧವನ್ನು ಸ್ಮರಣೆಗೆ ತರಲು ಕಾರಣವಾಗಿರುತ್ತದೆ) ಎಂದು ಹೇಳುವಂತೆಯೇ, ದೇವಕಿದೇವಿಯ ಸ್ಮರಣವು, ಅವಳ ಪುತ್ರನಾಗಿ ಅವತರಿಸಿದ ಪರಮಾತ್ಮನಿಗೆ ರಾಮಾ-ವತಾರ ಕಾಲದಲ್ಲಿ ಜನ್ಮವನ್ನು ಕೊಟ್ಟು ತಾಯಿಯೆನಿಸಿಕೊಂಡ ಕೌಸಲ್ಯಾದೇವಿಯ ವೃತ್ತಾಂತವನ್ನು ಆಳ್ವಾರರಿಗೆ ಸ್ಮರಣೆಗೆ ತಂದಿತು. ಕೌಸಲ್ಯಾದೇವಿಯು ದೇವಕಿ-ಯಂತೆ ದೌರ್ಭಾಗ್ಯಶಾಲಿಯಲ್ಲ. ಶ್ರೀರಾಮಚಂದ್ರನನ್ನು ಮಗನಾಗಿ ಹಡೆದುದು ಮಾತ್ರವಲ್ಲದೆ, ಬಾಲಲೀಲಾ ಚೇಷ್ಟಿತಗಳೆಲ್ಲವನ್ನೂ ಕಣ್ಣಾರೆ ಕಂಡು ಅನುಭವಿಸಿ ಸಂತುಷ್ಟಳಾದವಳು. ಆದರೆ, ಭಗವಾನ್ ವಾಲ್ಮೀಕಿ ಮಹರ್ಷಿಗಳು ತಮ್ಮ ಶ್ರೀಮದ್ರಾಮಾಯಣದಲ್ಲಿ ಬಾಲಕಾಂಡದ ಹದಿನೆಂಟನೆಯ ಸರ್ಗದಲ್ಲಿ ಶ್ರೀರಾಮಾವ-ತಾರವನ್ನು ವರ್ಣಿಸಿ, ಅವನ ಬಾಲಲೀಲೆಗಳಾವುದನ್ನೂ ವರ್ಣಿಸದೆಯೇ, ಅದೇ ಸರ್ಗದಲ್ಲಿಯೇ ಅವನ ಹದಿನೈದನೆಯ ವರ್ಷದಲ್ಲಿ, ಅವನು ವಿಶ್ವಾಮಿತ್ರನನ್ನು ಹಿಂಬಾಲಿಸಿ ಯಜ್ಞಸಂರಕ್ಷಣೆಗೆ ಹೋದುದನ್ನು ಬಣ್ಣಿಸಿದ್ದಾರೆ. ಮಹರ್ಷಿಗಳು ಹೇಳದಿದ್ದರೂ, ತಾಯಿಯಾದ ಕೌಸಲ್ಯೆಯು ತನ್ನ ಮಾತೃವಾತ್ಸಲ್ಯದಿಂದ, ಶಿಶುವಾದ ರಾಮಚಂದ್ರನನ್ನು ನಾನಾರೀತಿಯಲ್ಲಿ ಆಡಿಸಿಯೇ ಇದ್ದಾಳೆ. ಅದರಲ್ಲೂ ಅವನು ಶಿಶುವಾಗಿರುವಲ್ಲಿ, ಅವನನ್ನು ಸುಂದರವಾದ ತೊಟ್ಟಿಲಿನಲ್ಲಿ ಮಲಗಿಸಿ, ಅನೇಕ ವಿಧವಾದ ಮಧುರವಾದ ಗೀತೆಗಳನ್ನು ಹಾಡುತ್ತಾ ಅವನಿಗೆ ಲಾಲಿಗಳನ್ನು ಹಾಡಿಯೇ ಇದ್ದಾಳೆ. ಆದರೆ, ಈ ವಿಷಯವನ್ನು ಯಾವ ಒಂದು ಇತಿಹಾಸ ಪುರಾಣ-ಗಳಲ್ಲಾಗಲೀ ಇತರ ದಿವ್ಯಸೂರಿಗಳಾದ ಆಳ್ವಾರರುಗಳ ದಿವ್ಯಪ್ರಬಂಧಗಳಲ್ಲಾಗಲೀ— ಎಲ್ಲಿಯೂ ಹಾಡಲ್ಪಟ್ಟಿಲ್ಲ. ಇದು ಒಂದು ದೊಡ್ಡ ನ್ಯೂನತೆಯೆಂದು ಭಾವಿಸಿ ಕುಲಶೇಖರಾಳ್ವಾರ್ರವರು ಕೌಸಲ್ಯೆಯ ಭಾವವನ್ನು ತಾವು ಪಡೆದುಕೊಂಡು, ತಮ್ಮ ಮನವೆಂಬ ಮುತ್ತಿನ ತೊಟ್ಟಿಲಿನಲ್ಲಿ ಶ್ರೀರಾಮಚಂದ್ರನನ್ನು ಮಲಗಿಸಿ, ಅವನಿಗೆ ಸುಖನಿದ್ರೆಯುಂಟಾಗಲು ಈ ದಶಕದ ಹತ್ತು ಹಾಡುಗಳಲ್ಲಿ . ಲಾಲಿಯನ್ನು ಮಧುರವಾಗಿ ಹಾಡಿದ್ದಾರೆ. ಆದರೆ, ಈ ಹಾಡುಗಳೆಲ್ಲವೂ 'ತಿರುಕ್ಕಣ್ಣಪುರಂ'— ಎಂಬ ದಿವ್ಯಕ್ಷೇತ್ರದಲ್ಲಿ ಬಿಜಯಮಾಡಿಸಿರುವ, 'ಶೌರಿರಾಜಪ್ಪೆರುಮಾಳ್' ವಿಷಯಕ-ವಾಗಿ ಹಾಡಲ್ಪಟ್ಟಿದೆ.

**ಮನ್ನುಪುಗಳ್ ಕೌಸಲ್ತೈರ್ತ ಮಣಿವಯಿರು ವಾಯ್ತ್ತವನೇ**
**ತೆನ್ನಿಲಂಗ್ಯೆಕ್ಕೋನ್ಮುಡಿಗಳ್ ಶಿನ್ದು ವಿತ್ತಾಯ್ ಶೆವ್ವೊಪ್ನ್ ಶೇರ್**
**ಕನ್ನಿನನ್ ಮಾಮದಿಳ್ ಪುಡೈಶೂಳ್ ಕಣಪುರತ್ತೆನ್ ಕರುಮಣಿಯೇ**
**ಎನ್ನುಡೈಯ ವಿನ್ನಮುದೇ ! ಇರಾಘವನೇ ! ತಾಲೇಲೊ ||೧||**

**ಮನ್ನು**=ಸ್ಥಿರವಾಗಿ ನೆಲೆ ನಿಂತ, **ಪುಕಳ್**=ಕೀರ್ತಿಯನ್ನು ಹೊಂದಿರುವ, **ಕೌಸಲ್ತೈತನ್** = ಕೌಸಲ್ಯಾದೇವಿಯಾದ (ನನ್ನ), **ಮಣಿ** = ಸುಂದರವಾದ, **ವಯಿರು**=ಪವಿತ್ರವಾದ ಗರ್ಭದಲ್ಲಿದ್ದು, **ವಾಯ್ತ್ತವನೇ**=ಅವತರಿಸಿದವನೇ ! **ತೆನ್**=ದಕ್ಷಿಣ ದಿಕ್ಕಿನಲ್ಲಿರುವ, **ಇಲಂಗ್ಯೆ**=ಲಂಕಾಪುರಿಗೆ, **ಕೋನ್**=ರಾಜನಾಗಿದ್ದ ರಾವಣನ, **ಮುಡಿಕಳ್**=ಹತ್ತು ತಲೆಗಳನ್ನೂ, **ಶಿನ್ದು ವಿತ್ತಾಯ್**=ಚದುರಿ ಬೀಳುವಂತೆ ಮಾಡಿ, **ಶೆವ್ವೊಪ್ನ್ ಶೇರ್**=ಅಮೂಲ್ಯವಾದ ಸ್ವರ್ಣದಿಂದ ಮಾಡಲ್ಪಟ್ಟಿರುವ, **ಕನ್ನಿ**=ಅಳಿವಿಲ್ಲದ, **ನಲ್**=ವಿಲಕ್ಷಣವಾದ, **ಮಾ**=ಶ್ಲಾಘ್ಯವಾದ, **ಮದಿಳ್**=ಬೆಟ್ಟ-ಗುಡ್ಡಗಳ ತೋಪುಗಳಿಂದ, **ಪುಡೈ**=ನಾಲ್ಕೂ ದಿಕ್ಕುಗಳಲ್ಲಿಯೂ, **ಶೂಳ್** = ಸುತ್ತುವರಿಯಲ್ಪಟ್ಟಿರುವ, **ಕಣಪುರತ್ತು**=ತಿರುಕ್ಕಣ್ಣಪುರದಲ್ಲಿ ಬಿಜಯಮಾಡಿಸಿರುವ, **ಎನ್**=ನನ್ನ, **ಕರುಮಣಿಯೇ**=ನೀಲಮಣಿಯಂತಿರುವವನೇ ! **ಎನ್ನುಡೈಯ**=ನನಗೆ, **ಇನ್ನಮುದೇ**=ಭೋಗ್ಯವಾಗಿ ಅಮೃತದಂತಿರುವವನೇ !, **ಇರಾಘವನೇ** = ಶ್ರೀರಾಮಚಂದ್ರನೇ ! **ತಾಲೇಲೋ**=(ನಿನಗೆ ಸುಖನಿದ್ರೆ ಉಂಟಾಗಲಿ) ಪವಡಿಸು ||೧||

ಪರಮಾತ್ಮನಿಗೆ ಜನ್ಮವಿತ್ತವಳೆಂದು ಲೋಕದಲ್ಲೆಲ್ಲಾ ಸ್ಥಿರವಾಗಿ ನೆಲೆನಿಂತ ಕೀರ್ತಿಯನ್ನು ಹೊಂದಿರುವ ಕೌಸಲ್ಯಾದೇವಿಯಾದ (ನನ್ನ) ಪವಿತ್ರವಾದ ಗರ್ಭದಲ್ಲಿದ್ದು ಅವತರಿಸಿದವನೇ ! ದಕ್ಷಿಣ ದಿಕ್ಕಿನಲ್ಲಿರುವ ಲಂಕಾಪುರಿಗೆ ರಾಜನಾಗಿದ್ದ ರಾವಣನ ಹತ್ತು ತಲೆಗಳನ್ನೂ ಚದುರಿ ಬೀಳುವಂತೆ ಮಾಡಿ, ಅಳಿವಿಲ್ಲದ, ವಿಲಕ್ಷಣವಾದ, ಶ್ಲಾಘ್ಯವಾದ, ಬೆಟ್ಟಗುಡ್ಡಗಳಿಂದಲೂ ತೋಪುಗಳಿಂದಲೂ, ನಾಲ್ಕೂ ಕಡೆಯೂ ಸುತ್ತುವರಿಯಲ್ಪಟ್ಟು ಅಮೂಲ್ಯವಾದ ಸ್ವರ್ಣದಿಂದ ಮಾಡಲ್ಪಟ್ಟಿರುವಂತಿರುವ ತಿರುಕ್ಕಣ್ಣಪುರದಲ್ಲಿ ಬಿಜಯಮಾಡಿಸಿರುವ ನನ್ನ ನೀಲಮಣಿಯಂತಿರುವವನೇ ! ನನಗೆ ಭೋಗ್ಯವಾಗಿ ಅಮೃತದಂತಿರುವ ರಾಘವನೇ–ನಿನಗೆ ಸುಖನಿದ್ರೆ ಯುಂಟಾಗಲು ಪವಡಿಸು.

(ಈ ಹಾಡಿನಲ್ಲಿ ಕೌಸಲ್ಯೆ ರಾಮನನ್ನು ಕುರಿತು ಹೇಳಿದಾಗ ನನ್ನ ಮಗನೇ ! —ಎಂದೂ, ಆಳ್ವಾರರು 'ಕೌಸಲ್ಯೆಯ ಮಗ'ನೆಂದು ಸಂಬೋಧಿಸಿರುವಂತೆಯೂ ತಿಳಿಯಬೇಕು. ಈ ಹಾಡಿನಲ್ಲಿ 'ರಾವಣ ಸಂಹಾರ'ದ ಪ್ರಸ್ತಾಪ ಮಾಡಿದ್ದಾರೆ. ಕೌಸಲ್ಯೆ ರಾಮನ ಶೈಶವದಲ್ಲಿ ಈ ಹಾಡನ್ನು ಹಾಡುವಲ್ಲಿ ರಾವಣನ ಸಂಹಾರವೇ

ಆಗಿರಲಿಲ್ಲ. ಆದುದರಿಂದ ಈ ರೀತಿ ಹಾಡಿದುದು ಅಸಂಗತವೆಂದು ಭಾವಿಸಬಾರದು. ಇಲ್ಲಿ ಆಳ್ವಾರರು, ರಾಮನ ವಿಷಯದಲ್ಲಿ ಕೌಸಲ್ಯೆಗಿದ್ದ ಮಾತೃವಾತ್ಸಲ್ಯ, ಪ್ರೇಮ, ಮೊದಲಾದ ಭಾವನೆಗಳನ್ನು ಮಾತ್ರ ಪಡೆದುಕೊಂಡು ಈ ಪದ್ಯಗಳನ್ನು ಹಾಡುತ್ತಿದ್ದಾರೆ. ಕಾಲದ ದೃಷ್ಟಿಯಿಂದ ಈ ರಾಮಾವತಾರ ಪರಿಪೂರ್ಣವಾಗಿ ನಡೆದ ಬಳಿಕ, ತಾನು ಅವತರಿಸಿದಾಗ ತನಗೆ ಪೂರ್ವದಲ್ಲಿ ನಡೆದಿರುವ ಶ್ರೀರಾಮ-ಚಂದ್ರನ ಲೀಲಾಕೃತ್ಯಗಳನ್ನು ಸ್ಮರಣೆ ಮಾಡಿಕೊಂಡು ಹಾಡುವುದರಿಂದ ಇದರಲ್ಲಿ ಯಾವ ವಿಧವಾದ ಅಸಾಂಗತ್ಯ ಮೊದಲಾದ ದೋಷವೂ ಇರುವುದಿಲ್ಲ. ಮುಂದಿನ ಪದ್ಯಗಳಲ್ಲಿಯೂ ಈ ರೀತಿಯಾದ ಪ್ರಕರಣಗಳಲ್ಲಿ ಹೀಗೆಯೇ ಭಾವಿಸುವುದು).

**ಪುಂಡರೀಕಮಲರದನ್ಮೇಲ್ ಭುವನಿಯೆಲ್ಲಾಂ ಪಡೈತ್ತವನೇ ।**
**ಕಣ್ಡವರ್‌ತಂ ಮನಂ ವಳಙ್ಗುಂ ಕಣಪುರತ್ತೆನ್ ಕರುಮಣಿಯೇ ।**
**ತಿಣ್‌ತಿರಲಾಳ್ ತಾಟಕೈತನ್ ಉರಮುರುವಚ್ಚಿಲೈವಳೈತ್ತಾಯ್ ।**
**ಎಣ್ದಿಶೈಯುಮಾಳುಡೈಯಾಯ್! ಇರಾಘವನೇ! ತಾಲೇಲೋ ॥೨॥**

**ಪುಂಡರೀಕಮಲರದನ್ಮೇಲ್** = ನಾಭಿಕಮಲದಲ್ಲಿ, **ಭುವನಿಯೆಲ್ಲಾಂ**= ಲೋಕಗಳೆಲ್ಲವನ್ನೂ, **ಪಡೈತ್ತವನೇ**=(ಚತುರ್ಮುಖ ಬ್ರಹ್ಮನ ಮುಖಾಂತರ ಸೃಷ್ಟಿಸಿ) ಪಡೆದವನೇ ! **ತಿಣ್**=ದೃಢವಾದ, **ತಿರಲಾಳ್**=ಬಲವನ್ನು ಹೊಂದಿದ್ದ, **ತಾಟಕೈತನ್**=ತಾಟಕಿಯ, **ಉರಂ**=ಎದೆಯಲ್ಲಿ, **ಉರುವ**=ಸೀಳಿಕೊಂಡು ಹೊರಗೆ ಹೋಗುವಂತೆ, **ಶಿಲೈವಳೈತ್ತಾಯ್**=ಬಾಣಪ್ರಯೋಗ ಮಾಡಿದವನೇ ! **ಕಂಡವರ್‌ತಂ** = ದರ್ಶನ ಮಾಡಿದವರು, **ಮನವ್‌ವಳಂಗುಂ** = ತನ್ನನ್ನೇ ತಾನು ಸಮರ್ಪಿಸಿಕೊಳ್ಳುವಂತೆ ಮಾಡುವವನೇ ! (ಮೋಹಕಸ್ವರೂಪನೇ !) ಅಥವಾ ದರ್ಶಕರಿಗೆ ತನ್ನನ್ನೇ ಕೊಡುವಂತಹ ಮನಸ್ಸುಳ್ಳವನೇ ! (ಭಕ್ತಪರಾಧೀನನೇ !) **ಕಣಪುರತ್ತು** = ತಿರುಕ್ಕಣ್ಣಪುರದಲ್ಲಿ ಬಿಜಯ ಮಾಡಿಸಿರುವ, **ಎನ್ ಕರು-ಮಣಿಯೇ**=ನನ್ನ (ಸರ್ವವಿಧವಾದ ದುಃಖವನ್ನೂ ಹೋಗಲಾಡಿಸುವ) ನೀಲಮಣಿ-ವರ್ಣನೇ ! **ಎಣ್‌ದಿಶೈಯುಂ** = ಎಂಟು ದಿಕ್ಕುಗಳಲ್ಲಿರುವವರನ್ನೂ, **ಆಳುಡೈ-ಯಾಯ್** = ದಾಸರನ್ನಾಗಿ ಹೊಂದಿರುವವನೇ ! **ಇರಾಘವನೇ** = ಶ್ರೀರಾಮ ಚಂದ್ರನೇ ! **ತಾಲೇಲೋ**=ಪವಡಿಸು. ॥೨॥

ಪ್ರಪಂಚದ ಸೃಷ್ಟಿಸ್ಥಿತಿಲಯಗಳಿಗೆ ಕಾರಣನಾಗಿರುವ, ಶ್ರೀರಾಮಚಂದ್ರನಾಗಿ ಅವತರಿಸಿರುವ, ಶ್ರೀಮನ್ನಾರಾಯಣನೇ ಪ್ರಪಂಚ ಸೃಷ್ಟಿಯ ಸಮಯದಲ್ಲಿ ತನ್ನ ನಾಭಿಕಮಲದಲ್ಲಿಯೇ ಚತುರ್ಮುಖ ಬ್ರಹ್ಮನನ್ನು ಸೃಷ್ಟಿಸಿ, ಅವನ ಮುಖಾಂತರ ಹದಿನಾಲ್ಕು ಲೋಕಗಳನ್ನೂ ಸೃಷ್ಟಿಸುತ್ತಾನೆ. ಈ ವಿಷಯವನ್ನು ಸಂಕೀರ್ತನ ಮಾಡುತ್ತಾ ಆಳ್ವಾರರು ಹಾಡುತ್ತಾರೆ—'ನಾಭಿಕಮಲದಲ್ಲಿ ಚತುರ್ಮುಖ ಬ್ರಹ್ಮನ

ಮುಖಾಂತರ ಸೃಷ್ಟಿಸಿದ ಲೋಕಗಳೆಲ್ಲವನ್ನೂ ಪಡೆದವನೇ! ದೃಢವಾದ ಬಲವನ್ನು ಹೊಂದಿದ್ದ ತಾಟಕಿಯ ಎದೆಯನ್ನು ಭೇದಿಸಿಕೊಂಡು ಹೋಗುವಂತೆ ಬಾಣಪ್ರಯೋಗ ಮಾಡಿ ತಾಟಕಾವಧೆಯನ್ನು ಮಾಡಿದವನೇ! ನಿನ್ನ ಮನಮೋಹಕ ರೂಪದಿಂದ, ನಿನ್ನನ್ನು ದರ್ಶನ ಮಾಡಿದವರು ತಾವಾಗಿಯೇ ತಮ್ಮ ಸರ್ವಸ್ವವನ್ನೂ ನಿನಗೇ ಅರ್ಪಣೆ ಮಾಡುವಂತೆ ಮನಸ್ಸನ್ನು ತಾಳುವಂತೆ ಮಾಡುವವನೇ!, ನಿನ್ನ ಭಕ್ತ ಪರಾಧೀನತ್ವ ಗುಣದಿಂದ ನಿನ್ನನ್ನು ದರ್ಶನ ಮಾಡಿದವರಿಗೆ ನಿನ್ನನ್ನೇ ಅರ್ಪಿಸಿ-ಕೊಳ್ಳುವ ಮನಸ್ಸುಳ್ಳವನೇ!, ತಿರುಕ್ಕಣ್ಣಪುರದಲ್ಲಿ ಬಿಜಯಮಾಡಿಸಿರುವ ಶೌರಿರಾಜನೇ! ನನ್ನ (ಸರ್ವವಿಧವಾದ ದುಃಖವನ್ನೂ ಹೋಗಲಾಡಿಸಿ ಮನಸ್ಸಿಗೆ ತಂಪನ್ನುಂಟುಮಾಡುವ) ನೀಲಮಣಿವರ್ಣನೇ! ನಿತ್ಯವಿಭೂತಿ ಮತ್ತು ಲೀಲಾವಿಭೂತಿ —ಎಂಬ ಉಭಯವಿಭೂತಿ ನಾಯಕನಾಗಿ ಎಂಟೂ ದಿಕ್ಕುಗಳಲ್ಲಿರುವ ಎಲ್ಲ ಚೇತನ-ರನ್ನೂ ದಾಸರನ್ನಾಗಿ ಹೊಂದಿ, ಚೇತನಾಚೇತನಗಳೆಲ್ಲರಿಗೂ ಸ್ವಾಮಿಯಾಗಿರುವ ರಾಘವನೇ! ಪವಡಿಸು'—ಎಂದು. ||೨||

**ಕೊಂಗುಮಲಿಕರುಂ ಕುಳಲಾಳ್ ಕೌಸಲ್ಯೈತನ್ ಕುಲಮುದಲಾಯ್**
**ತಂಗು ಪೆರುಂಪುಹಳ್ ಜನಕನ್ ತಿರುಮರುಕಾ ದಾಶರಥೀ**
**ಕಂಗೈಯಿಲುಂ ತೀರ್ಥಮಲಿ ಕಣಪುರತ್ತೆನ್ ಕರುಮಣಿಯೇ**
**ಎಂಗಳ್ ಕುಲತ್ತಿನ್ನಮುದೇ ರಾಘವನೇ! ತಾಲೇಲೋ** ||೩||

**ಕೊಂಗುಮಲಿ** = ಪರಿಮಳಭರಿತವಾದ, **ಕರು** = ಕಪ್ಪಗಿರುವ, **ಕುಳ-ಲಾಳ್** = ಕುಂತಲವನ್ನು ಹೊಂದಿರುವ, **ಕೌಸಲ್ಯೈತನ್** = ಕೌಸಲ್ಯಾದೇವಿಯ (ನನ್ನ) **ಕುಲಂ**=ಕುಲಕ್ಕೇ, **ಮುದಲಾಯ್**=ಉತ್ತಾರಕನಾದ ಮಗನಾಗಿ, **ತಂಗು**=ಸ್ತುತ್ಯವಾದ ಗುಣಗಳೆಲ್ಲವೂ ತಂಗಿ ನಿಲ್ಲೈ ನಿಲ್ಲುವಂತಿರುವ, **ಪೆರು**= ಮಹತ್ವವುಳ್ಳ, **ಪುಕಳ್**=ಕೀರ್ತಿಯನ್ನು ಹೊಂದಿರುವ, **ಜನಕನ್**=ಜನಕ ಮಹಾರಾಜನ, **ತಿರುಮರುಕಾ**=ಶ್ರೇಷ್ಠನಾದ ಅಳಿಯನೇ! **ದಾಶರಥೀ**=ದಶರಥ ಚಕ್ರವರ್ತಿಯ ಮಗನೇ!, **ಕಂಗೈಯಿಲುಂ** = ಗಂಗಾನದಿಗಿಂತಲೂ, **ತೀರ್ಥಂ-ಮಲಿ**=ಅಧಿಕವಾದ ಪಾವಿತ್ರ್ಯವನ್ನು ಹೊಂದಿರುವ ತಟಾಕಗಳನ್ನು ಹೊಂದಿರುವ, **ಕಣಪುರತ್ತು** = ತಿರುಕ್ಕಣ್ಣಪುರದಲ್ಲಿ ಬಿಜಯ ಮಾಡಿಸಿರುವ, **ಎನ್ಕರು-ಮಣಿಯೇ**=ನನ್ನ ನೀಲಮಣಿವರ್ಣನೇ!, **ಎಂಗಳ್ಕುಲಂ**=ನಮ್ಮ ರಾಜ ಮನೆತನಕ್ಕೆ, **ಇನ್**=ಭೋಗ್ಯವಾಗಿರುವ, **ಅಮುದೇ**=ಅಮೃತದಂತಿರುವವನೇ, **ಇರಾಘವನೇ**=ಶ್ರೀರಾಮಚಂದ್ರನೇ, **ತಾಲೇಲೋ**=ಪವಡಿಸು. ||೩||

ಪರಿಮಳಭರಿತವಾದ ಕಪ್ಪಗಿರುವ ಕುಂತಲವನ್ನು ಹೊಂದಿರುವ ಕೌಸಲ್ಯಾ-ದೇವಿಯ ಕುಲಕ್ಕೆ ಉತ್ತಾರಕನಾಗಿಯೂ, ಎಲ್ಲರಿಂದಲೂ ಸ್ತುತ್ಯರ್ಹವಾದ ಗುಣ-

ಗಳಿಲ್ಲವೂ ಒಂದೆಡೆ ತಂಗಿ ನಿಲ್ಲೈ ನಿಲ್ಲುವಂತಿರುವ ಮಹತ್ವವುಳ್ಳ ಕೀರ್ತಿಶಾಲಿಯಾದ ಜನಕಮಹಾರಾಜನ ಅಳಿಯನಾಗಿಯೂ, ದಶರಥ ಚಕ್ರವರ್ತಿಯ ಮಗನಾಗಿಯೂ, ಗಂಗಾನದಿಗಿಂತಲೂ ಅಧಿಕವಾದ ಪಾವಿತ್ರ್ಯವನ್ನು ಹೊಂದಿರುವ ತಟಾಕಗಳಿಂದ ಕೂಡಿದ ತಿರುಕ್ಕಣ್ಣಪುರದಲ್ಲಿ ಬಿಜಯ ಮಾಡಿಸಿರುವ, ನನ್ನ ನೀಲಮಣಿವರ್ಣನಾದ ಶೌರಿರಾಜನೇ! ನಮ್ಮ ರಾಜಮನೆತನಕ್ಕೆ ಭೋಗ್ಯವಾಗಿರುವ ಅಮೃತಸ್ವರೂಪನಾದ ಶ್ರೀರಾಮಚಂದ್ರನೇ! ನಿನಗೆ ಸುಖನಿದ್ರೆಯುಂಟಾಗಲು ಪವಡಿಸು. ||೩||

**ತಾಮರೈಮೇಲ್ ಅಯನವನೈ ಪಡೈತ್ತವನೇ! ತಯರದನ್‌ತನ್**
**ಮಾಮದಲಾಯ್! ಮೈಥಿಲಿತನ್ ಮಣವಾಳಾ! ವಂಡಿನಂಗಳ್**
**ಕಾಮರಂಗಳಿಶೈಪಾಡುಂ ಕಣಪುರತ್ತೆನ್ ಕರುಮಣಿಯೇ**
**ಏಮರುವೆಞ್ಜಿಲೈವಲವಾ! ಇರಾಘವನೇ! ತಾಲೇಲೋ** ||೪||

**ತಾಮರೈಮೇಲ್** = ನಾಭಿಕಮಲದ ಮೇಲೆ, **ಅಯನವನೈ** = ಚತುರ್ಮುಖ ಬ್ರಹ್ಮನನ್ನು, **ಪಡೈತ್ತವನೇ** = ಸೃಷ್ಟಿಸಿದವನೇ!, **ತಯರದನ್‌ತನ್** = ದಶರಥ ಮಹಾರಾಜನ, **ಮಾಮತಲಾಯ್** = ಜ್ಯೇಷ್ಠಪುತ್ರನಾಗಿ, **ಮೈಥಿಲಿತನ್** = ಸೀತಾದೇವಿಗೆ, **ಮಣವಾಳಾ** = ಪತಿಯಾದವನೇ!, **ವಂಡಿನಂಗಳ್** = ಭ್ರಮರ ಸಮೂಹಗಳು, **ಕಾಮರಂಗಳ್** = ಝೇಂಕರಿಸುವಿಕೆ ಎಂಬ, **ಇಶೈ** = ಗಾನವನ್ನು, **ಪಾಡುಂ** = ಹಾಡುತ್ತಿರುವ, **ಕಣಪುರತ್ತು** = ತಿರುಕ್ಕಣ್ಣಪುರದಲ್ಲಿ ಬಿಜಯ ಮಾಡಿಸಿರುವ, **ಎನ್‌ಕರುಮಣಿಯೇ** = ನನ್ನ ನೀಲಮಣಿವರ್ಣನೇ!, **ಏಮರುವು** = ಬಾಣಗಳಿಂದ ಅಲಂಕರಿಸಲ್ಪಟ್ಟ, **ವೆಮ್** = ತೀಕ್ಷ್ಣವಾದ, **ಶಿಲೈ** = 'ಶಾಂರ್ಙ್ಗ'— ಎಂಬ ಬಿಲ್ಲನ್ನು ಹೊಂದಿರುವ, **ವಲವಾ** = ಸಮರ್ಥನಾದ, **ಇರಾಘವನೇ** = ಶ್ರೀರಾಮಚಂದ್ರನೇ!, **ತಾಲೇಲೋ** = ಪವಡಿಸು. ||೪||

ನಾಭಿಕಮಲದಲ್ಲಿ ಚತುರ್ಮುಖ ಬ್ರಹ್ಮನನ್ನು ಪಡೆದುಕೊಂಡಿರುವವನೇ! ದಶರಥ ಚಕ್ರವರ್ತಿಯ ಜ್ಯೇಷ್ಠಪುತ್ರನಾಗಿ ಅವತರಿಸಿ, ಸೀತಾದೇವಿಯ ಭರ್ತಾ-ವಾದವನೇ! ಸುತ್ತಲೂ ದುಂಬಿಗಳ ಸಮೂಹವು ತಮ್ಮ ಝೇಂಕರಿಸುವಿಕೆಯೆಂಬ ಗಾನಮಾಡುತ್ತಿರುವ ತಿರುಕ್ಕಣ್ಣಪುರದಲ್ಲಿ ಬಿಜಯಮಾಡಿಸಿರುವ ಶೌರಿರಾಜನೇ! ನನ್ನ ನೀಲಮಣಿವರ್ಣನೇ! ಬಾಣಗಳಿಂದ ಅಲಂಕರಿಸಲ್ಪಟ್ಟ ಶಾರ್ಙ್ಗವೆಂಬ ಧನುಸ್ಸನ್ನು ಹೊಂದಿ ಸಮರ್ಥನಾದ ಶ್ರೀರಾಮನೇ! ಪವಡಿಸು. ||೪||

**ಪಾರಾಳುಂ ಪಡೆರ್‌ಶೆಲ್ವಂ ಪರದನಮ್ಬಿಕ್ಕೇಯರುಳಿ**
**ಆರಾವನ್ಬಿಳೈಯವನೋಡು ಅರುಂಗಾನಮಡೈನ್ದವನೇ!**
**ಶೀರಾಳುಂ ವರೈ ಮಾರ್ಪಾ! ತಿರುಕ್ಕಣ್ಣಪುರತ್ತರಶೇ!**
**ತಾರಾಳುಂ ನೀಣ್‌ಮುಡಿಯೆನ್ ದಾಶರಥೀ! ತಾಲೇಲೋ** ||೫||

**ಪಾರ್**=ಇಡೀ ಭೂಮಂಡಲವನ್ನೇ, **ಆಳುಂ**=ಆಳುವಂತಹ, **ಪೆರ್**= ಬಹಳ ಹಿರಿದಾದ, **ಶೆಲ್ವಂ**=ರಾಜ್ಯ ಸಂಪತ್ತನ್ನು, **ನಂಬಿ**=ಪಾರತಂತ್ರ್ಯಾದಿ ಗುಣಗಳಿಂದ ಪೂರ್ಣನಾದ, **ಪರತನುಕ್ಕೇ**=ಭರತನಿಗೇ, **ಅರುಳಿ**=ಅನುಗ್ರಹಿಸಿ ಕೊಟ್ಟು, **ಆರಾ**=ಅಪರ್ಯಾಪ್ತವಾದ, **ಅನ್ಬು**=ಕೈಂಕರ್ಯರುಚಿಯನ್ನು ಹೊಂದಿರುವ, **ಇಳೈಯವನೋಡು**=ತಮ್ಮನಾದ ಲಕ್ಷ್ಮಣನೊಡನೆ, **ಅರುಂ**= ಸಂಚರಿಸಲು ಕಷ್ಟಕರವಾದ ಗಹನವಾದ, **ಕಾನಂ**=ಅರಣ್ಯವನ್ನು, **ಅಡೈನ್ದವನೇ**= ಪ್ರವೇಶಿಸಿದವನೇ !, **ಶೀರಾಳುಂ**=ವೀರಶ್ರೀಗೆ ವಾಸಸ್ಥಾನವಾದ, **ವರೈ**= ಬೆಟ್ಟದಂತೆ ದೃಢವಾದ, **ಮಾರ್ಪಾ**=ವಕ್ಷಸ್ಥಲವನ್ನು ಹೊಂದಿದವನಾಗಿ, **ತಿರುಕ್ಕಣ್ಣಪುರತ್ತು**=ತಿರುಕ್ಕಣ್ಣಪುರಕ್ಕೆ, **ಅರಶೇ**=ನಿರ್ವಾಹಕನಾಗಿ, **ತಾರ್ ಆರುಂ**=ಮಾಲೆಯಿಂದ ಕೂಡಿ, **ನೀಳ್**=(ಅಧಿರಾಜ್ಯಸೂಚಕವಾಗಿ) ನೀಳ-ವಾಗಿರುವ, **ಮುಡಿ**=ಪಟ್ಟಾಭಿಷೇಕವನ್ನೂ ಹೊಂದಿದ ಮುಡಿಯಿಂದ ಕೂಡಿದ, **ಎನ್**=ನನ್ನ ದಾಶರಥಿಯೇ !, **ತಾಲೇಲೋ**=ಪವಡಿಸು. ||೫||

ಪರಿಪೂರ್ಣವಾದ ಭೂಮಂಡಲವನ್ನೇ ಆಳುವಂತಹ, ಅತಿ ಹಿರಿದಾದ ರಾಜ್ಯ ಸಂಪತ್ತನ್ನೂ, ಪಾರತಂತ್ರ್ಯಾದಿ ಗುಣಗಳಿಂದ ಪೂರ್ಣನಾದ ಭರತನಿಗೆ ಅನುಗ್ರಹಿಸಿ ಕೊಟ್ಟು, ಎಷ್ಟು ಮಾಡಿದರೂ ಮತ್ತೂ ಮಾಡಬೇಕೆಂಬ–ಮೇಲೆ ಮೇಲೆ ಆಸೆಯನ್ನುಂಟುಮಾಡುವ ಭಗವಂತನ ಕೈಂಕರ್ಯಶ್ರೀಯಲ್ಲೇ ರುಚಿಯನ್ನು ಹೊಂದಿರುವ, ತಮ್ಮನಾದ ಲಕ್ಷ್ಮಣನೊಡನೆ ಯಾರಿಂದಲೇ ಆದರೂ ಸಂಚರಿಸಲು ಕಷ್ಟಕರವಾದ ಗಹನವಾದ ಅರಣ್ಯವನ್ನು ಪ್ರವೇಶಿಸಿದವನೇ !, ವೀರಶ್ರೀಗೆ ವಾಸಸ್ಥಾನವಾದ, ಬೆಟ್ಟದಂತೆ ದೃಢವಾದ ವಕ್ಷಸ್ಥಲವನ್ನು ಹೊಂದಿದವನಾಗಿ, ತಿರುಕ್ಕಣ್ಣಪುರಕ್ಕೆ ನಿರ್ವಾಹಕನಾಗಿ, ಅಧಿರಾಜ್ಯಸೂಚಕವಾಗಿ, ಮಾಲೆಯಿಂದ ಅಲಂಕೃತವಾದ ಪಟ್ಟಾಭಿಷೇಕವನ್ನು ಹೊಂದಿದ ನೀಳವಾದ ಮುಡಿಯಿಂದ ಕೂಡಿದ ದಾಶರಥಿಯೇ ! ಪವಡಿಸು. ||೫||

**ಶುತ್ತಮೆಲ್ಲಾಂ ಪಿನ್‌ತೊಡರ ತೊಲ್‌ಕಾನ ಮಡೈನ್ದವನೇ !**
**ಅತ್ತವರ್‌ಗಳ್ಕ್ಕು ಅರುಮರುನ್ದೇ ! ಅಯೋತ್ತಿನಗರ್ಕ್ಕಧಿಪತಿಯೇ !**
**ಕತ್ತವರ್‌ಗಳ್ ತಾಂ ವಾಳುಂ ಕಣಪುರತ್ತೆನ್ ಕರುಮಣಿಯೇ !**
**ಶಿತ್ತಿರೈ ತನ್ ಶೊಕ್ಕೊಂಡ ಶೀರಾಮಾ ! ತಾಲೇಲೋ ||೬||**

**ಶುತ್ತಮೆಲ್ಲಾಂ**=ಸುತ್ತಲೂ ಇದ್ದ ಪೌರಜನರೆಲ್ಲರೂ, **ಪಿನ್**=ಹಿಂದೆ, **ತೊಡರ**=ಹಿಂಬಾಲಿಸಿ ಬರುತ್ತಿರಲಾಗಿದ್ದರೂ, **ತೊಲ್**=ಮನುಷ್ಯಸಂಚಾರಕ್ಕೆ, ಅನರ್ಹವಾದ, **ಕಾನಂ**=ಕಾಡನ್ನು, **ಅಡೈನ್ದವನೇ**=ಪ್ರವೇಶಿಸಿದವನಾಗಿ, **ಅತ್ತವರ್ಗಳ್ಕ್ಕು**=ಅಹಂಕಾರ ಮಮಕಾರಗಳನ್ನು ಜಯಿಸಿದ ಮಹರ್ಷಿಗಳಿಗೆ,

**ಅರು**=ದುಃಖವನ್ನು ನೀಗಿಸಿ, ಆನಂದದಾಯಕನಾಗಿ **ಮರುಂದೇ**=(ಆಧಿವ್ಯಾಧಿ ನಿವಾರಣೆಗೆ ಔಷಧಿಪ್ರಾಯನಾಗಿ) ಅಮೃತಸ್ವರೂಪನಾಗಿರುವ, **ಅಯೋತ್ತಿ-ನಗರ್ಕ್ಕು** = ಅಯೋಧ್ಯಾಪಟ್ಟಣಕ್ಕೆ, **ಅಧಿಪತಿಯೇ** = ಸ್ವಾಮಿಯಾದವನೇ ! **ಕಟ್ರವರ್‌ಗಳ್** = ವೇದ, ವೇದಾಂತಗಳನ್ನು ಅಧ್ಯಯನ ಮಾಡಿರುವವರು, **ವಾಳುಂ**=ನಿತ್ಯವಾಸಮಾಡುವ, **ಕಣಪುರತ್ತು**=ತಿರುಕ್ಕಣ್ಣಪುರದಲ್ಲಿ ಬಿಜಯ ಮಾಡಿಸಿರುವ, **ಎನ್‌ಕರುಮಣಿಯೇ**=ನನ್ನ ನೀಲಮಣಿವರ್ಣನೇ !, **ಶಿಟ್ರ-ವೈತನ್**=ಚಿಕ್ಕಮ್ಮನಾದ ಕೈಕೇಯಿಯ, **ಶೊಲ್**=ಮಾತನ್ನು, **ಕೊಂಡ**=ಶಿರಸಾ ಧರಿಸಿಕೊಂಡು ನಡೆಯಿಸಿದ, **ಶೀರಾಮಾ**=ಶ್ರೀರಾಮನೇ, **ತಾಲೇಲೋ**=ಪವಡಿಸು. ||೬||

ಅಯೋಧ್ಯಾಪಟ್ಟಣದ ಪುರಜನರೆಲ್ಲರೂ, ನಿನ್ನನ್ನು ಬಿಟ್ಟಿರಲಾರದೆ, ಹಿಂಬಾಲಿಸಿ ಬರುತ್ತಿದ್ದರೂ, ಅದನ್ನು ಲಕ್ಷ್ಯಮಾಡದೆ, ಮಾನುಷ ಸಂಚಾರಕ್ಕೆ ಅನರ್ಹವಾಗಿ ಗಹನವಾಗಿದ್ದ ಕಾಡನ್ನು ಪ್ರವೇಶಿಸಿ, ಅಹಂಕಾರ ಮಮಕಾರಗಳನ್ನು ಜಯಿಸಿದ ಮಹರ್ಷಿಗಳು, ರಾಕ್ಷಸರಿಂದ ತಮಗೆ ಉಂಟಾಗಿರುವ ದುಃಖವನ್ನು ತೋಡಿಕೊಂಡು, ತಮ್ಮನ್ನು ರಕ್ಷಿಸಬೇಕೆಂದು—"ಸೋಽಯಂ ಬ್ರಾಹ್ಮಣಭೂಯಿಷ್ಠೋ ವಾನಪ್ರಸ್ಥ ಗಣೋ ಮಹಾನ್ | ತ್ವನ್ನಾಥೋಽನಾಥವದ್ರಾಮ ! ರಾಕ್ಷಸೈರ್ಹನ್ಯತೇ ಭೃಶಮ್" (ನಿನ್ನನ್ನೇ ಸ್ವಾಮಿಯಾಗಿ ಹೊಂದಿರುವ, ಅಧಿಕ ಸಂಖ್ಯಾಕರಾದ ಬ್ರಾಹ್ಮಣರಿಂದ ಕೂಡಿದ, ಈ ಮಹಾತ್ಮರಾದ ವಾನಪ್ರಸ್ಥರ ಗುಂಪಾದರೋ, ರಕ್ಷಕರಾರೂ ಇಲ್ಲದ ಅನಾಥರಂತೆ, ರಾಕ್ಷಸರಿಂದ ಕೊಲ್ಲಲ್ಪಡುತ್ತಿದ್ದಾರೆ.)

"ಏಹಿ ಪಶ್ಯ ಶರೀರಾಣಿ ಮುನೀನಾಂ ಭಾವಿತಾತ್ಮನಾಂ |
ಹತಾನಾಂ ರಾಕ್ಷಸೈಃ ಘೋರೈಃ ಬಹೂನಾಂ ಬಹುಧಾವನೇ ||"

(ಭಯಂಕರರಾದ ರಾಕ್ಷಸರಿಂದ ಈ ಕಾಡಿನಲ್ಲಿ ನಾನಾ ರೀತಿಯಲ್ಲಿ ಕೊಲ್ಲಲ್ಪಟ್ಟಿರುವ, ತಪಸ್ಸಮಾಧಿಯಲ್ಲಿದ್ದ ಮುನಿಗಳ ಶರೀರವನ್ನು ನೋಡು ಬಾ)—ಎಂದು ಹೇಳಿ ಶರಭಂಗಾಶ್ರಮದಲ್ಲಿ ಬಂದು ಅತ್ತುಕೊಂಡ, ಮಹರ್ಷಿಗಳಿಗೆ ಅಭಯವನ್ನು ನೀಡಿ, ಅದನ್ನು ತಾನು ನಡೆಯಿಸಿಯೇ ತೀರುತ್ತೇನೆಂದು ಸೀತೆಯಲ್ಲಿ ಹೇಳುವಾಗ—

"ಅಪ್ಯಹಂ ಜೀವಿತಂ ಜಹ್ಯಾಂ ತ್ವಾಂ ವಾ ಸೀತೆ ಸಲಕ್ಷ್ಮಣಾಂ |
ನಹಿ ಪ್ರತಿಜ್ಞಾಂ ಸಂಶ್ರುತ್ಯ ಬ್ರಾಹ್ಮಣೇಭ್ಯೋ ವಿಶೇಷತಃ ||"

(ಎಲೈ ಸೀತೆಯೇ ! ನನ್ನ ಪ್ರಾಣವನ್ನಾದರೂ ಬಿಟ್ಟೇನು, ನಿನ್ನನ್ನಾದರೂ ಬಿಟ್ಟೇನು, ಲಕ್ಷ್ಮಣನನ್ನಾದರೂ ಬಿಟ್ಟೇನು, ಆದರೆ ಕೊಟ್ಟ ಮಾತನ್ನು, ಅದರಲ್ಲೂ ವಿಶೇಷವಾಗಿ ಬ್ರಾಹ್ಮಣರಿಗೆ ಕೊಟ್ಟ ಮಾತನ್ನು ಎಂದೂ ಬಿಡೆನು)—ಎಂದು ಹೇಳಿ, ಅದರಂತೆಯೇ ಅವರಿಗೆ ಕಂಟಕಪ್ರಾಯರಾಗಿದ್ದ ರಾಕ್ಷಸರನ್ನು ವಧಿಸಿ, ಅವರ

ದುಃಖವನ್ನು ನೀಗಿಸಿ ಆನಂದದಾಯಕವಾಗಿ, ಆಧಿವ್ಯಾಧಿ ನಿವಾರಣೆಗೆ ಔಷಧಿ ಪ್ರಾಯನಾಗಿ, ಅಮೃತಸ್ವರೂಪನಾಗಿರುವ, ಅಯೋಧ್ಯಾಪಟ್ಟಣಕ್ಕೆ ಸ್ವಾಮಿಯಾದ-ವನೇ! ವೇದ ವೇದಾಂತಗಳನ್ನು ಅಧ್ಯಯನ ಮಾಡಿರುವವರು ನಿತ್ಯವಾಸ ಮಾಡುತ್ತಿರುವ ತಿರುಕ್ಕಣ್ಣಪುರದಲ್ಲಿ ಬಿಜಯ ಮಾಡಿಸಿರುವ ಶೌರಿರಾಜನೇ! ನನ್ನ ನೀಲಮಣಿಯಂತಿರುವವನೇ! ಚಿಕ್ಕಮ್ಮನಾದ ಕೈಕೇಯಿಯು ಹೇಳಿದ-'ಹದಿನಾಲ್ಕು ವರ್ಷ ಕಾಡಿನಲ್ಲಿರು'-ಎಂಬ ಮಾತನ್ನು ಶಿರಸಾವಹಿಸಿ ನಡೆಸಿದ ಶ್ರೀರಾಮಚಂದ್ರನೇ ಪವಡಿಸು. ||೬||

**ಆಲಿನಿಲೈಪ್ಪಾಲಕನಾಯ್ ಅನ್ರುಲಗಮುಂಡವನೇ !**
**ವಾಲಿಯೈಕ್ಕೊನ್ರು ಅರಶು ಇಳೈಯ ವಾನರತ್ತುಕ್ಕು ಅಳಿತ್ತವನೇ !**
**ಕಾಲಿನ್‌ಮಣಿ ಕರೈಯಲೈಕ್ಕುಂ ಕಣಪುರತ್ತೆನ್ ಕರುಮಣಿಯೇ !**
**ಆಲಿನಗರ್ಕಧಿಪತಿಯೇ ! ಅಯೋತ್ತಿಮನೇ ! ತಾಲೇಲೋ ||೭||**

**ಅನ್ರು** = ಮಹಾಪ್ರಳಯವು ಸಂಭವಿಸಿದಾಗ, **ಆಲಿನಿಲೈ** = ಒಂದು ಆಲದೆಲೆಯಲ್ಲಿ, **ಬಾಲಕನಾಯ್** = ಶಿಶುವಿನ ರೂಪವನ್ನು ಹೊಂದಿ, **ಉಲಹುಂ** = ಚರಾಚರಗಳಿಂದ ಕೂಡಿದ ಲೋಕಗಳೆಲ್ಲವನ್ನೂ, **ಉಂಡವನೇ** = ಭುಜಿಸಿ, ತನ್ನ ಉದರದಲ್ಲಿಯೇ ಇಟ್ಟುಕೊಂಡು ರಕ್ಷಿಸಿದವನೇ !, **ವಾಲಿಯೈ** = ವಾಲಿಯನ್ನು, **ಕೊನ್ರು** = ಸಂಹರಿಸಿ, **ಅರಶು** = ವಾನರರಾಜ್ಯದ ಆಧಿಪತ್ಯವನ್ನು, **ಇಳೈಯ** = **ವಾನರತ್ತುಕ್ಕು** = ಅವನ ತಮ್ಮನಾದ ಸುಗ್ರೀವನಿಗೆ, **ಅಳಿತ್ತವನೇ** = ಕೊಟ್ಟು ರಕ್ಷಿಸಿದವನೇ !, **ಕಾಲಿನ್** = ತನ್ನ ಕಾಲುಗಳಲ್ಲಿ ಸಿಲುಕಿಕೊಂಡಿದ್ದ, **ಮಣಿ** = ರತ್ನಗಳನ್ನು, **ಕರೈ** = ದಡದಲ್ಲಿ, **ಅಲೈಕ್ಕುಂ** = ಎರಚಾಡಿದಂತೆ ತಂದು ತಳ್ಳುವ ಅಲೆಗಳಿಂದ ಕೂಡಿದ, **ಕಣಪುರತ್ತು** = ತಿರುಕ್ಕಣ್ಣಪುರದಲ್ಲಿ ಬಿಜಯ ಮಾಡಿಸಿರುವ, **ಎನ್‌ಕರುಮಣಿಯೇ** = ನನ್ನ ಇಂದ್ರನೀಲಮಣಿಸದೃಶನೇ !, **ಆಲಿನಗರ್** = 'ತಿರುವಾಲಿ, ತಿರುನಗರ್'—ಎಂಬ ಕ್ಷೇತ್ರಗಳಿಗೆ, **ಅದಿಪತಿಯೇ** = ನಿರ್ವಾಹಕನಾದವನೇ !, **ಅಯೋತ್ತಿಮನೇ** = ಅಯೋಧ್ಯಾಪತಿಯೇ !, **ತಾಲೇಲೋ** = ಪವಡಿಸು. ||೭||

ಮಹಾಪ್ರಳಯ ಕಾಲದಲ್ಲಿ ಒಂದಾಲದೆಲೆಯಲ್ಲಿ ಶಿಶುವಿನ ರೂಪವನ್ನು ಹೊಂದಿ ಮಲಗಿಕೊಂಡು, ಚರಾಚರಗಳಿಂದ ಕೂಡಿದ ಲೋಕಗಳೆಲ್ಲವನ್ನೂ ಭುಜಿಸಿ, ತನ್ನ ಉದರದಲ್ಲಿಯೇ ಇಟ್ಟುಕೊಂಡು ರಕ್ಷಿಸಿದವನೇ! ವಾಲಿಯನ್ನು ಸಂಹರಿಸಿ, ವಾನರ ರಾಜ್ಯದ ಆಧಿಪತ್ಯವನ್ನು ಸುಗ್ರೀವನಿಗೆ ಕೊಟ್ಟು ರಕ್ಷಿಸಿದವನೇ! ಸಮುದ್ರದ ಅಡಿಯಲ್ಲಿ ಕಾಲುಗಳಿಗೆ ಸಿಲುಕಿಕೊಂಡಂತಿದ್ದ ರತ್ನಗಳನ್ನು ದಡಗಳಲ್ಲಿ ಎರಚಾಡುವಂತೆ ತಂದು ತಳ್ಳುವ ಅಲೆಗಳಿಂದ ಕೂಡಿದ ಸಮುದ್ರದ ದಡದಲ್ಲಿರುವ ತಿರುಕ್ಕಣ್ಣಪುರದಲ್ಲಿ

ಬಿಜಯಮಾಡಿಸಿರುವ ಶೌರಿರಾಜನೇ! 'ತಿರುವಾಲಿ', 'ತಿರುನಗರ್' —ಎಂಬ ಕ್ಷೇತ್ರಗಳ ನಿರ್ವಾಹಕನಾಗಿ ಅಲ್ಲಿಯೇ ಬಿಜಯ ಮಾಡಿಸಿರುವ 'ವಯಲಾಲಿ ಮಣವಾಳನೇ!' (ಕಲ್ಯಾಣರಂಗನಾಥನೇ!) ವೇದರಾಜನೇ, ಅಯೋಧ್ಯಾಧಿಪತಿಯೇ ಸುಖಶಯಿತನಾಗಿ ಪವಡಿಸು ‖ ೭ ‖

**ಮಲೈಯೆದನಾಲಣೈಕಟ್ಟಿ ಮದಿಳಿಲಂಗೈ ಅಳಿತ್ತವನೇ।**
**ಅಲೈಕಡಲೈಕಡೈನ್ದು ಅಮರರ್ಕ್ಕು ಅಮುದರುಳಿಚ್ಚೆಯ್ದವನೇ।**
**ಕಲೈವಲವರ್ ತಾಮ್ ವಾಳುಂಕಣಪುರತ್ತೆನ್ ಕರುಮಣಿಯೇ!**
**ಶಿಲೈವಲವಾ ಶೇವಕನೇ! ಶೀರಾಮಾ! ತಾಲೇಲೋ ‖೮‖**

**ಮಲೈಯೆದನಾಲ್**=ಬೆಟ್ಟಗುಡ್ಡಗಳ ಕಲ್ಲುಬಂಡೆಗಳಿಂದ, **ಅಣೈಕಟ್ಟಿ**=ಸೇತುವೆಯನ್ನು ಕಟ್ಟಿ, **ಮದಿಳ್**=ಆ ಕೋಟೆಯಿಂದ ಸುತ್ತುವರಿಯಲ್ಪಟ್ಟ, **ಇಲಂಗೈ**=ಲಂಕಾಪುರಿಯನ್ನು, **ಅಳಿತ್ತವನೇ**=ನಾಶ ಮಾಡಿದವನೇ! **ಅಲೈ**=ಅಲೆಗಳಿಂದ ಕೂಡಿದ, **ಕಡಲೈ**=ಕ್ಷೀರಾಬ್ಧಿಯನ್ನು, **ಕಡೈನ್ದು**=ಕಡೆದು, **ಅಮರರ್ಕ್ಕು**=ದೇವತೆಗಳಿಗೆ, **ಅಮುದು**=ಅಮೃತವನ್ನು, **ಅರುಳಿಚ್ಚೆಯ್ದವನೇ**=ಕೃಪೆಯಿಂದ ಅನುಗ್ರಹಿಸಿಕೊಟ್ಟವನೇ! **ಕಲೈವಲವರ್ ತಾಮ್**=ಸಕಲವಿಧವಾದ ಕಲೆಗಳನ್ನೂ ಶಾಸ್ತ್ರಗಳನ್ನೂ ಅಧ್ಯಯನ ಮಾಡಿರುವವರು, **ವಾಳುಂ**=ವಾಸಿಸುತ್ತಿರುವ, **ಕಣಪುರತ್ತು**=ತಿರುಕ್ಕಣ್ಣಪುರದಲ್ಲಿ ಬಿಜಯ ಮಾಡಿಸಿರುವ, **ಎನ್ ಕರುಮಣಿಯೇ**=ನನ್ನ ನೀಲಮಣಿವರ್ಣನೇ! **ಶಿಲೈವಲವಾ**=ಶಾರ್ಙ್ಗವೆಂಬ ಧನುಸ್ಸನ್ನು ಕೈಯಲ್ಲಿ ಹಿಡಿದಿರುವವನೇ! **ಶೇವಕನೇ**=ಸೇವಕರಿಂದ ಹಾಡಲ್ಪಡುವ ವೀರಶ್ರೀಯನ್ನು ಹೊಂದಿರುವವನೇ, **ಶೀರಾಮಾ**=ಶ್ರೀರಾಮಚಂದ್ರನೇ! **ತಾಲೇಲೋ**=ಪವಡಿಸು ‖ ೮ ‖

ಬೆಟ್ಟಗುಡ್ಡಗಳ ಕಲ್ಲುಬಂಡೆಯಿಂದ ಸೇತುವೆಯನ್ನು ಕಟ್ಟಿ, ಕೋಟೆಯಿಂದ ಸುತ್ತುವರಿಯಲ್ಪಟ್ಟ ಲಂಕಾಪುರಿಯನ್ನು ಅಳಿಸಿದವನೇ! ಮೇಲೆ ಮೇಲೆ ಏಳುವ ಅಲೆಗಳಿಂದ ಕೂಡಿದ ಕ್ಷೀರಾಬ್ಧಿಯನ್ನು ಕಡೆದು, ಅದರಿಂದ ಉತ್ಪನ್ನವಾದ ಅಮೃತವನ್ನು ದೇವತೆಗಳಿಗೆ ಅನುಗ್ರಹಿಸಿಕೊಟ್ಟವನೇ! ಸಕಲವಿಧವಾದ ಕಲೆಗಳನ್ನೂ ಶಾಸ್ತ್ರಗಳನ್ನೂ ಅಧ್ಯಯನ ಮಾಡಿರುವವರೂ ನಿತ್ಯವಾಸ ಮಾಡುತ್ತಿರುವ ತಿರುಕ್ಕಣ್ಣಪುರದಲ್ಲಿ ಬಿಜಯಮಾಡಿಸಿರುವ ನನ್ನ ನೀಲಮಣಿ ಸ್ವರೂಪನೇ! ಶಾರ್ಙ್ಗವೆಂಬ ಬಿಲ್ಲನ್ನು ಕೈಯಲ್ಲಿ ಹಿಡಿದು, ನಿನ್ನ ಸೇವಕರಿಂದ ಹಾಡಲ್ಪಡುವ ವೀರಶ್ರೀಯುಳ್ಳ ಶ್ರೀರಾಮಚಂದ್ರನೇ ಪವಡಿಸು ‖ ೮ ‖

**ತಳೈಯವಿಳುನರುಂಗುಜಿತ್ತಯರದನ್ಮನ್ ಕುಲಮದಲಾಯ್।**
**ವಳೈಯವೊರು ಶಿಲೈಯದನಾಲ್ ಮದಿಳಿಲಂಗೈಯಳಿತ್ತವನೇ।**

**ಕಳ್ಳೈಕಳುನೀರ್ ಮರುಂಗಲರುಂ ಕಣಪುರತ್ತೆನ್ ಕರುಮಣಿಯೇ।**
**ಇಳ್ಳೈಯುವರ್‌ಕಳ್ಳು ಅರುಳುಡೈಯಾಯ್। ಇರಾಘವನೇ ತಾಲೇಲೋ ||೮||**

**ತಳ್ಳೈಯುವಿಳುಂ**=ಅತ್ಯಧಿಕವಾದ ವಾಸನೆಯಿಂದ ಮದವೇರಿ ತಲೆತಿರುಗಿ ಬೀಳುವಂತಾಗುವ, **ನರು**=ಪರಿಮಳವನ್ನು ಹೊಂದಿರುವ, **ಕುಂಜಿ**=ಕುಂತಳವನ್ನು ಹೊಂದಿರುವ, **ತಯರಡನ್ ತನ್‌ಕುಲಂ**=ದಶರಥನ ಕುಲಕ್ಕೆ, **ಮದಲಾಯ್**=ಉತ್ತಾರಕನಾಗಿ, **ಒರುಶಿಲ್ಲೈಯುದನಾಲ್** = ಅದ್ವಿತೀಯವಾದ ಧನುಸ್ಸಿನಿಂದ, **ವಳ್ಳೈಯ**=ಬ್ರಹ್ಮಾಸ್ತ್ರಾದಿಗಳು ಪ್ರಯೋಗಿಸಲ್ಪಡುವಂತೆ ಮಾಡಿ, **ಮದಿಳ್**=ಪ್ರಾಕಾರದಿಂದ ಆವೃತವಾದ, **ಇಲಂಗೈ**=ಲಂಕಾಪುರಿಯನ್ನು, **ಅಳಿತ್ತವನೇ**=ಅಳಿಸಿದವನೇ! **ಕಳ್ಳೈ**=ಗದ್ದೆಗಳ ಪೈರುಗಳ ಮಧ್ಯದಲ್ಲಿ ಬೆಳೆದ ಕಳೆಗಳಂತೆ ಅಕ್ಕಪಕ್ಕದಲ್ಲಿ ಕಿತ್ತೊಗೆದ, **ಕಳುನೀರ್**=ಶೆಂಗಳುನೀರ್ (ಕಲ್ಹಾರ)ಪುಷ್ಪಗಳು, **ಮರುಂಗು**=ಬಿದ್ದ ಸ್ಥಳಗಳಲ್ಲೆಲ್ಲಾ, **ಅಲರುಂ**=ವಿಕಸಿತವಾಗಿರುವ, **ಕಣಪುರತ್ತು**=ತಿರುಕ್ಕಣ್ಣಪುರದಲ್ಲಿ ಬಿಜಯಮಾಡಿಸಿರುವ, **ಎನ್ ಕರುಮಣಿಯೇ**=ನನ್ನ ನೀಲಮಣಿ ವರ್ಣನೇ! **ಇಳ್ಳೈಯುವರ್‌ಕಟ್ಟು**=ತಮ್ಮಂದಿರಾದ ಭರತ, ಲಕ್ಷ್ಮಣರ ವಿಷಯದಲ್ಲಿ, **ಅರುಳುಡೈಯಾಯ್**=ಪರಿಪೂರ್ಣ ಕೃಪೆಯಿಂದ ಕೂಡಿದ, **ಇರಾಘವನೇ**=ಶ್ರೀರಾಮಚಂದ್ರನೇ! **ತಾಲೇಲೋ**=ಪವಡಿಸು. ||೮||

ಅತ್ಯಧಿಕವಾದ ವಾಸನೆಯಿಂದ ಮದವೇರಿ ತಲೆ ತಿರುಗಿ ಬೀಳುವಂತಾಗುವ ಪರಿಮಳವನ್ನು ಹೊಂದಿರುವ ಕುಂತಳಗಳಿಂದ ಕೂಡಿದ ದಶರಥನ ಕುಲಕ್ಕೇ ಉತ್ತಾರಕನಾಗಿ, ಅದ್ವಿತೀಯವಾದ ಧನುಸ್ಸಿನಿಂದ ಬ್ರಹ್ಮಾಸ್ತ್ರಾದಿಗಳನ್ನು ಪ್ರಯೋಗಿಸಿ, ಪ್ರಾಕಾರದಿಂದ ಆವೃತವಾದ ಲಂಕಾಪುರಿಯನ್ನು ಅಳಿಸಿದವನೇ, ಗದ್ದೆಗಳ ಪೈರುಗಳ ಮಧ್ಯದಲ್ಲಿ ಬೆಳೆದ ಕಳೆಗಳು ಅಕ್ಕಪಕ್ಕದಲ್ಲಿ ಕಿತ್ತೊಗೆದಾಗ, ಬಿದ್ದ ಸ್ಥಳದಲ್ಲೆಲ್ಲಾ ಮೊಳಿತು ನಿಲ್ಲುವಂತೆ, ಅಕ್ಕಪಕ್ಕದಲ್ಲಿ ಬಿದ್ದ ಕಲ್ಹಾರಪುಷ್ಪಗಳೆಲ್ಲವು ದೊಡ್ಡ ದೊಡ್ಡ ಬಳ್ಳಿಗಳಾಗಿ ಬೆಳೆದು, ಅದರಲ್ಲಿನ ಪುಷ್ಪಗಳು ಅರಳಿನಿಂತಿರುವ, ತಿರುಕ್ಕಣ್ಣಪುರದಲ್ಲಿ ಬಿಜಯಮಾಡಿಸಿರುವ, ನನ್ನ ನೀಲಮಣಿ ವರ್ಣನೇ! ತಮ್ಮಂದಿರಾದ ಭರತಲಕ್ಷ್ಮಣರ ವಿಷಯದಲ್ಲಿ ಪರಿಪೂರ್ಣ ಕೃಪೆಯಿಂದ ಕೂಡಿದ ಶ್ರೀರಾಮಚಂದ್ರನೇ ಪವಡಿಸು ||೮||

**ತೇವರ್ೈಯುಂ ಅಶುರರೈಯುಂ ತಿಶೈಗಳ್ಳೈಯುಂ ಪಡೈತ್ತವನೇ!**
**ಯಾವರುಂ ವನ್ದಡಿವಣಂಗ ಅರಂಗನಹರ್ ತುಯಿನ್ರವನೇ!**
**ಕಾವಿರಿನನ್ನದಿಪಾಯುಂ ಕಣಪುರತ್ತೆನ್ ಕರುಮಣಿಯೇ!**
**ಏವರಿವೆಂಶಿಲ್ಲೈವಲವಾ! ರಾಘವನೇ! ತಾಲೇಲೋ ||೧೦||**

**ತೇವರೈಯುಂ**=ದೇವತೆಗಳನ್ನೂ, **ಅಶುರರೈಯುಂ** = ಅಸುರರನ್ನೂ, **ತಿಶೈಗಳ್ಳೈಯುಂ**=ದಿಕ್ಕುಗಳನ್ನೂ, **ಪಡೈತ್ತವನೇ**=ಸೃಷ್ಟಿಸಿದವನೇ! **ಯಾವರುಂ**

=ಸಕಲಚೇತನರೂ, **ವನ್ದು**=ಬಂದು, **ಅಡಿವಣಂಗುಂ**=ತಿರುವಡಿಗಳಲ್ಲಿ ನಮಸ್ಕರಿಸಿ ಶರಣಾಗತರಾಗುವಂತೆ **ಅರಂಗನಕರ್**=ಶ್ರೀರಂಗ ಕ್ಷೇತ್ರದಲ್ಲಿ, **ತುಯಿನ್ರವನೇ**=ಬಿಜಯಮಾಡಿಸಿ ಯೋಗನಿದ್ರೆ ಮಾಡುತ್ತಿರುವವನೇ! **ಕಾವಿರಿ**='ಕಾವೇರಿ'-ಎಂಬ, **ನಲ್**=ಉತ್ತಮವಾದ, **ನದಿಪಾಯುಂ**=ನದಿಯು ಪ್ರವಹಿಸುತ್ತಿರುವ, **ಕಣಪುರತ್ತು**=ತಿರುಕ್ಕಣ್ಣಪುರದಲ್ಲಿ ಬಿಜಯಮಾಡಿಸಿರುವ **ಎನ್ ಕರುಮಣಿಯೇ**=ನನ್ನ ನೀಲಮಣಿವರ್ಣನೇ! **ಏ**=ಬಾಣವು ಹೂಡಲ್ಪಟ್ಟು, **ವರಿ**=ದರ್ಶನೀಯ-ವಾದ, **ವೆವ್**=ಶತ್ರುಗಳಿಗೆ ಭಯಂಕರವಾದ, **ಶಿಲೈವಲವಾ**=ಶಾರ್ಙ್ಗವೆಂಬ ಧನುಸ್ಸನ್ನು ಕೈಯ್ಯಲ್ಲಿ ಧರಿಸಿರುವವನೇ, **ರಾಘವನೇ**=ರಘುಕುಲ ಶ್ರೇಷ್ಠನೇ! **ತಾಲೇಲೋ**=ಪವಡಿಸು. ||೧೦||

ದೇವತೆಗಳನ್ನೂ, ಅಸುರರನ್ನೂ, ದಿಗುಪಲಕ್ಷಿತವಾದ ಸರ್ವದೇಶವನ್ನೂ ಸೃಷ್ಟಿಸಿ, ಚೇತನೋದ್ಧಾರ ಮಾಡುವ ಸಲುವಾಗಿ, "ಅಸ್ಮದಾದೀನಾಂ ಸಮಾಶ್ರಯಣೀಯತ್ವಾಯ ಉರ್ವ್ಯಾಂ ಸಕಲಮನುಜನಯನ ವಿಷಯತಾಂ ಗತಃ" —ಎಂದು ಭಗವದ್ರಾಮಾನುಜರು ತಿಳಿಸಿರುವಂತೆಯೇ, ಎಲ್ಲ ಚೇತನರೂ ತನ್ನಲ್ಲಿಗೆ ಬಂದು, ತನ್ನ ತಿರುವಡಿಗಳಲ್ಲಿ ಶರಣಾಗತಿ ಮಾಡಿ ಉದ್ಧಾರವಾಗುವಂತೆ, ಸುಂದರವಾದ ಅರ್ಚಾ ಮೂರ್ತಿ ಸ್ವರೂಪದಲ್ಲಿ ಶ್ರೀರಂಗಕ್ಷೇತ್ರದಲ್ಲಿ ಬಿಜಯಮಾಡಿಸಿರುವ, ನನ್ನ ನೀಲಮಣಿ ವರ್ಣನೇ!; ಬಾಣಗಳಿಂದ ಹೂಡಲ್ಪಟ್ಟು, ದರ್ಶನೀಯವಾಗಿ, ಶತ್ರುಗಳಿಗೆ ಭಯವನ್ನುಂಟುಮಾಡುವ ಶಾರ್ಙ್ಗವೆಂಬ ಧನುಸ್ಸನ್ನು ಕೈಯಲ್ಲಿ ಧರಿಸಿ ನಿಂತಿರುವ ರಘುಕುಲತಿಲಕನಾದ ಶ್ರೀರಾಮಚಂದ್ರನೇ ಪವಡಿಸು. ||೧೮||

**ಕನ್ನಿನನ್‌ಮಾಮದಿಳ್ ಪುಡೈಶೂಳ್ ಕಣಪುರತ್ತೆನ್ ಕಾಕುತ್ತನ್**
**ತನ್ನಡಿಮೇಲ್, ತಾಲೇಲೋ–ಎನ್ರುರೈತ್ತ ತಮಿಳ್‌ಮಾಲೈ-**
**ಕೊನ್ನವಿಲುಂ ವೇಲ್‌ವಲವನ್ ಕುಡೈಕ್ಕುಲ ಶೇಖರನ್ ಶೊನ್ನ**
**ಪನ್ನಿಯನೂಲ್ ಪತ್ತುಂ ವಲ್ಲಾರ್ ಪಾಂಗಾಯ ಪತ್ತರ್‌ಕಳೇ ||೧೧||**

**ಕೊಲ್‌ನವಿಲುಂ**=ಶತ್ರುಗಳು, ತಮ್ಮನ್ನು ಅಳಿಸುವ, ಇವರ ವೇಲಾಯುಧವನ್ನು ಕಂಡು, ವೇಲಾಯುಧದ ತೀಕ್ಷ್ಣತೆಯನ್ನು ಕೊಂಡಾಡುವಂತಿರುವ, **ವೇಲ್**=ಯುದ್ಧದಲ್ಲಿ, **ವಲವನ್**=ಸಮರ್ಥರಾಗಿ, **ಕುಡೈ**=ವಿಜಯಸೂಚಕವಾದ ಶ್ವೇತ-ಚ್ಛತ್ರಿಯನ್ನು ಧರಿಸಿರುವ, **ಕುಲಶೇಖರನ್**=ಕುಲಶೇಖರಾಳ್ವಾರವರು, **ಎನ್**=ನನ್ನ ಸ್ವಾಮಿಯಾದ, **ಕಾಕುತ್ತನ್‌ತನ್**=ಕಕುತ್ಸ್ಥ ವಂಶದಲ್ಲಿ ಜನಿಸಿದ ಶ್ರೀರಾಮಚಂದ್ರನ, **ಅಡಿಮೇಲ್**=ತಿರುವಡಿಗಳ ವಿಷಯವಾಗಿ, **ತಾಲೇಲೋ-ಎನ್ರು-ಉರೈತ್ತು**=(ಕೌಸಲ್ಯೆಯ ಭಾವವನ್ನು ಹೊಂದಿ) 'ಪವಡಿಸು' –ಎಂದು ಹಾಡಿದ, **ಕನ್ನಿ**=ಎಂದೂ ಅಳಿಯದ, **ನಲ್**=ಸುಂದರವಾದ, **ಮಾ**=ಹಿರಿದಾಗಿ

ರುವ, ಮದಿಳ್=ಪ್ರಾಕಾರದಿಂದ, ಪುಡೈ=ನಾಲ್ಕು ದಿಕ್ಕುಗಳಲ್ಲಿಯೂ, ಶೂಳ್=ಸುತ್ತುವರಿಯಲ್ಪಟ್ಟ, ಕಣಪುರತ್ತು=ತಿರುಕ್ಕಣ್ಣಪುರದಲ್ಲಿ ಬಿಜಯಮಾಡಿಸಿರುವ ಪರಮಾತ್ಮನ ವಿಷಯಕವಾಗಿ, ಶೊನ್ನ=ಹಾಡಿಕೊಟ್ಟಿರುವ, ಪನ್ನಿಯ=ಹರಡಿ-ಕೊಂಡಿರುವ, ನೂಲ್=ಶಾಸ್ತ್ರ ಲಕ್ಷಣಗಳಿಂದ ಕೂಡಿರುವ, ತಮಿಳ್‌ಮಾಲೈ=ತಮಿಳಿನ ಪದ್ಯ ಮಾಲಿಕೆಯ, ಪತ್ತುಂ=ಈ ಹತ್ತು ಹಾಡುಗಳನ್ನೂ, ವಲ್ಲಾರ್=ಅಭ್ಯಾಸ ಮಾಡುವವರು, ಪಾಂಗಾಯ=ಪರಮಾತ್ಮನನ್ನು ಅನುಭವಿಸಲು ಯೋಗ್ಯರಾದ, ಪತ್ತರ್‌ಕಳ್=ಭಕ್ತರುಗಳಾಗುತ್ತಾರೆ. ‖ ೧೧ ‖

ಶತ್ರುಗಳು, ತಮ್ಮನ್ನು ನಾಶಮಾಡುವ ಇವರ ವೇಲಾಯುಧವನ್ನು ಕಂಡು, ಅದರ ತೀಕ್ಷ್ಣತೆಯನ್ನು ಕೊಂಡಾಡುವಂತಿರುವ ಯುದ್ಧದಲ್ಲಿ ಸಮರ್ಥರಾದ, ವಿಜಯ ಸೂಚಕವಾಗಿರುವ ಶ್ವೇತಛತ್ರದ ಅಡಿಯಲ್ಲಿ ಚಕ್ರವರ್ತಿ ಲಕ್ಷಣದಿಂದ ವಿರಾಜಮಾನರಾಗಿರುವ ಕುಲಶೇಖರಾಳ್ವಾರ್‌ರವರು, ನಮ್ಮ ಸ್ವಾಮಿಯಾದ, ಕಕುತ್ಸ್ಥವಂಶದಲ್ಲಿ ಜನಿಸಿದ ಶ್ರೀರಾಮಚಂದ್ರನ ತಿರುವಡಿಗಳ ವಿಷಯವಾಗಿ, ಕೌಸಲ್ಯಾಮಾತೆಯ ಭಾವ-ವನ್ನು ಹೊಂದಿ, ಪುತ್ರವಾತ್ಸಲ್ಯದಿಂದ, ಅವನು ಸುಖವಾಗಿ ನಿದ್ರಿಸಲು ಅವನಿಗೆ (ತಾಲೇಲೋ) 'ಪವಡಿಸು'–ಎಂದು ಹಾಡಿದುದನ್ನು, ಎಂದೂ ಅಳಿಯದ, ಸುಂದರವಾದ, ಹಿರಿಮೆಯಿಂದ ಕೂಡಿದ, ನಾಲ್ಕೂ ದಿಕ್ಕುಗಳಲ್ಲಿಯೂ ಪ್ರಾಕಾರದಿಂದ ಸುತ್ತುವರಿಯಲ್ಪಟ್ಟ, ತಿರುಕ್ಕಣ್ಣಪುರದಲ್ಲಿ ಬಿಜಯಮಾಡಿಸಿರುವ ಶೌರಿರಾಜಪ್ಪೆರುಮಾಳ್ ವಿಷಯಕವಾಗಿ ಹಾಡಿಕೊಟ್ಟಿರುವ, ಎಲ್ಲೆಡೆಯೂ ಹರಡಿಕೊಂಡಿರುವ ಶಾಸ್ತ್ರ ಲಕ್ಷಣಗಳಿಂದ ಕೂಡಿದ, ತಮಿಳಿನ ಪದ್ಯಮಾಲಿಕೆಯ ಈ ಹತ್ತು ಹಾಡುಗಳನ್ನೂ ಅಭ್ಯಾಸ ಮಾಡುವವರು, ಪರಮಾತ್ಮನನ್ನು ಅನುಭವಿಸಲು ಬೇಕಾದ ಅರ್ಹತೆಯನ್ನು ಹೊಂದಿದ ಭಕ್ತರಾಗುತ್ತಾರೆ—ಎಂದು ಹೇಳಿ ಕುಲಶೇಖರಾಳ್ವಾರ್‌ರವರು ಈ ಎಂಟನೆಯ ದಶಕವನ್ನೂ ಮುಗಿಸುತ್ತಾರೆ. ‖ ೧೧ ‖

## ಪೆರುಮಾಳ್ ತಿರುಮೊಳಿ — ಒಂಭತ್ತನೆಯ ದಶಕ

ಶ್ರೀರಾಮಚಂದ್ರನು ಕೈಕೇಯಿಯ ಮಾತಿಗೆ ಓಗೊಟ್ಟು ವನವಾಸಕ್ಕೆ ತೆರಳಿದಾಗ, ಶ್ರೀರಾಮಚಂದ್ರನ ಅಗಲಿಕೆಯಿಂದ ದುಃಖಕ್ಕೊಳಗಾದ ದಶರಥ ಚಕ್ರವರ್ತಿಯು, ಅಯೋಧ್ಯೆಯಲ್ಲಿ ಗೋಳಿಟ್ಟ ಬಗೆಯನ್ನು ಈ ಹತ್ತು ಹಾಡುಗಳಲ್ಲಿಯೂ ಕುಲಶೇಖರಾಳ್ವಾರ್‌ರವರು ವರ್ಣಿಸಿದ್ದಾರೆ.

ಕೃಷ್ಣಕೃತ ಬಾಲಚೇಷ್ಟಿತಗಳನ್ನು ಅನುಭವಿಸುವ ಭಾಗ್ಯವನ್ನು ಪಡೆಯದೆ ದುಃಖಿತಳಾದ ದೇವಕಿಯ ಮನೋವೇದನೆಯನ್ನು ತೋಡಿಕೊಂಡು ಏಳನೆಯ

ದಶಕವನ್ನು ಹಾಡಿದರು. ಶ್ರೀರಾಮಚಂದ್ರನ ಬಾಲಲೀಲೆಯನ್ನು ಕಂಡು ಸಂತುಷ್ಟಾಂತರಂಗಳಾದ ಕೌಸಲ್ಯೆಯು, ಅವನನ್ನು ತೊಟ್ಟಿಲಲ್ಲಿ ಮಲಗಿಸಿ, ಅವನಿಗೆ ಲಾಲಿ ಹಾಡಿದುದನ್ನು ಎಂಟನೆಯ ದಶಕದಲ್ಲಿ ಹಾಡಿದರು. ನಿತ್ಯಸೂರಿಗಳಾದ ಈ ಆಳ್ವಾರರು ಇಲ್ಲಿ ಅವತರಿಸುವ ಮುನ್ನ, ಶ್ರೀವೈಕುಂಠಲೋಕದಲ್ಲಿ ನಿರಂತರವಾಗಿ ಪರಮಾತ್ಮಾನುಭವವನ್ನು ಮಾಡುತ್ತಿದ್ದರು. ಆದರೆ, ಪರಮಾತ್ಮನ ಅವತಾರ ಕೃತ್ಯವಾದ ಧರ್ಮಸ್ಥಾಪನೆ ಮಾಡುವ ಸಲುವಾಗಿ, ಪರಮಾತ್ಮನಿಂದಲೇ ಆಜ್ಞಾಪಿಸಲ್ಪಟ್ಟು ಲೀಲಾವಿಭೂತಿಯಲ್ಲಿ ಇವರು ಅವತರಿಸಿದರು.

ಈ ಅವತಾರದೆಸೆಯಲ್ಲಿ, ಶ್ರೀವೈಕುಂಠದಂತೆ ನಿರಂತರವಾಗಿ ಪರಮಾತ್ಮನನ್ನು ಕಾಣಲಾಗುತ್ತಿಲ್ಲ, ಹಾಗೆ ಒಂದುವೇಳೆ ಲೀಲಾವಿಭೂತಿಗೆ ಬರುವುದಾದರೂ, ಪರಮಾತ್ಮನೂ ಇಲ್ಲಿ ರಾಮಕೃಷ್ಣಾದ್ಯವತಾರ ಮಾಡಿದ ಸಮಯದಲ್ಲಿಯೇ ತಾನೂ ಅವತರಿಸಿದ್ದರೂ ಚೆನ್ನಾಗಿರುತ್ತಿದ್ದಿತು. ಶ್ರೀವೈಕುಂಠದಲ್ಲಿ ಪರಮಾತ್ಮನ ನಿತ್ಯ ಸ್ವರೂಪವನ್ನು ಮಾತ್ರ ಕಾಣಬಹುದು. ಅವನ ವಿಭವ ಅರ್ಚಾಸ್ವರೂಪವನ್ನು ಕಾಣಬೇಕಾದರೆ ಲೀಲಾವಿಭೂತಿಗೆ ಬರಬೇಕಲ್ಲವೇ ? ಲೀಲಾವಿಭೂತಿಯಲ್ಲಿಯೇ ಇದ್ದರೂ, ಪರಮಾತ್ಮನ ಅವತಾರ ಕಾಲದಲ್ಲಿಯೇ ತಾವೂ ಜನ್ಮವೆತ್ತಿದ್ದರೂ, ಭಾಗ್ಯಹೀನರಾದವರು, ಅವನನ್ನು ನಿರಂತರವಾಗಿ ಕಾಣುವ ಭಾಗ್ಯವನ್ನು ಪಡೆದಿರುವುದಿಲ್ಲ. ಅದಕ್ಕೆ ಉದಾಹರಣರೂಪವಾಗಿ ಇರುವವರೆ, ದೇವಕಿ, ದಶರಥ ಇತ್ಯಾದಿಗಳು. ಅಂತೆಯೇ ಪರಮಾತ್ಮನ ವಿಭವಾವತಾರ ಕಾಲದಲ್ಲಿ ಇಲ್ಲಿ ಅವತರಿಸದೆ, ಬೇರೊಂದು ಕಾಲದಲ್ಲಿ ಅವತರಿಸಿದ ತನ್ನ ಸ್ಥಿತಿಯೂ ದೌರ್ಭಾಗ್ಯದಿಂದಲೇ ಕೂಡಿದುದು ಎಂದು, ದಶರಥ ಚಕ್ರವರ್ತಿಯು ಶ್ರೀರಾಮನನ್ನಗಲಿ ಅದರಿಂದ ದುಃಖಿತನಾಗಿ ಪ್ರಲಪಿಸಿದ ವೃತ್ತಾಂತವನ್ನು ಹಾಡುವುದರ ಮುಖಾಂತರ ಅನ್ಯಾಪದೇಶದಿಂದ ನಿರಂತರವಾಗಿ ಅವನ ಅವತಾರ ಕಾಲದಲ್ಲಿ ಆತನನ್ನು ಕಾಣದ ತನ್ನ ದೌರ್ಭಾಗ್ಯದಿಂದುಂಟಾದ ದುಃಖವನ್ನೂ ಈ ಹತ್ತು ಹಾಡುಗಳಲ್ಲಿ ಆಳ್ವಾರರು ತೋಡಿಕೊಂಡಿದ್ದಾರೆ.

**ವನ್‌ಕಾಳಿನ್ ಇಣೈ ವಣಂಗಿ ವಳನಕರಂ ತೊಳುದೇತ್ತಮನ್ನನಾವಾನ್**
**ನಿನ್ರಾಯ್ಯ, ಅರಿಯಣೈಮೇಲ್ ಇರುನ್ದಾಯ್ಯ ನೆಡುಂಕಾನಂ ಪಡರಪ್ಪೋಗು**
**ಎನ್ರಾಳ್, ಎಮ್ಮಿರಾಮಾವೋ! ವುನ್ನೈಪ್ಪಯನ್ದ ಕೈಕೇಶಿತನ್ ಶೊಲ್‌ಕೇಟ್ಟು**
**ನನ್ರಾಗ ನಾನಿಲತ್ತೈ ಆಳ್ವಿತ್ತೇನ್ ನನ್ಮಗನೇ ಯುನ್ನೈ ನಾನೇ ॥೧॥**

**ಎಮ್** = ನಮ್ಮನ್ನು, **ಇರಾಮಾ** = ಸಂತೋಷಿಸುವಂತೆ ಮಾಡುವ, **ನಲ್** = ನಾನು ಹೇಳುವ ಮಾತನ್ನು ಹಾಗೆಯೇ ನಡೆಯಿಸುವ ಒಳ್ಳೆಯ ನಡತೆಯುಳ್ಳ, **ಮಕನೇ** = ನನ್ನ ಮಗನೇ !, **ವಳಂ** = ಅಭಿಷೇಕಾರ್ಥವಾಗಿ ಅಲಂಕರಿಸಲ್ಪಟ್ಟ, **ನಕರಂ** = ಅಯೋಧ್ಯೆಯಲ್ಲಿರುವವರೆಲ್ಲರೂ, **ವನ್** = ಆಶ್ರಿತರನ್ನು ಕೈಬಿಡದಿರುವ ನಲ್ಮೆಯಿಂದ ಕೂಡಿದ, **ತಾಳಿನ್ ಇಣೈ** = ತಿರುವಡಿಗಳನ್ನು, **ವಣಂಗಿ** = ತಲೆಬಾಗಿ

**ತೊಳುದು** = ನಮಸ್ಕರಿಸಿ, **ಏತ್ತ** = ಸ್ತುತಿಸುವಂತೆ, **ಮನ್ನನಾವಾನ್** = ಪಟ್ಟಾಭಿಷೇಕ ಮಾಡಿಕೊಳ್ಳಲು, **ನಿನ್ರಾಯ್ಯೆ** = ಕಂಕಣಬದ್ಧನಾಗಿ ನಿಂತು, **ಅರಿಯಣೈಮೇಲ್** = ಸಿಂಹಾಸನದಲ್ಲಿ, **ಇರುಂದಾಯ್ಯೆ** = ಇರುವವನಂತೆಯೇ ಇರುವ, **ಉನ್ನೈ** = ನಿನ್ನನ್ನು, **ನೆಡುಂ** = ಯಾರೊಬ್ಬರಿಂದಲೂ ಪ್ರವೇಶಿಸಲು ಸಾಧ್ಯವಲ್ಲದಿರುವ, **ಕಾನಂ ಪಡರ** = ಕಾನನದ ಮಾರ್ಗದಲ್ಲಿ, **ಪ್ಪೋಕ್**= ಹೋಗು, **ಎನ್ರಾಳ್** = ಎಂದು ಹೇಳಿದ, **ಉನ್ನೈಪಯೆನ್ದ** = ನಿನ್ನ (ಬಲ) ತಾಯಿಯಾದ, **ಕೈಕೇಯಿತನ್** = ಕೈಕೇಯಿಯ, **ಶೊಲ್**=ಮಾತನ್ನು, **ನಾನ್**= ನಿರ್ದಯನಾದ ನಾನು, **ಕೇಟ್ಟು** = ಕೇಳಿ, **ಉನ್ನೈ**=ನಿನ್ನನ್ನು, **ನಾನಿಲತ್ತೈ** = ಭೂಮಿಯೆಲ್ಲವನ್ನೂ, **ನನ್ರಾಕ ಆಳ್ವಿತ್ತೇನ್** = ಚೆನ್ನಾಗಿಯೇ ಆಳುವಂತೆ ಮಾಡಿದೆನು. ||೧||

ನಾವೆಲ್ಲರೂ ನಿನ್ನನ್ನು ನೋಡಿದ ಕೂಡಲೆ ನಮಗೆ ಸಂತೋಷವನ್ನುಂಟು ಮಾಡುವ ಸುಂದರವಾದ ರೂಪವುಳ್ಳ ಎಲೈ ರಾಮನೇ (ರಮಯತಿ ಇತಿ ರಾಮಃ) ನಾನು ಹೇಳಿದ ಮಾತನ್ನು ಹಾಗೆಯೇ ನಡೆಯಿಸುವ ಒಳ್ಳೆಯ ನಡತೆಯುಳ್ಳ ಎಲೈ ನನ್ನ ಪುತ್ರನೇ! ಅಭಿಷೇಕಾರ್ಥವಾಗಿ ಅಲಂಕರಿಸಲ್ಪಟ್ಟ ಅಯೋಧ್ಯಾಪಟ್ಟಣದಲ್ಲಿರುವವರೆಲ್ಲರೂ, ಆಶ್ರಿತರನ್ನು ಕೈಬಿಡದೆ ರಕ್ಷಿಸುವ ನಲ್ಮೆಯಿಂದ ಕೂಡಿದ ನಿನ್ನ ತಿರುವಡಿಗಳನ್ನು ತಲೆಬಾಗಿ ನಮಸ್ಕರಿಸಿ ಸ್ತುತಿಸುವಂತೆ, ಪಟ್ಟಾಭಿಷೇಕ ಮಾಡಿಕೊಳ್ಳಲು ಕಂಕಣಬದ್ಧನಾಗಿ ನಿಂತು, ಸಿಂಹಾಸನದಲ್ಲಿ ಇರುವವನಂತೆಯೇ ಇರುವ ನಿನ್ನನ್ನು, 'ಯಾರೊಬ್ಬರಿಂದಲೂ ಪ್ರವೇಶಿಸಲು ಸಾಧ್ಯವಲ್ಲದಿರುವ ಕಾನನದ ಮಾರ್ಗದಲ್ಲಿ ಹೋಗು'—ಎಂದು ಹೇಳಿದ ನಿನ್ನ (ಬಲ) ತಾಯಿಯಾದ ಕೈಕೇಯಿಯ ಮಾತನ್ನು, ನಿರ್ದಯನಾದ ನಾನು ಕೇಳಿ, ನಿನ್ನನ್ನು ಭೂಮಿ ಎಲ್ಲವನ್ನೂ ಚೆನ್ನಾಗಿಯೇ ಆಳುವಂತೆ ಮಾಡಿದೆನು. ಅಂದರೆ, ಭೂಮಿಯನ್ನಾಳಲು ಕಂಕಣಬದ್ಧನಾದ ರಾಮನಿಗೆ ಪಟ್ಟಾಭಿಷೇಕ ಮಾಡದೆ, ಅವನು ಭೂಮಿಯನ್ನಾಳಲು ಅವಕಾಶವನ್ನೇ ಕೊಡದಿದ್ದ ತನ್ನನ್ನೇ ತಾನು ದೂಷಿಸಿಕೊಂಡು ವ್ಯಂಗ್ಯೋಕ್ತಿಯಿಂದ ಮೇಲಿನ ಮಾತನ್ನು ಹೇಳಿಕೊಂಡು ದಶರಥನು ದುಃಖಿಸುತ್ತಾನೆ. ಆದರೆ, ಪಟ್ಟಾಭಿಷಿಕ್ತನಾಗಿದ್ದರೆ, ರಾಮನು ಕೇವಲ ರಾಜ್ಯಪರಿಪಾಲನೆಯಲ್ಲಿಯೇ ನಿರತನಾಗಿರುತ್ತಿದ್ದನು. ಕಾಡು ಮೇಡುಗಳನ್ನು ಅಲೆದಾಡುತ್ತಿರಲಿಲ್ಲ. ವನವಾಸಕ್ಕೆ ದಶರಥನು ಕಳುಹಿಸಿದುದರಿಂದ ನಿಜವಾಗಲೂ ಸಮುದ್ರದವರೆವಿಗೂ ವ್ಯಾಪಿಸಿರುವ ತನ್ನ ರಾಜ್ಯವೆಲ್ಲವನ್ನೂ ರಾಮನು ಚೆನ್ನಾಗಿಯೇ ಆಳುವಂತೆ ಮಾಡಿದಂತಾಯಿತು. ||೧||

**ವೆವ್ವಾಯೇನ್ ವೆವ್ವುರೈಕೇಟ್ಟಿರುನಿಲತ್ತೈ**
**ವೇಂಡಾದೇ ವಿಟ್ಟೈನ್ದು, ವೆನ್ರಿ**

ಮೈವಾಯ ಕಳಿರೊಳಿನ್ದು ತೇರೊಳಿನ್ದು
ಮಾವೊಳಿನ್ದು ವನಮೇಮೇವಿ,
ನೆಯ್‍ವಾಯ ವೇಲ್‍ನೆಡುಂಕಣ್
ನೇರಿಳೈಯು ಮಿಳಂಗೋವುಂ ಪಿನ್ಬುಪೋಗ,
ಎವ್ವಾರುನಡನ್ದನೈ ಎಮ್ಮಿರಾಮಾವೋ
ಎಂಬೆರುಮಾನ್ ಎನ್‍ಶೆಯ್‍ಗೇನೇ ||೨||

**ವೆಂ**=ಕ್ರೂರವಾದ, **ವಾಯೇನ್**=ಮಾತಿನಿಂದ ಕೂಡಿದ ನನ್ನ, **ವೆಂ**=ತೀಕ್ಷ್ಣವಾದ, **ಉರೈ**=ಮಾತನ್ನು, **ಕೇಟ್ಟು**=ಕೇಳಿ, **ಇರು**=ನಿನ್ನ ಅಗಲಿಕೆಯನ್ನು ಧರಿಸಲಾಗದಿರುವ ಮಹಿಮೆಯುಳ್ಳ, **ನಿಲತ್ತೈ**=ನಗರದ ಜನಗಳೆಲ್ಲರನ್ನೂ, **ವೇಂಡಾತೇ** = ಅಪೇಕ್ಷಿಸದೆ ಕೈಬಿಟ್ಟು, **ವಿರೈನ್ದು** = ತ್ವರಿತವಾಗಿ, **ವೆನ್ರಿ**=ಜಯಪ್ರದವಾಗಿ, **ಮೈವಾಯ**=ಅಂಜನಗಿರಿಯಂತೆ ಹಿರಿದಾದ ದೇಹದಿಂದ ಕೂಡಿದ, **ಕಳಿರು**=ಆನೆಗಳನ್ನೂ, **ಒಳಿನ್ದು**=ಬಿಟ್ಟು, **ತೇರ್**=ರಥಗಳನ್ನೂ, **ಒಳಿನ್ದು**=ಬಿಟ್ಟು, **ಮಾ**=ಕುದುರೆಗಳನ್ನೂ, **ಒಳಿನ್ದು**=ಬಿಟ್ಟು, **ವನಮೇ**=ಅರಣ್ಯವನ್ನೇ, **ಮೇವಿ**=ಆಸೆಪಟ್ಟು, **ನೆಯ್‍ವಾಯ**=ತೀಕ್ಷ್ಣತೆಯು ಕುಗ್ಗದಿರಲು ತುಪ್ಪದಿಂದ ಲೇಪನ ಮಾಡಲ್ಪಟ್ಟಿರುವ, **ವೇಲ್**=ವೇಲಾಯುಧದಂತೆ ತನ್ನನ್ನು ಕಂಡವರೆಲ್ಲರಿಗೂ ಮನೋವಿಕಾರವಾಗುವಂತೆ ಮಾಡಿ ದುಃಖಕ್ಕೀಡುಮಾಡುವ, **ನೆಡುಂ**=ಕಿವಿಯವರೆವಿಗೂ ಚಾಚಿಕೊಂಡು ವಿಶಾಲವಾದ, **ಕಣ್**=ಕಣ್ಣುಗಳಿಂದ ಕೂಡಿದ, **ನೇರ್**=ಹಿರಿದಾದ, **ಇಳೈಯುಂ**=ಆಭರಣಗಳನ್ನು ಧರಿಸಿಕೊಂಡಿರುವ ಸೀತಾದೇವಿಯೂ, **ಇಳಂಗೋವುಂ** = ತಮ್ಮನಾದ ಲಕ್ಷ್ಮಣನೂ, **ಪಿನ್ಬುಪೋಕ**=ಹಿಂಬಾಲಿಸಿ ಬರುತ್ತಿರಲು, **ಎವ್ವಾರು**=ಹೇಗೆ ತಾನೇ, **ನಡನ್ದನೈ**=ನೀನು ನಡೆದು ಹೋದೆ. **ಎಮ್-ಇರಾಮಾ !**=ನಮ್ಮನ್ನು ರಮಿಸುವವನಂತೆ ಮಾಡುವವನಾದ ಎಲೈ ಶ್ರೀರಾಮಚಂದ್ರನೇ, **ಎಂಬೆರುಮಾನ್** = ನನಗೆ ಉಪಕಾರಕನಾದ ಸರ್ವೇಶ್ವರನೇ ! ಓ=ಅಯ್ಯೋ! **ಎನ್‍ಶೆಯ್‍ಕೇನ್**=ನಾನು ಏನು ತಾನೇ ಮಾಡಬಲ್ಲೆ ? ||೨||

ಕ್ರೂರವಾದ ಮಾತಿನಿಂದ ಕೂಡಿದ, ನನ್ನ ತೀಕ್ಷ್ಣವಾದ ಮಾತನ್ನು ಕೇಳಿ, ನಿನ್ನ ಅಗಲುವಿಕೆಯನ್ನು ಸಹಿಸಲಾಗದೆ ಸ್ವಲ್ಪದೂರ ನಿನ್ನನ್ನೇ ಹಿಂಬಾಲಿಸಿ ಬಂದ ಅಯೋಧ್ಯಾ ಪಟ್ಟಣದ ಜನರನ್ನೂ ಉಪೇಕ್ಷಿಸಿ, ತ್ವರಿತವಾಗಿ ಜಯಪ್ರದವಾದ ಅಂಜನಾದ್ರಿಯನ್ನು ಹೋಲುವ ದೇಹದಿಂದ ಕೂಡಿದ ಆನೆಗಳನ್ನೂ, ಕುದುರೆಗಳನ್ನೂ ರಥಗಳನ್ನೂ ತೊರೆದು, ಅರಣ್ಯವೊಂದನ್ನೇ ಆಸೆಪಟ್ಟು, ಅಲುಗಿನ ತೀಕ್ಷ್ಣತೆಯು ಕುಗ್ಗದಿರಲು ತುಪ್ಪ (ಎಣ್ಣೆ) ಯಿಂದ ಲೇಪನ ಮಾಡಲ್ಪಟ್ಟು ವೇಲಾಯುಧದಂತೆ, ಪ್ರಕಾಶಮಯವಾಗಿದ್ದು, ತನ್ನನ್ನು ಕಂಡವರೆಲ್ಲರಿಗೂ ಕಾಮೋದ್ರೇಕವಾಗುವಂತೆ

ಮಾಡಿ, ದುಃಖಕ್ಕೊಳಗುಮಾಡುವ, ಕಿವಿಯವರೆವಿಗೂ ಹರಡಿಕೊಂಡು ವಿಶಾಲವಾದ ಕಣ್ಣುಗಳಿಂದ ಕೂಡಿ, ಹಿರಿಮೆಯಿಂದ ಕೂಡಿದ ಆಭರಣಗಳನ್ನು ಧರಿಸಿದ್ದ ಸೀತಾ-ದೇವಿಯೂ, ನಿನ್ನ ತಮ್ಮನಾದ ಲಕ್ಷ್ಮಣನೂ ನಿನ್ನನ್ನು ಹಿಂಬಾಲಿಸಿ ಬರುತ್ತಿರಲು, ಅದು ಹೇಗೆ ತಾನೇ ನೀನು ನಡೆದುಹೋದೆ? ನಿನ್ನ ಕೋಮಲವಾದ ದೇಹಕಾಂತಿಯ ದರ್ಶನ ಮಾತ್ರದಿಂದಲೇ ನಮ್ಮನ್ನು ಸಂತೋಷಿಸುವಂತೆ ಮಾಡುತ್ತಿದ್ದ (ರಮಯತಿ ಇತಿ ರಾಮಃ) ಎಲೈ ಶ್ರೀರಾಮಚಂದ್ರನೇ! ನನಗೆ ಉಪಕಾರಕನಾದ ಸರ್ವೇಶ್ವರನೇ! ಅಯ್ಯೋ ನಾನು ಏನು ತಾನೇ ಮಾಡಬಲ್ಲೆ? ||೨||

**ಕೊಲ್ಲಣ್ಯೈವೇಲ್ ವರಿನೆಡುಂಕಣ್**
**ಕೌಶಲ್ಯೈತನ್ ಕುಲಮುದಲಾಯ್! ಕುನಿವಿಲ್ಲೇನ್ದುಂ**
**ಮಲ್ಲಣ್ಯೈನ್ದ ವರ್ಯೈತ್ತೋಳಾ! ವಲ್ವಿನ್ಯೈಯೇನ್**
**ಮನಮುರುಕ್ಕುಂ ವಗೈಯೇಕತ್ತಾಯ್**
**ಮೆಲ್ಲಣ್ಯೈಮೇಲ್ ಮುನ್‌ತುಯಿನ್ರಾ**
**ಇನ್ರಿನಿಪ್ಪೋಯ್ ವಿಯನ್‌ಕಾನ ಮರತ್ತಿನ್ ನೀಳಲ್**
**ಕಲ್ಲಣ್ಯೈಮೇಲ್ ಕಣ್ತುಯಿಲಕತ್ತನ್ಯೈಯೋ**
**ಕಾಕುತ್ತಾ! ಕರಿಯಕೋವೇ ||೩||**

**ಕೊಲ್ಲಣ್ಯೈ** = ಮತ್ತೊಬ್ಬರನ್ನು ಕೊಲ್ಲುವ ಸ್ವಭಾವವನ್ನೇ ಹೊಂದಿರುವ, **ವೇಲ್** = ವೇಲಾಯುಧದಂತೆ ಇರುವ ಹುಬ್ಬುಗಳಿಂದಲೂ, **ವರಿ** = ಕಪ್ಪಗಿರುವ ಕಣ್ಣುಗುಡ್ಡೆಗಳಿಂದಲೂ ಕೂಡಿದ, **ನೆಡುಂ** = ವಿಶಾಲವಾದ, **ಕಣ್** = ಕಣ್ಣಳಿಂದ ಕೂಡಿದ, **ಕೌಶಲ್ಯೈತನ್** = ಕೌಸಲ್ಯೆಯ, **ಕುಲಂ** = ಕುಲಕ್ಕೆ, **ಮುದಲಾಯ್** = ಉದ್ಧಾರಕನಾಗಿ, **ಕುನಿ** = ಬಗ್ಗಿದ, **ವಿಲ್** = ಧನುಸ್ಸನ್ನು, **ಏನ್ದುಂ** = ಧರಿಸಿಯೂ, **ವರ್ಯೈ** = ಬೆಟ್ಟದಂತೆ, **ಮಲ್‌ಅಣ್ಯೈನ್ದ** = ತುಂಬಿಕೊಂಡು ದಪ್ಪ-ನಾಗಿರುವ, **ತೋಳಾ** = ತೋಳುಗಳಿಂದಲೂ ಕೂಡಿದವನಾಗಿರುವವನೇ! **ವಲ್-ವಿನ್ಯೈಯೇನ್** = ಕಠೋರವಾದ ಪಾಪಗಳನ್ನು ಮಾಡಿರುವ ನನ್ನ, **ಮನಂ** = ಮನಸ್ಸೂ, **ಉರುಕ್ಕುಂ** = ಕರಗಿಹೋಗಿ ಸಡಿಲಗೊಳ್ಳುವಂತೆ, **ವಕೈಯೈ** = ಪ್ರಕಾರವನ್ನು, **ಕಟ್ರಾಯ್** = ಅಭ್ಯಾಸ ಮಾಡಿದ್ದೀಯೆ. **ಕರಿಯ** = ನೀಲಮಣಿಯಂತಿರುವ, **ಕೋವೇ** = ನನ್ನ ಮಗನೇ!, **ಕಾಕುತ್ಥಾ** = ಕಕುತ್ಸ್ಥ ಕುಲೋ-ದ್ಭವನಾದ ಶ್ರೀರಾಮನೇ!, **ಮುನ್** = ಮೊದಲೆಲ್ಲಾ ನಿನ್ನ ಶೈಶವಾವಸ್ಥೆಯಲ್ಲಿ, **ಮೆಲ್** = ಮೃದುವಾದ, **ಅಣ್ಯೈಮೇಲ್** = ಹಾಸಿಗೆಯ ಮೇಲೆ, **ತುಯಿನ್ರಾಯ್** = ನಿದ್ರಿಸುತ್ತಿದ್ದೆ. **ಇನ್ರು** = ಇಂದಿನಿಂದ, **ಇನಿ** = ಮುಂದೆ ಬರುವ ಕಾಲದಲ್ಲೆಲ್ಲಾ, **ಪೋಯ್** = ಕಾಡಿನಲ್ಲಿ ಹೋಗಿ, **ವಿಯನ್** = ದುಃಖವನ್ನುಂಟುಮಾಡುವ, **ಕಾನಂ** = ಕಾಡಿನಲ್ಲಿ, **ಮರತ್ತಿನ್ ನೀಳಲ್** = ಮರದ ನೆರಳಿನಲ್ಲಿ, **ಕಲ್ಲಣ್ಯೈ-**

ಮೇಲ್=ಕಲ್ಲುಗಳೆಂಬ ಹಾಸಿಗೆಯ ಮೇಲೆ, ಕಣ್ತುಯಿಲ=ನಿದ್ರಿಸುವುದನ್ನೂ, ಕಟ್ರನೈಯೋ ?=ಅಭ್ಯಾಸ ಮಾಡಿದ್ದೀಯಾ ? ||೩||

ಮತ್ತೊಬ್ಬರನ್ನು ಕೊಲ್ಲುವ ಸ್ವಭಾವವನ್ನೇ ಹೊಂದಿರುವ ವೇಲಾಯುಧದಂತೆ ಇರುವ ಹುಬ್ಬುಗಳಿಂದಲೂ, ಕಪ್ಪಗಿರುವ ಕಣ್ಣುಗುಡ್ಡೆಗಳಿಂದಲೂ, ವಿಶಾಲವಾದ ಕಣ್ಣುಗಳಿಂದಲೂ ಕೂಡಿದ, ಕೌಸಲ್ಯೆಯ ಕುಲಕ್ಕೆ ಉದ್ಧಾರಕನಾಗಿ, ಬಗ್ಗಿದ ಧನುಸ್ಸನ್ನು ಧರಿಸಿಯೂ, ಬೆಟ್ಟದಂತೆ ತುಂಬಿಕೊಂಡು ದಪ್ಪನಾಗಿರುವ ತೋಳುಗಳಿಂದಲೂ ಕೂಡಿದವನಾಗಿರುವವನೇ! ಕಠೋರವಾದ ಪಾಪಗಳನ್ನು ಮಾಡಿರುವ ನನ್ನ ಮನಸ್ಸೂ ಕರಗಿ ಸಡಿಲಗೊಳ್ಳುವಂತೆ ಮಾಡುವ ಪ್ರಕಾರವನ್ನು ನೀನು ತಿಳಿದಿದ್ದೀಯೆ. ನೀಲಮಣಿಯಂತಿರುವ ನನ್ನ ಮಗನೇ! ಕಾಕುತ್ಸ್ಥ ಕುಲೋದ್ಭವನಾದ ಶ್ರೀರಾಮನೇ! ಮೊದಲಿಲ್ಲಾ ನಿನ್ನ ಶೈಶವಾವಸ್ಥೆಯಲ್ಲಿ ಮೃದುವಾದ ಹಾಸಿಗೆಯ ಮೇಲೆ ನಿದ್ರಿಸುತ್ತಿದ್ದ ನೀನು, ಇಂದಿನಿಂದ ಮುಂದೆ ಕಾಡಿಗೆ ಹೋಗಿ, ದುಃಖವನ್ನುಂಟುಮಾಡುವ ಆ ಕಾಡಿನಲ್ಲಿರುವ ಮರದ ನೆರಳಿನಲ್ಲಿ ಕಲ್ಲುಗಳೆಂಬ ಹಾಸಿಗೆಯ ಮೇಲೆ ಮಲಗುವುದನ್ನೂ ಕಲಿತಿದ್ದೀಯಾ ? ||೩||

ವಾ ಪೋಗು ವಾ ಇನ್ನಂ ವಂದೊರು
ಕಾಲ್ಕಂಡು ಪೋಮಲರಾಳ್ ಕೂನ್ದಲ್,
ವೇಯ್‌ಪೋಲು ಮೆಳಿತ್ತೋಳಿತನ್
ಪೊರುಟ್ಟಾವಿಡೈಯೋನ್ತನ್ ವಿಲ್ಲಿತ್ತೆತ್ತಾಯ್,
ಮಾಪೋಗು ನೆಡುಂಕಾನಂ ವಲ್ವಿನೈಯೇನ್
ಮನಮುರುಕ್ಕುಂ ಮಗನೇ! ಇನ್ರು
ನೀ ಪೋಗ ವೆನ್ನೆಂಜಮಿರುಪಿಳವಾಯ್
ಪೋಗಾದೇ ನಿರ್ಕುಮಾರೇ ||೪||

ವಾ=ಇಲ್ಲಿ ಹತ್ತಿರಕ್ಕೆ ಬಾ-ಎಂದೂ, (ಬಂದ ಬಳಿಕ) ಪೋಕು=ಅಲ್ಲಿ ಹೋಗು-ಎಂದೂ, (ಮತ್ತೆ) ವಾ=ಹತ್ತಿರಕ್ಕೆ ಬಾ-ಎಂದೂ, (ಬಂದ ಬಳಿಕ) ಇನ್ನಂ=ಮತ್ತೆ, (ಹೋಗುವಲ್ಲಿ) ವನ್ದು = ಬಂದು, ಒರುಕಾಲ್ = ಒಮ್ಮೆ ಕಂಡುಪೋ = ನನ್ನನ್ನು ನೋಡಿಹೋಗು— (ಎಂದು ಹೇಳುತ್ತಲೇ ಇದ್ದೆ) ಮಲರಾಳ್=ಹೂವುಗಳನ್ನು ಸದಾ ಧರಿಸಿರುವ, ಕೂನ್ದಲ್=ಕುಂತಲಭರಿತಳಾದ, ವೇಯ್‌ಪೋಲುಂ = ಬಿದಿರಿನ ಮೆಳೆಯಂತೆ, ಎಳಿಲ್ = ಸುಂದರವಾದ, ತೋಳಿತನ್ ಪೊರುಟ್ಟಾ=ಸುಂದರವಾದ ತೋಳುಗಳನ್ನೂ ಹೊಂದಿರುವ ಸೀತಾದೇವಿಯ ನಿಮಿತ್ತವಾಗಿ, ವಿಡೈಯೋನ್ತನ್ = ವೃಷಭವಾಹನನಾದ ಶಿವನ, ವಿಲ್ಲಿತ=ಧನುಸ್ಸನ್ನು, ಶೆತ್ತಾಯ್=ಮುರಿದವನೇ! ವಲ್ವಿನೈಯೇನ್=ಮಹಾಪಾಪವನ್ನೆಸಗಿರುವ ನನ್ನ, ಮನಂ = ಹೃದಯವನ್ನೂ, ಉರುಕ್ಕುಂ=

ಕರಗುವಂತೆ ಮಾಡುವ, **ಮಕನೇ**=ಪುತ್ರನೇ ! **ಉನ್ರು**=ಇಂದು, **ನೀ**=ನೀನು, **ಮಾ**=ಆನೆಗಳು, **ಪೋಕು**=ಸಂಚರಿಸುವ, **ನೆಡು**=ಕ್ರೂರವಾದ, **ಕಾನಂ**= ಕಾಡಿನಲ್ಲಿ, **ಪೋಕ** = ಹೋಗುತ್ತಿರಲು, **ಎನ್** = ನನ್ನ, **ನೆಂಜಂ**=ಹೃದಯ ವಾದರೋ, **ಇರುಪಿಳವಾಯ್ ಪೋಕಾದೇ** = ಎರಡು ಭಾಗವಾಗಿ ಒಡೆದು ಹೋಗದೆ, **ನಿರ್ಕುಮಾರೇ**=ಇನ್ನೂ ದೃಢವಾಗಿಯೇ ನಿಂತಿದೆ. ||೪||

ಎಲೈ ಶ್ರೀರಾಮಚಂದ್ರನೇ ! ನಿನ್ನ ಸೌಂದರ್ಯವನ್ನು ಎಷ್ಟು ನೋಡಿದರೂ ತೃಪ್ತನಾಗದೆ, ಪುತ್ರವಾತ್ಸಲ್ಯದಿಂದ ನಿನ್ನನ್ನು ಬಿಟ್ಟಿರಲಾರದೆ, ನೀನೆಲ್ಲಿಗಾದರೂ ಹೊರಟರೆ ನಿನ್ನ ದೇಹದ ಮುಂಭಾಗದ ಸೌಂದರ್ಯವನ್ನು ಕಾಣಲು 'ಹತ್ತಿರಕ್ಕೆ ಬಾ' -ಎಂದು ಕರೆದು, ಆ ಸೌಂದರ್ಯವನ್ನನುಭವಿಸಿ, ಬಳಿಕ ನಿನ್ನ ಪೃಷ್ಠಭಾಗದ ಸೌಂದರ್ಯವನ್ನು ಕಾಣಲು-'ಹೋಗು'-ಎಂದು ಹೇಳಿ, ಮತ್ತೆ ನಿನ್ನನ್ನಗಲಿರದೆ, ಹತ್ತಿರಕ್ಕೆ ಕರೆದು-ನೀನೆಲ್ಲಿ ಹೋಗಬೇಕಾದರೂ ನನ್ನನ್ನು ಬಂದು ನೋಡಿಹೋಗು- ಎಂದು ನಾನು ಹೇಳುತ್ತಿದ್ದೆ. ಆದರೆ, ಪುಷ್ಪಗಳನ್ನು ಸದಾಕಾಲದಲ್ಲಿಯೂ ಮುಡಿ- ದಿರುವ ಕುಂತಲಗಳುಳ್ಳ, ಬಿದಿರಿನ ಮೆಳೆಯಂತೆ ತೆಳ್ಳಗಿರುವ ಸುಂದರವಾದ ತೋಳಿನಿಂದ ಕೂಡಿದ ಸೀತಾದೇವಿಯನ್ನು ಪಡೆದುಕೊಳ್ಳುವ ಸಲುವಾಗಿ ವೃಷಭ ವಾಹನನಾದ ರುದ್ರಧನುಸ್ಸನ್ನು ಮುರಿದವನೇ ! ಮಹಾಪಾಪವನ್ನೆಸಗಿರುವ ನನ್ನ ಮನಸ್ಸನ್ನೂ ಕರಗುವಂತೆ ಮಾಡುವವನೇ ! ಎಲೈ ! ನನ್ನ ಮಗನೇ ! ಇಂದು, ನೀನು ಆನೆಗಳು ಸಂಚರಿಸುವ ಕ್ರೂರವಾದ ಕಾಡಿನಲ್ಲಿ ನಡೆದುಹೋಗುತ್ತಿರುವುದನ್ನು ಕೇಳಿಯೂ, ಕಠೋರವಾದ ಈ ನನ್ನ ಹೃದಯವು ಎರಡು ಭಾಗವಾಗಿ ಒಡೆದು ಹೋಗದೆ, ಇನ್ನೂ ದೃಢವಾಗಿಯೇ ನಿಂತಿದೆ. ||೪||

**ಪೊರುನ್ದಾರ್ ಕೈವೇಲ್ನುದಿಪೋಲ್**
**ಪರಲ್ಪಾಯ ಮೆಲ್ಲಡಿಕ್ಕಳ್ ಕುರುದಿಶೋರ,**
**ವಿರುಂಬಾದ ಕಾನ್ ವಿರುಂಬಿ ನೆಯಿಲ್**
**ಉಯ್ಪ್ಪ ವೆಂಬಶಿನೋಯ್ ಕೂರ, ಇನ್ರು**
**ಪೆರುಂಬಾವಿಯೆನ್ಮಗನೇ ಪೋಗಿನ್ರಾಯ್**
**ಕೇಕಯರ್ಕೋನ್ ಮಗಳಾಯ್ ಪೆತ್ತ,**
**ಅರುಂಬಾವಿ ಶೊಲ್ಕೇಟ್ಟ ವರುವಿನ್ನೈಯೇನ್**
**ಎನ್ ಶೆಯ್ಗೇನ್ ಅಂದೋಯೋನೇ** ||೫||

**ಪೊರುನ್ದಾರ್** = ಶತ್ರುಗಳ, **ಕೈ** = ಕೈಯಲ್ಲಿ ಧರಿಸಿರುವ, **ವೇಲ್**= ವೇಲಾಯುಧಗಳ, **ನುತಿಪೋಲ್**=ಹರಿತವಾದ ತುದಿಗಳಂತಿರುವ, **ಪರಲ್**= ಚೂಪಾದ ಬೆಣಚು ಕಲ್ಲುಗಳ ಮೇಲೆ, **ಪಾಯ**=ನಡೆಯುವುದರಿಂದ, **ಮೆಲ್**= ಸುಕುಮಾರವಾದ, **ಅಡಿಕ್ಕಳ್**=ಅಡಿಗಳಿಂದ, **ಕುರುತಿ**=ರಕ್ತವು, **ಶೋರ**=

ಹರಿಯುತ್ತಿದ್ದರೂ, **ವಿರುಂಬಾದ** = (ಕಠಿಣ ಸ್ವಭಾವದವರೂ ಯಾರೊಬ್ಬರೂ ಹೋಗಲು) ಇಚ್ಛಿಸದಿರುವ, **ಕಾನ್** = ಕಾನನವನ್ನು, **ವಿರುಂಬಿ** = ನಾನು ಹೇಳಿದೆನೆಂದು ಆಸೆಪಟ್ಟು, **ವೆಯಿಲ್** = ಬಿಸಿಲು, **ಉರೈಪ್ಪ**=ತಲೆಯಮೇಲೆ ಕಾವನ್ನುಂಟು ಮಾಡುತ್ತಿದ್ದರೂ, (ಕಾಲದಲ್ಲಿ ಆಹಾರವಿಲ್ಲದಿರುವುದರಿಂದ) **ವೆಂ**= ತೀಕ್ಷ್ಣವಾದ, **ಪತಿನೋಯ್**=ಹಸಿವಿನ ಬಾಧೆಯು, **ಕೂರ**=ಪೀಡಿಸುತ್ತಿದ್ದರೂ, **ಪೆರುಂ ಪಾವಿಯೇನ್** = ಮಹಾಪಾಪಿಯಾದ ನನ್ನ, **ಮಗನೇ** = ಸುತನೇ ! **ಇನ್ರು**=ಇಂದು, **ವಿರುಂಬಾದ**=ಯಾರೊಬ್ಬರೂ ಇಚ್ಛಿಸದ, **ಕಾನ್‌ವಿರುಂಬಿ**= ಕಾಡನ್ನು ಆಸೆಪಟ್ಟು, **ಪೋಕಿನ್ರಾಯ್** = ಹೋಗಿದ್ದೀಯೆ. **ಕೇಕಯರ್-ಕೋನ್**=ಕೇಕಯ ಮಹಾರಾಜರು, **ಮಕಳಾಯ್‌ಪೆತ್ತ**=ಮಗಳಾಗಿ ಹಡೆದ, **ಅರುಂಬಾವಿ**=ಮಹಾಪಾಪಿಯಾದ ಕೈಕೇಯಿಯ, **ಶೊಲ್‌ಕೇಟ್ಟ**=ಮಾತನ್ನು ಕೇಳಿ (ಅದಕ್ಕೆ ಕಟ್ಟುಬಿದ್ದು), **ಅರುವಿನೈಯೇನ್**=ಯಾವ ಒಂದು ಪ್ರತಿಕ್ರಿಯೆ-ಯನ್ನೂ ಮಾಡಲು ಅಸಮರ್ಥನಾದ, **ಯಾನ್**=ನಾನು, **ಎನ್‌ಶೆಯ್-ಕೇನ್**=ಏನು ತಾನೇ ಮಾಡಿಯೇನು, **ಅನ್ದೋ**=ಅಯ್ಯೋ ! ||೫||

ಮಹಾಪಾಪಿಯಾದ ನನ್ನ ಮಗನಾದ ಎಲೈ ಶ್ರೀರಾಮಚಂದ್ರನೇ ! ಶತ್ರುಗಳ ಕೈಗಳಲ್ಲಿ ಧರಿಸಿರುವ ವೇಲಾಯುಧಗಳ ತುದಿಯಂತೆ ಚೂಪಾದ ಬೆಣಚು ಕಲ್ಲುಗಳ ಮೇಲೆ ನೀನು ನಡೆಯುವುದರಿಂದ ಕೋಮಲವಾದ ನಿನ್ನ ಅಂಗಾಲುಗಳಿಗೆ ಆ ಕಲ್ಲುಗಳು ಚುಚ್ಚಿಕೊಂಡು ನಿರಂತರವಾಗಿ ರಕ್ತ ಹರಿಯುತ್ತಿದ್ದರೂ, ಮೇಲ್ಭಾಗದಲ್ಲಿ ಸೂರ್ಯನ ಬಿಸಿಲಿನಿಂದ ತಲೆಯು ಕಾಯುತ್ತಿದ್ದು, ಕಾಲಕಾಲದಲ್ಲಿ ಆಹಾರವಿಲ್ಲದೆ ಹಸಿವು ಬಾಧಿಸುತ್ತಿದ್ದರೂ, ಅವುಗಳಾವುವನ್ನೂ ಲಕ್ಷ್ಯಮಾಡದೆ, ಯಾರೊಬ್ಬರಿಂದಲೂ ಇಷ್ಟಪಡದ ಕಾಡಿನಲ್ಲಿ ನೀನು ಹೋಗುತ್ತಿದ್ದೀಯೆ. ಕೇಕಯರಾಜರ ಮಗಳಾದ ಮಹಾಪಾಪಿಯಾದ ಕೈಕೇಯಿಯ ಮಾತನ್ನು ಕೇಳಿ ಅದಕ್ಕೆ ಕಟ್ಟುಬಿದ್ದು, ಯಾವ ಒಂದು ಪ್ರತಿಕ್ರಿಯೆಯನ್ನೂ ಮಾಡಲು ಅಸಮರ್ಥನಾದ ನಾನು, ಅಯ್ಯೋ! ಏನು ತಾನೇ ಮಾಡಬಲ್ಲೆ ? ||೫||

**ಅಮ್ಮಾವೆನ್ರುಗನ್ದಣೈಕ್ಕುಂ ಅರ್ವಚ್ಚೊಲ್**
**ಕೇಳಾದೇ ಅಣಿಶೇರ್ ಮಾರ್ವಂ,**
**ಎನ್ಮಾರ್ವತ್ತಿಡೈಯೆಳುನ್ದತ್ತಳುವಾದೇ**
**ಮುಳುಶಾದೇ ಮೋವಾದುಚ್ಚಿ,**
**ಕೈಮ್ಮಾವಿನ್ ನಡೈಯೆನ್ನಮೆನ್ನಡೈಯುಮ್**
**ಕಮಲಂ ಪೋಲ್ ಮುಗಮುಂ ಕಾಣಾದು,**
**ಯೆಮ್ಮಾನ್ಯೆಯೆನ್ಮಗನೈಯಿಳನ್ದಿಟ್ಟ**
**ಇಳಿತಕ್ಕೆಯೋ ನಿರುಕ್ಕಿನ್ರೇನೇ ||೬||**

**ಅಮ್ಮಾವೆನ್ರು** = 'ಅಮ್ಮಾ'-ಎಂದು, **ಉಕನ್ದು** = ಪ್ರೀತಿಪೂರ್ವಕವಾಗಿ, **ಅಳೈಕ್ಕುಂ** = ಕರೆಯುವ, **ಆರ್ವಚ್ಚೊಲ್** = ಅಭಿಮಾನಪೂರಿತವಾದ ಮಾತುಗಳನ್ನು **ಕೇಳಾದು** = ಕೇಳದೆಯೂ, **ಅಣಿಶೇರ್** = ಆಭರಣಗಳಿಂದ ಅಲಂಕೃತವಾದ **ಮಾರ್ವಂ** = ಎದೆಯನ್ನು, **ಎನ್ಮಾರ್ವತ್ತಿಡೈ** = ನನ್ನ ಎದೆಯಲ್ಲಿ, **ಅಳುನ್ದ** = ಅಂಟಿಕೊಳ್ಳುವಂತೆ, **ತಳುವಾದು** = ಆಲಿಂಗನ ಮಾಡಿಕೊಳ್ಳದೆಯೂ, **ಮುಳು-ಶಾತು** = ಮುತ್ತಿಡದೆಯೂ, **ಉಚ್ಚಿಮೋವಾದು** = ನಿನ್ನ ತಲೆಯನ್ನು ಮೂಸಿ ನೋಡದೆಯೂ, **ಕೈಮ್ಮಾವಿನ್** = ಮದಗಜದ, **ನಡ್ಡೈಯೊನ್ನ** = ನಡೆಯನ್ನು ಹೋಲುವ, **ಮೆಲ್** = ಮೃದುವಾದ, **ನಡ್ಡೈಯುಮ್** = ನಡೆಯ ಸೌಂದರ್ಯವನ್ನೂ **ಕಮಲಂಪೋಲ್** = ತಾವರೆಯಂತಿರುವ, **ಮುಕಮುಂ** = ನಿನ್ನ ಮುಖದ ಸೌಂದರ್ಯವನ್ನೂ, **ಕಾಣಾದು** = ಕಾಣದಂತೆ, **ಎಮ್ಮಾನೈ** = (ನಡೆಯ ಸೌಂದರ್ಯದಿಂದ) ನನ್ನನ್ನು ವಶೀಕರಣ ಮಾಡಿಕೊಂಡಿರುವ ನನ್ನ ಸ್ವಾಮಿಯಾದ, **ಎನ್ಮಗನ್ನೈ** = ನನ್ನ ಮಗನಾದ ನಿನ್ನನ್ನು, **ಇಳಿನ್ದಿಟ್ಟೆ** = ಕಳೆದುಕೊಂಡಿರುವ, **ಇಳಿತಕ್ಕೈಯೇನ್** = ಹರಿದುಹೋದ ನೀರಿನಂತೆ ಕಳೆದುಕೊಂಡ ಭಾಗ್ಯವುಳ್ಳ ನಾನು, **ಇರುಕ್ಕಿನ್ರೇನ್** = ಇನ್ನೂ ಬದುಕಿದ್ದೇನೆ. ||೬||

'ಅಪ್ಪಾ'-ಎಂದು ಪ್ರೀತಿಪೂರ್ವಕವಾಗಿ ಕರೆಯುವ, ನಿನ್ನ ಅಭಿಮಾನಪೂರಿತ-ವಾದ ಮಾತುಗಳನ್ನು ಕೇಳದೆಯೂ; ಆಭರಣಗಳಿಂದಲಂಕೃತವಾದ ನಿನ್ನ ಎದೆಯು ನನ್ನ ಎದೆಯಲ್ಲಿ ಕೂಡಿಕೊಳ್ಳುವಂತೆ ನಿನ್ನನ್ನು ಗಾಢವಾಗಿ ಆಲಿಂಗನ ಮಾಡಿಕೊಳ್ಳ-ದೆಯೂ; ನಿನಗೆ ಮುತ್ತಿಡದೆಯೂ, "ಮುದಾಹಸನ್ ಜಿಘ್ರತಿ ಮೂರ್ಧ್ನಿ ಪುಣ್ಯಭಾಕ್" (ಪುಣ್ಯವಂತರಾದವರು, ಮುಗುಳ್ನಗೆಯಿಂದ ಕೂಡಿ ಅತ್ಯಧಿಕವಾದ ಆನಂದದಿಂದ, ತಮ್ಮ ಮಕ್ಕಳ ತಲೆಯನ್ನು ಮೂಸುತ್ತಾರೆ)—ಎಂದು ಹೇಳುವಂತೆ, ನಿನ್ನ ತಲೆಯನ್ನು ಮೂಸದೆಯೂ; ಮದಗಜದ ನಡೆಯನ್ನು ಹೋಲುವ, ನಿಧಾನ ವಾಗಿಯೂ ಗಂಭೀರವಾಗಿಯೂ ಇರುವ ನಿನ್ನ ನಡೆಯ ಸೌಂದರ್ಯವನ್ನೂ, ಕಮಲ ಪುಷ್ಪದಂತಿರುವ ನಿನ್ನ ಮುಖದ ಸೌಂದರ್ಯವನ್ನೂ ಕಾಣದಂತೆ, ನಡೆಯ ಸೌಂದರ್ಯದಿಂದ ನನ್ನನ್ನು ವಶೀಕರಣ ಮಾಡಿಕೊಂಡಿರುವ ನನ್ನ ಸ್ವಾಮಿಯಾದ, ನನ್ನ ಮಗನಾದ ನಿನ್ನನ್ನು ಕಳೆದುಕೊಂಡಿರುವ, ನಾನಾದರೋ ಹರಿದುಹೋದ ನೀರಿನಂತೆ ಕಳೆದುಹೋದ ಭಾಗ್ಯವುಳ್ಳವನಾಗಿ ಇನ್ನೂ ಬದುಕಿದ್ದೇನೆ. ||೬||

**ಪೂಮರುವು ನರುಂಕುಂಜಿ ಪುಱಶಡ್ಡೈಯಾ**
**ಪ್ಪುನೈಂದು ಪೂನ್ದುಕಿಲ್ ಶೇರಲ್‌ಕುಲ್**
**ಕಾಮರೆಳಿಲ್ ವಿಳಲುಡುತ್ತು ಕ್ಕಲನಣಿಯಾದು**
**ಅಂಗಂಗಳ್ ಅಳಗುಮಾರಿ**

ಏಮರುತೋಳಿನ್ ಪುದಲ್ವನ್‌ಯಾನಿನ್ರು
ಶೆಲತ್ತಕ್ಕ ವನಂ ತಾನ್ ಶೇರ್‌ದಲ್
ತೂಮರ್ಯೆಯಿರಾರ್ ಇಡುತಗವೋ
ಶುಮನ್ದಿರನೇ ! ವಶಿಟ್ಟನೇ ! ಶೊಲ್ಲೀರ್ ನೀರೇ ||೭||

**ಪೂಮರುವು** = ಎಂದೂ ಬಾಡದಿರುವ ಹೂವಿನಿಂದ ಕೂಡಿ, **ನರುಂ**= ಪರಿಮಳಿತವಾದ, **ಕುಂಜಿ**= ಕುಂತಲಗಳನ್ನು, **ಪುನ್‌ಶಡೈಯಾ**= ಬೇರೊಬ್ಬರಿಂದ ನೋಡಲು ಸಾಧ್ಯವಲ್ಲದ ಜಟೆಯಾಗಿ, **ಪುನೈನ್ದು** = ಕಟ್ಟಿಕೊಂಡು, **ಪೂನ್ದುಕಿಲ್-ಶೇರ್**= ಸುಂದರವಾದ ವಸ್ತ್ರಗಳನ್ನು ಧರಿಸಲು ತಕ್ಕುದಾದ, **ಅಲ್‌ಕುಲ್**= ಸೊಂಟದಲ್ಲಿ, **ಕಾಮರ್**= ನೋಡಲು ಮಾತ್ರ ಆಸೆಪಡುವಂತಿರುವ, **ಎಳಿಲ್**= ಸುಂದರವಾದ, **ವಿಳಲ್** = ಕುಶ, ಕಾಶಾದಿ ಹುಲ್ಲುಗಳನ್ನೇ, **ಉಡುತ್ತು**= ಹಗ್ಗವಾಗಿ ಹೊಸೆದು ಅದರಿಂದ ತಯಾರಿಸಿದ ನಾರುಡಿಗೆಗಳನ್ನೇ ಕಟ್ಟಿಕೊಂಡು, **ಕಲನ್**= ಆಭರಣಗಳನ್ನು, **ಅಣಿಯಾದು**= ಧರಿಸದೇ (ಅದರಿಂದ), **ಅಂಗಂಗಳ್**= ಅಂಗಾಂಗಗಳ, **ಅಳಕು**= ಸೊಬಗೇ, **ಮಾರಿ**= ಬದಲಾಗಿ, **ಏಮರು**= ಶತ್ರುಗಳು ಹೆದರುವ ಬಾಣಗಳಿಗೆ ಸರಿಸಮಾನವಾದ, **ಶೋಳ್**= ತೋಳುಗಳನ್ನು ಹೊಂದಿರುವ, **ಎನ್**= ನನ್ನ, **ಪುತಲ್ವನ್**= ಮಗನು, **ಯಾನ್**= ನಾನು, **ಇನ್ರು**= ಈ ವೃದ್ಧಾಪ್ಯದಲ್ಲಿ, **ಶೆಲತ್ತಕ್ಕ** = ಹೋಗಲು ಯೋಗ್ಯವಾದ, **ವನಂ**= ಕಾಡಲ್ಲಿ, **ತಾನ್‌ಶೇರ್‌ದಲ್** = ಭೋಗ್ಯಯೋಗ್ಯನಾದ ತಾನು ಹೋಗುವುದು, **ತೂ**= ಪರಿಶುದ್ಧರಾದ, **ಮರ್ಯೆಯಿರಾರ್**= ವೇದವನ್ನೇ ಧನವನ್ನಾಗಿ ಹೊಂದಿರುವವರೇ ! **ಶುಮನ್ದಿರನೇ** = ಸುಮಂತ್ರನೇ ! **ವಶಿಟ್ಟನೇ** = ವಸಿಷ್ಠ ಭಗವಾನ್‌ರವರೇ ! **ಇಡುತಗವೋ**= ಇದು ಧರ್ಮವೋ ?, **ನೀರ್**= ನೀವುಗಳೇ, **ಶೊಲ್ಲೀರ್**= ಹೇಳಿರಿ. ||೭||

ನಿತ್ಯ ನಿರವದ್ಯವಾದ ವೇದಗಳನ್ನೇ ಧನವನ್ನಾಗಿ ಹೊಂದಿರುವವರಾದ ಎಲೈ ಬ್ರಾಹ್ಮಣೋತ್ತಮರೇ ! ರಾಜಧರ್ಮ ವಿಶಾರದನಾದ ಎಲೈ ಸುಮಂತ್ರನೇ ! ಪುರೋಹಿತಾಗ್ರೇಸರರಾದ ಎಲೈ ವಸಿಷ್ಠ ಮಹರ್ಷಿಗಳೇ ! ನೀವೇ ಹೇಳಿರಿ. ಎಂದೂ ಬಾಡದಿರುವ ಹೂವಿನಿಂದ ಕೂಡಿ ಸುರಭಿತವಾಗಿದ್ದ ಕುಂತಲಗಳನ್ನು, ಯಾರೊಬ್ಬ-ರಿಂದಲೂ ನೋಡಲು ಸಾಧ್ಯವಲ್ಲದ ಜಟೆಯಾಗಿ ಕಟ್ಟಿಕೊಂಡು, ಸುಂದರವಾದ ಪೀತಾಂಬರವೇ ಮೊದಲಾದ ವಸ್ತ್ರಗಳನ್ನು ಧರಿಸಲು ತಕ್ಕುದಾದ ಸೊಂಟದಲ್ಲಿ ಕುಶ ಕಾಶಾದಿ ಹುಲ್ಲುಗಳನ್ನೇ ಹೊಸೆದು ದಾರವಾಗಿ ಮಾಡಲ್ಪಟ್ಟು ಅದರಿಂದ ತಯಾರಿ-ಸಲ್ಪಟ್ಟ ನಾರುಡಿಗೆಗಳನ್ನೇ ಧರಿಸಿಕೊಂಡು, ದೇಹದಲ್ಲಿ ಆಭರಣಗಳಾವುದನ್ನೂ ಧರಿಸದಿರುವುದರಿಂದ, ಅಂಗಾಂಗಗಳ ಸೊಬಗೇ ಬದಲಾಗಿ, ಶತ್ರುಗಳು ಹೆದರುವ ಬಾಣಗಳಿಗೆ ಸರಿಸಮವಾದ ತೋಳುಗಳನ್ನು ಹೊಂದಿರುವ, ನನ್ನ ಮಗನಾದ

ರಾಮಚಂದ್ರನು, ನಾನು ಈ ವೃದ್ಧಾಪ್ಯದಲ್ಲಿ ಹೋಗಲು ಯೋಗ್ಯವಾದ ಕಾನನದಲ್ಲಿ ಭೋಗ್ಯಯೋಗ್ಯನಾದ ತಾನು ಹೋಗುವುದು ಯೋಗ್ಯವಾದುದೇ? ಧರ್ಮವೇ? ನೀವೇ ಹೇಳಿರಿ. ||೭||

ಪೊನ್‌ಪೆತ್ತಾರೆಳಿಲ್ ವೇದಪ್ಪುದಲ್ವನೈಯುಂ
ತಂಬಿಯೈಯುಂ ಪೂವೈಪೋಲುಂ
ಮಿನ್ಪತ್ತಾನುಣ್ ಮರುಂಗಲ್ ಮೆಲ್ಲಿಯಲಿನ್
ಮರುಗಿಯ್ಯೈಯುಂ ವನತ್ತಿಪ್ಪೋಕ್ಕಿ
ನಿನ್ಪತ್ತಾ ನಿನ್ಮಗನ್ಮೇಲ್ ಪಳಿವಿಳೈತ್ತಿಟ್ಟು
ಎನ್ನೈಯುಂ ನೀಳ್ವಾನಿಲ್ ಪೋಕ್ಕಿ
ಎನ್‌ಪೆತ್ತಾಯ್ ಕೈಕೇಶೀ ! ಇರುನಿಲತ್ತಿಲ್
ಇನಿದಾಗ ಇರುಕ್ಕಿನ್ರಾಯೇ ||೮||

**ಕೈಕೇಶಿ**=ಎಲೈ ಕೈಕೇಯಿಯೇ !, **ಪೊನ್‌ಪೆತ್ತಾರ್**=ವಿದ್ಯಾಧನರಾದ ಉಪಾಧ್ಯಾಯರ ಸನ್ನಿಧಾನದಲ್ಲಿ, **ಎಳಿಲ್**=ಸುಂದರವಾದ, **ವೇದಂ**=ವೇದ ಶಾಸ್ತ್ರಗಳನ್ನು ಅಧ್ಯಯನ ಮಾಡಿದ, **ಪುದಲ್ವನೈಯುಂ**=ನನ್ನ ಜ್ಯೇಷ್ಠಪುತ್ರನನ್ನೂ, **ತಂಬಿಯೈಯುಂ**=ಅವನ ತಮ್ಮನಾದ ಲಕ್ಷ್ಮಣನನ್ನೂ, **ಪೂವೈಪೋಲುಂ**= ಹೂವಿನಂತ ಕೋಮಲವಾದ ದೇಹವುಳ್ಳ, **ಮಿನ್ನು**=ಮಿಂಚಿನ ಬಳ್ಳಿಯೂ ಕೂಡ, **ಪತ್ತಾ**=ಹೋಲಿಕೆಯಾಗಿ ಹೇಳಲು ಸಾಧ್ಯವಲ್ಲದಷ್ಟು, **ನುಣ್**=ತೆಳ್ಳಗಿರುವ, **ಮರುಂಗಲ್** = ನಡುವುಳ್ಳ, **ಮೆಲ್ಲಿಯಲ್** = ಮೃದುಸ್ವಭಾವವುಳ್ಳ, **ಎನ್-ಮರುಕಿಂಯ್ಯೈಯುಂ**=ನನ್ನ ಸೊಸೆಯಾದ ಸೀತಾದೇವಿಯನ್ನೂ, **ವನತ್ತಿಲ್**= ಕಾಡಿನಲ್ಲಿ, **ಪೋಕ್ಕಿ**=ಹೋಗುವಂತೆ ಮಾಡಿ, **ನಿನ್‌ಪತ್ತಾ**=ನಿನ್ನೊಬ್ಬಳನ್ನುಳಿದು ಬೇರಾರನ್ನೂ ತಾಯಿಯೆಂದು ಭಾವಿಸದ, **ನಿನ್ಮಗನ್ಮೇಲ್** = ನಿನ್ನ ಮಗನಾದ ಭರತನ ಮೇಲೆ, **ಪಳಿ**=‘ಭ್ರಾತೃದ್ರೋಹಿ’-ಎಂಬ ಅಪವಾದವನ್ನು, **ವಿಳೈತ್ತಿಟ್ಟು** =ಉಂಟಾಗಿಸಿ, **ಎನ್ನೈಯುಂ**=ನನ್ನನ್ನೂ, **ನೀಳ್**=ಹಿರಿಮೆಯಿಂದ ಕೂಡಿದ, **ವಾನಿಲ್ ಪೋಕ್ಕ** = ಸ್ವರ್ಗವನ್ನು ಸೇರುವಂತೆ ಮಾಡಿ, **ಎನ್‌ಪೆತ್ತಾಯೇ**= ಯಾವ ಪ್ರಯೋಜನವನ್ನು ತಾನೇ ನೀನು ಪಡೆದೆ? **ಇರುನಿಲತ್ತಿಲ್**=ಈ ಮಹಾ ಪೃಥ್ವಿಯಲ್ಲಿ, **ಇನಿತಾಕ**=ಸಂತೋಷದಿಂದ, **ಇರುಕ್ಕಿನ್ರಾಯೇ**=ನೀನೊಬ್ಬಳೇ ಇರುವೆಯಾ? ||೮||

ಎಲೈ ! ಕೈಕೇಯಿಯೇ ! ವಿದ್ಯಾಧನರಾದ ಉಪಾಧ್ಯಾಯರ ಸನ್ನಿಧಾನದಲ್ಲಿ ಸಕಲವೇದ ಶಾಸ್ತ್ರಗಳನ್ನೂ ಅಧ್ಯಯನ ಮಾಡಿದ ನನ್ನ ಜ್ಯೇಷ್ಠಪುತ್ರನಾದ ರಾಮನನ್ನೂ, ಅವನ ತಮ್ಮನಾದ ಲಕ್ಷ್ಮಣನನ್ನೂ, ಹೂವಿನಂತೆ ಕೋಮಲವಾದ ದೇಹವುಳ್ಳ, ಲೋಕದಲ್ಲೇ ತೆಳ್ಳಗೂ ಪ್ರಕಾಶಮಯವೂ ಆಗಿರುವ ಮಿಂಚಿನ

ನ್ನು ಹೋಲಿಕೆಯಾಗಿ ಹೇಳಲು ಸಾಧ್ಯವಲ್ಲದಿರುವಷ್ಟು ತೆಳ್ಳಗೂ ಪ್ರಕಾಶ-ಆದ ಸೊಂಟವುಳ್ಳ ನನ್ನ ಸೊಸೆಯಾದ ಸೀತಾದೇವಿಯನ್ನೂ, ಕಾಡನ್ನು ವಂತೆ ಮಾಡಿ, ನಿನ್ನೊಬ್ಬನನ್ನುಳಿದು ಬೇರಾರನ್ನೂ ತಾಯಿಯೆಂದು ುವ ನಿನ್ನ ಮಗನಾದ ಭರತನ ಮೇಲೆ–'ಭ್ರಾತೃದ್ರೋಹಿ'–ಎಂಬ ನನ್ನು ಹೊರಿಸಿ, ನನ್ನನ್ನೂ ಹಿರಿಮೆಯಿಂದ ಕೂಡಿದ ಸ್ವರ್ಗವನ್ನು ಸೇರುವಂತೆ ನೀನು ಯಾವ ಪ್ರಯೋಜನವನ್ನು ತಾನೇ ಪಡೆದೆ? ಈ ವಿಶಾಲವಾದ ಲ್ಲಿ ಮಕ್ಕಳು, ಸೊಸೆ, ಗಂಡ–ಎಲ್ಲರನ್ನೂ ಕಳೆದುಕೊಂಡು ಒಬ್ಬೊಂಟಿಗಳಾಗಿ ಾಗಿರುವೆಯಾ? ಇದೇ ನಿನ್ನ ಬಾಳೇ? ಬಾಳು. ಚಿರಕಾಲ ಸಂತೋಷ-ಳು. ||೮||

ಮುನ್ನೊರುನಾಳ್ ಮಳುವಾಳಿ ಶಿಲೈವಾಂಗಿ
ಅವನ್ತವತ್ತೈ ಮುಟ್ರುಂ ಚೆತ್ತಾಯ್
ಉನ್ನೈಯುಂ ಉನ್ನುರುಮೈಯೈಯುಂ
ಉನ್‌ಮೋಯಿನ್ ವರುತ್ತಮುಂ ಒನ್ರಾಕಕೊಳ್ಳಾದು
ಎನ್ನೈಯುಂ ಎನ್‌ಮೆಯ್ಯುರೈಯುಂ
ಮೆಯ್ಯಾಗಕ್ಕೊಂಡು ವನಂ ಪುಕ್ಕ ವೆಂದಾಯ್
ನಿನ್ನೈಯೇ ಮಗನಾಗ ಪೆರಪ್ಪೆರುವೇನ್
ಏಳ್‌ಪಿರಪ್ಪುಂ ನೆಡುಂ ಶೋಳ್ ವೇನ್ದೇ ||೯||

ುನ್ನೊರುನಾಳ್ = ಹಿಂದೊಮ್ಮೆ, ಮಳುವಾಳಿ = ಪರಶುರಾಮನ, ನುಸ್ಸನ್ನು, ವಾಂಗಿ = ಪಡೆದುಕೊಂಡು ಹೆದೆಯೇರಿಸಿ, ಅವನ್ = ಅವನ, ುಟ್ರುಂ = ತಪಸ್ಸೆಲ್ಲವನ್ನೂ, ಶೆತ್ತಾಯ್ = ಆ ಧನುಸ್ಸಿನಲ್ಲಿ ಹೂಡಿದ ನಲೇ ನಾಶಮಾಡಿದವನೇ! ಉನ್ನೈಯುಂ = ನಿನ್ನ ಶ್ಲಾಘ್ಯತೆಯನ್ನೂ, ುಮೈಯೈಯುಂ = ನಿನ್ನನ್ನು ನಾನು ಪಡೆದ ಹಿರಿಮೆಯನ್ನೂ, ೋಯಿನ್ = ನಿನ್ನ ತಾಯಿಯಾದ ಕೌಸಲ್ಯೆಯು, ವರುತ್ತಮುಂ = ್ನು, ಒನ್ರಾಕ = ಒಂದು ವಿಷಯವಾಗಿಯೇ, ಕೊಳ್ಳಾದು = ಎಣಿಸದೆ, ುಂ = ನಿನ್ನಲ್ಲಿಯೇ ಅತಿಯಾದ ವಾತ್ಸಲ್ಯದಿಂದ ಕೂಡಿದ ನನ್ನ ಪ್ರೇಮ ್ನು ಸತ್ಯವೆಂದರಿಯದೇ, ಎನ್ = ನನ್ನ, ಮೆಯ್ಯುರೈಯುಂ = ಸತ್ಯ ್ನು, ಮೆಯ್ಯಾಕಕ್ಕೊಂಡು = ಸತ್ಯವಾಗಿಸಬೇಕೆಂದು ಸಂಕಲ್ಪಿಸಿ, ಾಡನ್ನು, ಪುಕ್ಕ = ಪ್ರವೇಶಿಸಿದ, ಎನ್ದಾಯ್ = ನನ್ನ ಸ್ವಾಮಿಯಾದ, ಮೊಳಕಾಲುಗಳವರೆವಿಗೂ ವ್ಯಾಪಿಸಿರುವಂತೆ ನೀಳವಾದ, ಶೋಳ್ = ುಳ್ಳ, ವೇನ್ದೇ = ಚಕ್ರವರ್ತಿಯಾಗಿರುವವನೇ! ಏಳ್‌ಪಿರಪ್ಪುಂ = ನನಗೆ

ಏಳೇಳು ಜನ್ಮಗಳು ಸಂಭವಿಸಿದರೂ, ನಿನ್ಕ್ಕೈಯೇ = ನಿನ್ನನ್ನೇ, ಮಗನಾಗ = ಮಗನಾಗಿ, **ಪೆರಪ್ಪೆರುವೇನ್** = ನಾನು ಹಡೆಯುವಂತಾಗಬೇಕು. ||೯||

ಹಿಂದೊಮ್ಮೆ ಪರಶುರಾಮನ ಧನುಸ್ಸನ್ನು ಪಡೆದುಕೊಂಡು ಹೆದೆಯೇರಿಸಿ, ಅವನ ತಪಸ್ಸೆಲ್ಲವನ್ನೂ, ಆ ಧನುಸ್ಸಿನಲ್ಲಿ ಹೂಡಿದ ಬಾಣದಿಂದಲೇ ನಾಶಮಾಡಿದವನೇ! ಆಶ್ರಿತ ವತ್ಸಲನೆಂದು ಕರೆಯಲಾಗುವ ನಿನ್ನ ಶ್ಲಾಘ್ಯತೆಯನ್ನೂ, ನಿನ್ನನ್ನು ನಾನು ಪಡೆದ ಹಿರಿಮೆಯನ್ನೂ, ಮಾತೃವಾತ್ಸಲ್ಯದಿಂದ ಪೂರಿತಳಾದ ನಿನ್ನ ತಾಯಿಗೆ ನಿನ್ನ ಅಗಲಿಕೆಯಿಂದ ಉಂಟಾಗುವ ದುಃಖವನ್ನೂ, ಒಂದು ವಿಷಯವಾಗಿಯೇ ಪರಿಗಣಿಸದೆ, ನಿನ್ನಲ್ಲಿಯೇ ಅತಿಯಾದ ವಾತ್ಸಲ್ಯದಿಂದ ಕೂಡಿದ ನನ್ನ ಪ್ರೇಮ ಭಾವವನ್ನೂ ಸತ್ಯವೆಂದರಿಯದೆ, ಆಜನ್ಮ ಸತ್ಯವಂತನಾದ ನನ್ನ ಮಾತನ್ನು ಸತ್ಯವಾಗಿಸಬೇಕೆಂದು ಸಂಕಲ್ಪಿಸಿ ಕಾನನವನ್ನು ಪ್ರವೇಶಿಸಿದ ನನ್ನ ಸ್ವಾಮಿಯಾದ ಆಜಾನುಬಾಹುವಾಗಿ ಚಕ್ರವರ್ತಿಯಾಗಿರುವವನೇ! ನನಗೆ ಏಳೇಳು ಜನ್ಮಗಳು ಸಂಭವಿಸಿದರೂ ನಿನ್ನನ್ನೇ ನಾನು ಮಗನಾಗಿ ಪಡೆಯುವಂತಹ ಭಾಗ್ಯವನ್ನು ನಾನು ಹೊಂದಬೇಕು—ಆ ರೀತಿಯಾಗಿ ನೀನು ನನಗೆ ಅನುಗ್ರಹಿಸು—ಎಂದು ಆಳ್ವಾರ್ರವರು ಈ ಹಾಡಿನಲ್ಲಿ, ಭಗವಂತನಲ್ಲಿ—

'ಎತ್ತೈಕ್ಕುಂ ಏಳೇಳು ಪಿರವಿಕ್ಕುಂ ಉನ್‌ತನ್ನೋಡುತ್ತೋಮೇಯಾವೋಂ
ಉನಕ್ಕೇನಾಮ್ ಆಳ್‌ಚೆಯ್‌ವೋಂ, ಮತ್ತೈನಂ ಕಾಮಂಗಳ್ ಮಾತ್ತು'

—ಎಂದು ಗೋದಾದೇವಿಯು ಮೊರೆಯಿಟ್ಟಂತೆಯೇ ಪ್ರಾರ್ಥನೆ ಮಾಡಿಕೊಂಡಿದ್ದಾರೆ. ||೯||

**ತೇನಗುಮಾಮಲರ್ ಕೂಂದಲ್ ಕೌಸಲೆಯುಂ**
**ಸುಮಿತ್ತಿರೈಯುಂ ಶಿನ್‌ದೈನೋವ,**
**ಕ್ಕೂನುರುವಿನ್ ಕೊಡುಂ ತೊಳುತ್ತೈ**
**ಶೊಲ್‌ಕೇಟ್ಟ ಕೊಡಿಯವಳ್‌ತ‍ ಶೊಲ್‌ಕೊಂಡು,**
**ಇನ್ರುಕಾನಗಮೇ ಮಿಗವಿರುಂಬಿ ನೀ**
**ತುರನ್ದ ವಳನಗರ್ರೈತ್ತುರನ್ದು, ನಾನುಂ—**
**ವಾನಗಮೇ ಮಿಗವಿರುಂಬಿ ಪ್ಪೋಗಿನ್ರೇನ್**
**ಮನುಕುಲತ್ತಾರ್ ತಂಗಳ್‌ಕೋವೇ!** ||೧೦||

**ಮನುಕುಲತ್ತಾರ್‌ತಂಗಳ್** = ಮನುಕುಲದ ಅರಸರಿಗೆ, **ಕೋವೇ** = ನಿರ್ವಾಹಕನಾದವನೇ!, **ತೇನಕು** = ಮಧುವನ್ನು ಸ್ರವಿಸುತ್ತಿರುವ, **ಮಾ** = ಶ್ಲಾಘ್ಯವಾದ, **ಮಲರ್** = ಪುಷ್ಪಗಳಿಂದ ಕೂಡಿದ, **ಕೂನ್ದಲ್** = ಕುಂತಲಗಳುಳ್ಳ **ಕೌಸಲೆಯುಂ** = ಕೌಸಲ್ಯೆಯೂ, **ಸುಮಿತ್ತಿರೈಯುಂ** = ಸುಮಿತ್ರೆಯೂ,

**ಶಿನ್ದೈನೋವ** = ದುಃಖಪಡುವಂತೆ ಮಾಡಿದ, **ಕೂನ್**=ಬಗ್ಗಿದ (ಗೂನು ಬೆನ್ನಿನಿಂದ ಕೂಡಿದ) **ಉರುವಿನ್**=ದೇಹವುಳ್ಳ, **ಕೊಡು**=ಕ್ರೂರಸ್ವಭಾವ-ವುಳ್ಳ, **ತೊಳುತ್ತೈ**=ಸೇವಕಿಯಾದ ಮಂಥರೆಯ, **ಶೊಲ್‌ಕೇಟ್ಟ**=ಮಾತನ್ನು ಕೇಳಿದ, **ಕೊಡಿಯವಳ್‌ತ** = ಕ್ರೂರಹೃದಯವುಳ್ಳ ಕೈಕೇಯಿಯ, **ಶೊಲ್-ಕೊಂಡು** = ಮಾತನ್ನು ಶಿರಸಾವಹಿಸಿ, **ಇನ್ರು** = ಈಗ, **ಕಾನಕಮೇ**= ವನವಾಸವನ್ನೇ, **ಮಿಕವಿರುಂಬಿ**=ಅತಿಯಾಗಿ ಆಸೆಪಟ್ಟು, **ನೀ ತುರಂದ**=ನೀನು ಉಪೇಕ್ಷಿಸಿದ, **ವಳಂ**=ಅಲಂಕೃತವಾದ, **ನಗರ್‍ಕೈ**=ನಗರವನ್ನು, **ನಾನುಂ**= ನಾನೂ, **ತುರಂದು**=ಬಿಟ್ಟು, **ವಾನಕಮೇ**=ಸ್ವರ್ಗವನ್ನೇ, **ಮಿಕವಿರುಂಬಿ**= ಅತಿಯಾಗಿ ಆಸೆಪಟ್ಟು, **ಪೋಕಿನ್ರೇನ್**=ಸ್ವರ್ಗಕ್ಕೇ ಹೋಗುತ್ತಿದ್ದೇನೆ. ||೧೦||

ಮನುಕುಲದರಸರಿಗೆ ಸ್ವಾಮಿಯಾದ ಶ್ರೀರಾಮಚಂದ್ರನೆ! ಮಧುವನ್ನು ಸ್ರವಿಸುತ್ತಿರುವ ಶ್ಲಾಘ್ಯವಾದ ಪುಷ್ಪಗಳಿಂದ ಕೂಡಿದ ಕುಂತಲಗಳುಳ್ಳ ಕೌಸಲ್ಯೆಯೂ ಸುಮಿತ್ರೆಯೂ ದುಃಖಪಡುವಂತೆ ಮಾಡಿದ, ಗೂನು ಬೆನ್ನಿನಿಂದ ಕೂಡಿದ ದೇಹ-ವುಳ್ಳ, ದೇಹದಂತೆಯೇ ವಕ್ರವಾಗಿ ಕ್ರೂರಸ್ವಭಾವವುಳ್ಳ ಸೇವಕಿಯಾದ ಮಂಥರೆಯ ಮಾತನ್ನು ಕೇಳಿದ, ಕ್ರೂರಹೃದಯವುಳ್ಳ ಕೈಕೇಯ ಮಾತನ್ನು ಶಿರಸಾವಹಿಸಿ, ಈಗ ವನವಾಸವನ್ನೇ ನೀನು ಅತಿಯಾಗಿ ಆಸೆಪಟ್ಟು, ಉಪೇಕ್ಷಿಸಿದ ಅಲಂಕೃತವಾದ ಅಯೋಧ್ಯಾ ನಗರಿಯನ್ನು ನಾನೂ ತೊರೆದು, ಸ್ವರ್ಗವನ್ನೇ ಬಹಳವಾಗಿ ಇಷ್ಟಪಟ್ಟು, ಸ್ವರ್ಗಕ್ಕೆ ಹೋಗುತ್ತಿದ್ದೇನೆ. ||೧೦||

**ಏರಾರ್‌ನ್ದ ಕರುನೆಡುಮಾಲಿರಾಮನಾಯ್**
**ವನಂ ಪುಕ್ಕ ವದನುಕ್ಕಾತ್ತಾ,**
**ತಾರಾರ್‌ನ್ದ ತಡವರೈತೋ್ಳ್ ತಯರದನ್ತಾನ್**
**ಪುಲಂಬಿಯ ಅಪ್ಪುಲಂಬಲ್ ತನ್ನೈ,**
**ಕೂರಾರ್‌ನ್ದ ವೇಲ್‌ವಲವನ್ ಕೋೞಿಯರ್‌ಕೋನ್**
**ಕುಡೈಕ್ಕುಲಶೇಖರನ್ ಶೊಲ್‌ಶೆಯ್ದ**
**ಶೀರಾರ್‌ನ್ದ ತಮಿಳ್‌ಮಾಲೈಯಿವೈ**
**ವಲ್ಲಾರ್ ತೀನೆರಿಕ್ಕಣ್‌ಚ್ಚೆಲ್ಲಾರ್‌ತಾಮೇ** ||೧೧||

**ತಾರಾರ್‌ನ್ದ** = ರಾಜ್ಯಲಕ್ಷ್ಮಿಸೂಚಕವಾದ ಮಾಲೆಗಳನ್ನು ಧರಿಸಿರುವ, **ತಡಂ** = ವಿಶಾಲವಾದ, **ವರೈ** = ಬೆಟ್ಟದಂತಿರುವ, **ತೋಳ್** = ಭುಜಗಳನ್ನು ಹೊಂದಿರುವ, **ತಯರದನ್‌ತಾನ್** = ದಶರಥ ಚಕ್ರವರ್ತಿಯು, **ಏರಾರ್‌ನ್ದ** = ಎಲ್ಲ ವಿಧವಾದ ಕಲ್ಯಾಣ ಗುಣಗಳಿಂದಲೂ ಪೂರ್ಣನಾದ, **ಕರು**=ನೀಲಮಣಿ-ಯಂತಿರುವ, **ನೆಡುಮಾಲ್** = ಆಶ್ರಿತ ವಾತ್ಸಲ್ಯವುಳ್ಳ ಸರ್ವೇಶ್ವರನು, **ಇರಾಮನಾಯ್** = ರಾಮಚಂದ್ರನಾಗಿ ಅವತರಿಸಿ, **ವನಂ** = ಅರಣ್ಯವನ್ನು,

**ಪುಕ್ಕವದನುಕ್ಕು**=ಪ್ರವೇಶಿಸಿದುದರಿಂದ, **ಆತ್ತಾ**=ಸಹಿಸಲಾರದೆ, **ಪುಲಂಬಿಯ**=ಪ್ರಲಪಿಸಿದ, **ಅಪ್ಪುಲಂಬಲ್‌ತನ್ನೈ**=ಆ ಪ್ರಕಾರವನ್ನು ಹೊಂದಿರುವ ಹಾಡುಗಳನ್ನು, **ಕೂರಾರ್‌ನ್ದ** = ಅತ್ಯಧಿಕವಾಗಿ ತೀಕ್ಷ್ಣವಾದ, **ವೇಲ್ವಲವನ್**= ವೇಲಾಯುಧವನ್ನು ಪ್ರಯೋಗಿಸುವುದರಲ್ಲಿ ಸಮರ್ಥರಾದ, **ಕೋಳಿಯರ್‌-ಕೋನ್** = ಉರ್ಯೈಯೂರಿಗೆ ಸ್ವಾಮಿಯಾದ, **ಕುಡೈ** = ಶ್ವೇತಚ್ಛತ್ರಿಯನ್ನು ಧರಿಸಿರುವ, **ಕುಲಶೇಖರನ್**=ಶ್ರೀಕುಲಶೇಖರಾಳ್ವಾರ್ರವರು, **ಶೊಲ್‌ಶೆಯ್ದ**= ರಚಿಸಿಕೊಟ್ಟಿರುವ, **ಶೀರಾರ್‌ನ್ದ** = ಹಿರಿಮೆಯುಳ್ಳ, **ತಮಿಳ್** = ತಮಿಳಿನ, **ಮಾಲ್**=ಪದ್ಯಮಾಲಿಕೆಯ, **ಇವೈ**=ಈ ಹತ್ತು ಹಾಡುಗಳನ್ನೂ, **ವಲ್ಲವರ್‌-ತಾಂ** = ಅಭ್ಯಾಸ ಮಾಡುವವರು, **ತೀನೆರಿಕ್ಕಣ್** = ವಿಷಯಾಂತರಗಳಲ್ಲಿ, **ಶೆಲ್ಲಾರ್**=ಹೋಗುವುದಿಲ್ಲ. ||೧೧||

ರಾಜ್ಯಲಕ್ಷ್ಮಿ ಸೂಚಕವಾದ ಮಾಲೆಗಳನ್ನು ಧರಿಸಿರುವ, ವಿಶಾಲವಾದ ಬೆಟ್ಟದಂತಿರುವ ಭುಜಗಳನ್ನು ಹೊಂದಿರುವ, ದಶರಥ ಚಕ್ರವರ್ತಿಯು,—ಎಲ್ಲ ವಿಧವಾದ ಕಲ್ಯಾಣಗುಣಪೂರ್ಣನಾದ ನೀಲಮಣಿಯಂತಿರುವ ಆಶ್ರಿತವಾತ್ಸಲ್ಯನಾದ ಸರ್ವೇಶ್ವರನು, ತನ್ನ ಮಗನಾದ ಶ್ರೀರಾಮಚಂದ್ರನಾಗಿ ಅವತರಿಸಿ, ತನ್ನನ್ನು ಬಿಟ್ಟು ಕಾಡಿಗೆ ಹೋದುದನ್ನು ಸಹಿಸಲಾರದೆ ಗೋಳಿಟ್ಟ ಬಗೆಯನ್ನು, ಅಂತೆಯೇ-ಅತಿತೀಕ್ಷ್ಣವಾದ ವೇಲಾಯುಧವನ್ನು ಪ್ರಯೋಗಿಸುವುದರಲ್ಲಿ ಸಮರ್ಥರಾದ, ಉರ್ಯೈಯೂರಿಗೆ ಸ್ವಾಮಿಯಾದ, ಶ್ವೇತಚ್ಛತ್ರಿಯನ್ನು ಧರಿಸಿರುವ ಶ್ರೀಕುಲಶೇಖರಾಳ್ವಾರ್ರವರು, ದಶರಥನ ಭಾವನೆಯಿಂದಲೇ ರಚಿಸಿಕೊಟ್ಟಿರುವ, ಹಿರಿಮೆಯುಳ್ಳ ತಮಿಳಿನ ಪದ್ಯ ಮಾಲಿಕೆಯ ಈ ಹತ್ತುಹಾಡುಗಳನ್ನು ಅನುಸಂಧಾನ ಮಾಡುವವರು, ವಿಷಯಾನ್ತರಗಳಲ್ಲಿ ಆಸಕ್ತಿವುಳ್ಳವರಾಗದೇ, ಕೇವಲ ಭಗವದ್ವಿಷಯಗಳಲ್ಲಿ ಪ್ರಾವಣ್ಯರಾಗುತ್ತಾರೆ —ಎಂದು ಈ ದಶಕಕ್ಕೆ ಫಲಶ್ರುತಿಯನ್ನು ಹೇಳಿ ಆಳ್ವಾರರು—ಈ ದಶಕವನ್ನು ಮುಗಿಸಿದ್ದಾರೆ. ||೧೧||

## ಪೆರುಮಾಳ್ ತಿರುಮೊಳಿ — ಹತ್ತನೆಯ ದಶಕ

**ಅವತಾರಿಕಾ:** ಶ್ರೀಕುಲ ಶೇಖರಾಳ್ವಾರವರು ಶ್ರೀರಾಮಚಂದ್ರನು ಅವತರಿಸಿದ ಪುನರ್ವಸು ನಕ್ಷತ್ರದಲ್ಲಿಯೇ ಅವತರಿಸಿದವರು. ಇವರಿಗೆ ಶ್ರೀರಾಮನಲ್ಲಿ ಪರಮ ಭಕ್ತಿ. ಶ್ರೀಮದ್ರಾಮಾಯಣ ಪಾರಾಯಣದಲ್ಲಿ ಅತಿಯಾದ ಶ್ರದ್ಧೆ. ಹೀಗೆ ಅತ್ಯಧಿಕವಾದ ಶ್ರದ್ಧಾ ಭಕ್ತಿಗಳಿಂದ ಇವರು ಪ್ರತಿನಿತ್ಯವೂ ಶ್ರೀಮದ್ರಾಯಣ ಪಾರಾಯಣ ಮಾಡಿ, ವಾಲ್ಮೀಕಿಗಳಿಂದ ರಚಿತವಾದ ಇಪ್ಪತ್ತನಾಲ್ಕುಸಾವಿರ ಶ್ಲೋಕಗಳಿಂದ ಕೂಡಿದ ಶ್ರೀಮದ್ರಾಮಾಯಣವನ್ನು ಎಲ್ಲರೂ ಪ್ರತಿನಿತ್ಯವೂ ಅನುಸಂಧಾನ ಮಾಡಲು

ಸಾಧ್ಯವಿಲ್ಲದಿರುವುದರಿಂದ, ಸಂಕ್ಷೇಪವಾಗಿಯಾದರೂ ರಾಮಾವತಾರ ಕಾಲದ ಮುಖ್ಯವಾದ, ಅವನ ದಿವ್ಯಚೇಷ್ಟಿತಗಳನ್ನು ನಿತ್ಯವೂ, ಪ್ರತಿಯೊಬ್ಬರೂ ಅನುಸಂಧಾನಮಾಡಿ, ಐಹಿಕಾಮುಷ್ಮಿಕವಾದ ಸರ್ವಸಂಪತ್ತನ್ನೂ ಪಡೆಯು-ವಂತಾಗಲೀ–ಎಂದು, ಶ್ರೀಮದ್ರಾಮಾಯಣದ ಏಳುಕಾಂಡದ ಕಥೆಯನ್ನೂ ಕೇವಲ ಹನ್ನೊಂದು ಹಾಡುಗಳಲ್ಲಿ ಈ ದಶಕದಲ್ಲಿ ಹಾಡಿದ್ದಾರೆ.

ತ್ರೇತಾಯುಗದಲ್ಲಿ ಶ್ರೀರಾಮನಾಗಿ ಅವತರಿಸಿದ ಪರಮಾತ್ಮನು ವಿಶೇಷವಾಗಿ, ನಮ್ಮ ಭಾರತದ ಉತ್ತರ ಭಾಗದಲ್ಲಿರುವ 'ಚಿತ್ರಕೂಟ' ಪರ್ವತದಲ್ಲಿ ಬಹಳವಾಗಿ ರಮಿಸಿದನು. ಈ ವಿಷಯವು—"ಸುಭಗಶ್ಚಿತ್ರಕೂಟೋಽಸೌ ಗಿರಿರಾಜೋಪಮೋ-ಗಿರಿಃ | ಯಸ್ಮಿನ್ ವಸತಿ ಕಾಕುತ್ಸ್ಥಃ ಕುಬೇರ ಇವ ನಂದನೇ"—ಇತ್ಯಾದಿ ಸ್ಥಳಗಳಲ್ಲಿ ವಾಲ್ಮೀಕಿಗಳು ವರ್ಣಿಸಿದ್ದಾರೆ. ಕಲಿಯುಗದಲ್ಲಿ ಅದೇ ಪರಮಾತ್ಮನು ಅರ್ಚಾವತಾರಮಾಡಿ, ಅರ್ಚಾಮೂರ್ತಿ ಸ್ವರೂಪಗಳಲ್ಲಿ ಅನೇಕ ಕ್ಷೇತ್ರಗಳಲ್ಲಿ ಬಿಜಯ ಮಾಡಿಸಿದ್ದಾನೆ. ಅದರಲ್ಲಿ ದಕ್ಷಿಣ ಭಾರತದ ಚಿದಂಬರ ಕ್ಷೇತ್ರವನ್ನು—'ತಿಲ್ಲೈ-ಚಿತ್ರಕೂಟಂ'–ಎಂದು ಕರೆಯುತ್ತಾರೆ. ಅಲ್ಲಿ ಬಿಜಯ ಮಾಡಿಸಿರುವ ಗೋವಿಂದ-ರಾಜನನ್ನೇ ಕುರಿತು, ಅವನೇ ಹಿಂದೆ ರಾಮಾವತಾರ ಮಾಡಿದವನೆಂಬ ಭಾವದಿಂದ ಈ ಹತ್ತು ಹಾಡುಗಳನ್ನೂ ಹಾಡಿದ್ದಾರೆ.

**ಅಂಗಣೆಡು ಮದಿಳ್ ಪುಡೈಶೂಳ್ ಅಯೋತ್ತಿ ಎನ್ನುಂ**
**ಅಣಿನಗರತ್ತುಲಗನೈತ್ತುಂ ವಿಳಕ್ಕುಂ ಶೋದಿ,**
**ವೆಂಕದಿರೋನ್ ಕುಲತ್ತುಕ್ಕೋರ್ ವಿಳಕ್ಕಾಯ್ ತೋನ್ರಿ**
**ವಿಣ್ಮುಳುದು ಮುಯ್ಯಕ್ಕೊಂಡ ವೀರನ್ತನ್ನೈ**
**ಶೆಂಗಣೆ ಡುಂಕರುಮುಕಿಲೈಯಿರಾಮನ್ತನ್ನೈ**
**ತಿಲ್ಲೈನಗರ್ ತಿರುಚಿತ್ತಿರಕೂಟತ್ತನ್ನುಳ್**
**ಎಂಗಳ್ ತನಿಮುದಲ್ವನೈ ಎಂಬೆರುಮಾನ್ತನ್ನೈ**
**ಎನ್ರುಕೊಲೋ ಕಣ್ಕುಳಿರ ಕಾಣುಂ ನಾಳೇ ||೧||**

**ಅಂಗಣ್**=ಸುಂದರವಾದ ದೇಶವಿಶೇಷಗಳಿಂದ ಕೂಡಿ, **ನೆಡು**=ಎತ್ತರವಾದ **ಮತಿಳ್**=ಕೋಟೆಗಳಿಂದ, **ಪುಡೈ**=ನಾಲ್ಕೂ ದಿಕ್ಕುಗಳಲ್ಲಿಯೂ, **ಶೂಳ್**=ಸುತ್ತುವರಿಯಲ್ಪಟ್ಟ, **ಅಯೋತ್ತಿಯೆನ್ನುಂ**=ಅಯೋಧ್ಯೆಯೆಂದು ಪ್ರಸಿದ್ಧವಾದ, **ಅಣಿ**=ರಮಣೀಯವಾದ, **ನಗರತ್ತು**=ನಗರದಲ್ಲಿ, **ಉಲಕನೈತ್ತುಂ**=ಸಕಲ ಲೋಕಗಳನ್ನೂ ತನ್ನ ತೇಜಸ್ಸಿನಿಂದಲೇ, **ವಿಳಕ್ಕುಂ**=ಪ್ರಕಾಶಿಸುವಂತೆ ಮಾಡುವ, **ಶೋತಿ**=ಪರಂಜ್ಯೋತಿಸ್ಸ್ವರೂಪನಾಗಿ, **ವೆಂಕದಿರೋನ್ ಕುಲತ್ತುಕ್ಕು**=ಸೂರ್ಯ ವಂಶಕ್ಕೆ, **ಓರ್**=ಅದ್ವಿತೀಯವಾದ, **ವಿಳಕ್ಕಾಯ್**=ದೀಪವಾಗಿ, **ತೋನ್ರಿ**=ಅವತರಿಸಿ ತೋರಿಕೊಂಡು, **ವಿಣ್ಮುಳುದುಂ**=ದೇವತೆಗಳೆಲ್ಲರನ್ನೂ, **ಉಯ್ಯ-**

**ಕೊಣ್ಡ**=ಉಜ್ಜೀವಿಸಿದ, **ವೀರನ್ತನ್ನೈ**=ವೀರ್ಯ (ಪರಾಕ್ರಮ) ಗುಣವನ್ನು ಹೊಂದಿ, **ನೆಡು**=ಸರ್ವಾಧಿಕತ್ವ ಸೂಚಕವಾದ, **ಶೆಂಗಣ್**=ಕೆಂಪಡರ್ದ ಕಣ್ಣು-ಗಳುಳ್ಳ, **ಕರುಮುಕಿಲ್ಲೈ**=ಕಾಳಮೇಘದಂತಿರುವ ದೇಹವುಳ್ಳ, **ಇರಾಮನ್‌ತನ್ನೈ**=ತನ್ನ ದೇಹಕಾಂತಿಯಿಂದ ಎಲ್ಲರನ್ನೂ ಸಂತೋಷಗೊಳಿಸುವ, **ತಿಲ್ಲೈನಗರ್**=ತಿಲ್ಲೈನಗರವೆಂದು ಹೇಳಲ್ಪಡುವ, **ತಿರುಚಿತ್ತಿರಕೂಟನ್ತನ್ನುಳ್**=ತಿರುಚಿತ್ತಿರ-ಕೂಟವೆಂದು ಕರೆಯಲ್ಪಡುವ ದಿವ್ಯದೇಶದಲ್ಲಿ, **ಎಂಗಳ್**=ನಮ್ಮನ್ನು (ಉಜ್ಜೀವಿಸುವ ಸಲುವಾಗಿಯೇ ಬಿಜಯ ಮಾಡಿಸಿರುವ) **ತನಿಮುದಲ್ವನೈ**=ಅದ್ವಿತೀಯವಾದ ಕಾರಣಭೂತನಾದ, **ಎಂಬೆರುಮಾನ್‌ತನ್ನೈ** = ನಮಗೆ ಸ್ವಾಮಿಯಾದ ಪರಮಾತ್ಮನನ್ನು, **ಕಣ್‌ಕುಳಿರ** = ಕಣ್ಣುಗಳು ತೃಪ್ತಿಹೊಂದುವಂತೆ, **ಕಾಣುಂ-ನಾಳ್** = ದರ್ಶನ ಮಾಡುವ ದಿನವು, **ಎನ್ರುಕೊಲೋ** = ಎಂದು ಪ್ರಾಪ್ತ-ವಾಗುವುದೋ ? ||೧||

ಸುಂದರವಾದ ದೇಶವಿಶೇಷಗಳಿಂದ ಕೂಡಿ, ನಾಲ್ಕೂಕಡೆಯೂ ಎತ್ತರವಾದ ಕೋಟೆಗಳಿಂದ ಸುತ್ತುವರಿಯಲ್ಪಟ್ಟು, 'ಅಯೋಧ್ಯೆ'–ಎಂದು ಪ್ರಸಿದ್ಧವಾದ ರಮಣೀ-ಯವಾದ ನಗರದಲ್ಲಿ, ಸಕಲಲೋಕಗಳನ್ನೂ ತನ್ನ ತೇಜಸ್ಸಿನಿಂದಲೇ ಪ್ರಕಾಶಿಸು-ವಂತಿರುವ ಪರಂಜ್ಯೋತಿ ಸ್ವರೂಪನಾಗಿ, ಸೂರ್ಯವಂಶಕ್ಕೆ ಅದ್ವಿತೀಯವಾದ ದೀಪದಂತೆ ಶ್ರೀರಾಮಚಂದ್ರನಾಗಿ ಅವತರಿಸಿ, ದೇವತೆಗಳೆಲ್ಲರನ್ನೂ ಉಜ್ಜೀವಿಸುವ 'ವೀರ್ಯ'—ಎಂಬ ಗುಣವನ್ನು ಹೊಂದಿ, ಸರ್ವಾಧಿಕತ್ವ ಸೂಚಕವಾದ, ಕೆಂಪಡೆರ್ದ ಕಣ್ಗಳುಳ್ಳ, ಕಾಳಮೇಘದಂತಿರುವ ದೇಹವುಳ್ಳ, ತನ್ನ ದೇಹಕಾಂತಿಯಿಂದ ಎಲ್ಲರನ್ನೂ ಸಂತೋಷಪಡಿಸುವುದರಿಂದ (ರಮಯತಿ ಇತಿ ರಾಮಃ) ಶ್ರೀರಾಮ-ಚಂದ್ರನೆಂದು ಪ್ರಸಿದ್ಧನಾದ, ತಿಲ್ಲೈನಗರವೆಂದೂ ತಿರುಚಿತ್ತಿರಕೂಟವೆಂದೂ ಕರೆಯಲ್ಪಡುವ ದಿವ್ಯದೇಶದಲ್ಲಿ ನಮ್ಮೆಲ್ಲರನ್ನೂ ಉಜ್ಜೀವಿಸುವ ಸಲುವಾಗಿಯೇ, ಅರ್ಚಾಮೂರ್ತಿ ಸ್ವರೂಪದಲ್ಲಿ ಬಿಜಯಮಾಡಿಸಿರುವ, "ಏಕೋ ಹವೈ ನಾರಾಯಣ ಆಸೀತ್, ನ ಬ್ರಹ್ಮಾನೇಶಾನಃ"–ಎಂದು ಶ್ರುತಿಗಳಲ್ಲಿ ಹೇಳಿರುವಂತೆ, ಈ ಜಗತ್ಸೃಷ್ಟಿಗೆ ಅದ್ವಿತೀಯವಾದ ಕಾರಣಭೂತನಾದ ಸ್ವಾಮಿಯಾದ ಪರಮಾತ್ಮನನ್ನು ಕಣ್ತುಂಬ ಕಾಣುವ ದಿನವು ಎಂದು ಪ್ರಾಪ್ತವಾಗುವುದೋ ? ||೧||

**ವನ್ದಿರ್‌ನ್ದ ತಾಟಕೈತನ್ ಉರತ್ತೈ ಕೀರಿ**
**ವರುಕುರುದಿಪೊಳಿತರ ವನ್‌ಕಣೈಯೊನ್ರೇವಿ,**
**ಮನ್ದಿರಂಗೊಳ್ ಮರೈಮುನಿವನ್ ವೇಳ್ವಿಕಾತ್ತು**
**ವಲ್ಲರಕ್ಕರ್ ಉಯಿರುಂಡ ಮೈನ್ದನ್ ಕಾಣ್ಮಿನ್,**
**ಶೆನ್ದಳಿರ್ ವಾಯ್‌ಮಲರ್‌ನಗೈಶೇರ್ ಶೆಳುನ್ತಣ್‌ಶೋಲೈ**
**ತಿಲ್ಲೈನಗರ್ ತಿರುಚಿತ್ತಿರಕೂಟನ್ತನ್ನುಳ್,**

ಅನ್ದಣರ್‌ಗಳ್ ಒರುಮೂವಾಯಿರವರೇತ್ತ
ಪಣಿಮಣಿಯಾಶನತ್ತಿರುನ್ದ ಅಮ್ಮಾನ್ತಾನೇ ||೨||

**ಶೆನ್‌ತಳಿರ್‌ವಾಯ್** = ಕೆಂಪಡರ್ದ ಚಿಗುರುಗಳ ನಡುವೆ, **ನಕ್ಕ** = ವಿಕಸಿತ-ವಾಗಿರುವ, **ಮಲರ್‌ಶೇರ್** = ಪುಷ್ಪಗಳನ್ನು ಹೊಂದಿರುವ, **ಶೆಳು** = ದರ್ಶನೀಯ-ವಾದ, **ತಣ್** = ಶ್ರಮಹರವಾಗಿ ತಣ್ಣಗಿರುವ, **ಶೋಲೈ** = ತೋಪುಗಳಿಂದ ಅಲಂಕೃತವಾದ, **ತಿಲ್ಲೈನಕರ್ ಚಿತ್ತಿರಕೂಟಂ ತನ್ನುಳ್** = ತಿಲ್ಲೈ ಚಿತ್ತಿರ ಕೂಟವೆಂಬ ದಿವ್ಯಕ್ಷೇತ್ರದಲ್ಲಿ, **ಒರುಮೂವಾಯಿರವರ್** = ಮೂರುಸಾವಿರ, **ಅಂದಣರ್‌ಗಳ್** = ಶ್ರೀವೈಷ್ಣವರುಗಳು (ಕೂಡಿ) **ಏತ್ತ** = ಮಂಗಳಾಶಾಸನ ಮಾಡುವ, **ಅಣಿ** = ಶ್ಲಾಘ್ಯವಾದ, **ಮಣಿ** = ಹುದುಗಿಸಲ್ಪಟ್ಟ ರತ್ನಗಳಿಂದ ಕೂಡಿದ, **ಆಶನತ್ತು** = ಸಿಂಹಾಸನದಲ್ಲಿ, **ಇರುನ್ದ** = ತನ್ನ ಮೇಲ್ಮೆಯನ್ನು ತೋರಿಸಲು ಬಿಜಯಮಾಡಿಸಿರುವ, **ಅಮ್ಮಾನ್** = ಸರ್ವೇಶ್ವರನು, **ವನ್ದು** = ತಾನಾಗಿ ಬಂದು, ಎದಿರ್‌ನ್ದ (ತನ್ನನ್ನು) ಎದುರಿಸಿದ, **ತಾಟಕೈತನ್** = ತಾಟಕಿಯು, **ಉರತ್ತೈ** = ಎದೆಯನ್ನು, **ಕೀರಿ** = ಸೀಳಿಹಾಕಿ, (ಅದರಿಂದ) **ವರು** = ಹೊರಹೊಮ್ಮಿ ಹರಿದ, **ಕುರುತಿ** = ರಕ್ತಪ್ರವಾಹವು, **ಪ್ರೊಳಿತರ** = ಹೆಪ್ಪುಗಟ್ಟಿ ಘನೀಭೂತವಾಗಿ ಬೆಟ್ಟದಂತೆ ತಂಗಿ ನಿಲ್ಲುವಂತೆ, **ವನ್** = ಅಸದೃಶವಾದ, **ಒನ್ರು** = ಅದ್ವಿತೀಯವಾದ, **ಕಣ್ಣೈ** = ಬಾಣವನ್ನು, **ಏವಿ** = ಪ್ರಯೋಗಿಸಿ, **ಮನ್ದಿರಂಗೊಳ್** = ಸಕಲಮಂತ್ರಗಳ ಸಿದ್ಧಿಯನ್ನೂ ಹೊಂದಿರುವ, **ಮರೈ** = ಎಲ್ಲ ವೇದಗಳನ್ನೂ ಅಧ್ಯಯನ ಮಾಡಿದ, **ಮುನಿವನ್** = ಮನನಶೀಲರಾದ ವಿಶ್ವಾಮಿತ್ರ ಮಹರ್ಷಿಗಳ, **ವೇಳ್ವಿ** = ಯಾಗ-ವನ್ನು, **ಕಾತ್ತು** = ರಕ್ಷಿಸಿ, **ವಲ್** = ಬಹಳ ಬಲಿಷ್ಠರಾದ, **ಅರಕ್ಕರ್** = ಸುಬಾಹು ಮೊದಲಾದ ರಾಕ್ಷಸರ, **ಉಯಿರುಂಡ** = ಪ್ರಾಣವನ್ನು ಹೋಗಲಾಡಿಸಿದ, **ಮೈನ್ದನ್ ಕಾಣ್ಮಿನ್** = ಬಾಲಲೀಲೆಯನ್ನು ಹೊಂದಿದವನೆಂದು ತಿಳಿಯಿರಿ. ||೨||

ವಿಶ್ವಾಮಿತ್ರ ಮಹರ್ಷಿಗಳು ಯಜ್ಞಕ್ಕೆ ವಿಘ್ನವನ್ನೊಡ್ಡಬೇಕೆಂದು ಬಂದ ತಾಟಕಿಯ ಎದೆಯನ್ನು, ಅಸದೃಶವಾದ ಅದ್ವಿತೀಯವಾದ ಬಾಣವೊಂದರಿಂದ ಸೀಳಿಹಾಕಿ, ಆವಳ ಎದೆಯಿಂದ ಹೊರಗೆ ಹರಿದ ರಕ್ತಪ್ರವಾಹವು ಹೆಪ್ಪುಗಟ್ಟಿ ಬೆಟ್ಟದಂತೆ ನಿಲ್ಲುವಂತೆ ಮಾಡಿ, ಸಕಲಮಂತ್ರಸಿದ್ಧಿಯನ್ನು ಪಡೆದ, ಸಕಲವೇದ-ಗಳನ್ನೂ ಅಧ್ಯಯನ ಮಾಡಿದ, ಮನನಶೀಲರಾದ ವಿಶ್ವಾಮಿತ್ರ ಮಹರ್ಷಿಗಳ ಯಾಗವನ್ನು ರಕ್ಷಿಸಿ, ಬಹಳ ಬಲಿಷ್ಠರಾದ ಸುಬಾಹು ಮೊದಲಾದ ರಾಕ್ಷಸರನ್ನು ಕೊಂದು, ರಾಮಾವತಾರದಲ್ಲಿ ತನ್ನ ಬಾಲಲೀಲೆಯನ್ನು ತೋರಿಕೊಂಡ ಪರ-ಮಾತ್ಮನೇ—ಈಗ ಕೆಂಪಡರ್ದ ಚಿಗುರುಗಳ ನಡುವೆ ವಿಕಸಿತವಾದ ಪುಷ್ಪಗಳನ್ನು ಹೊಂದಿರುವ, ದರ್ಶನೀಯವಾದ, ಶ್ರಮಹರವಾಗಿ ತಣ್ಣಗಿರುವ ಉಪವನಗಳಿಂದ ಸುತ್ತುವರಿಯಲ್ಪಟ್ಟ ತಿಲ್ಲೈಚಿತ್ತಿರಕೂಟವೆಂಬ ದಿವ್ಯಕ್ಷೇತ್ರದಲ್ಲಿ ಮೂರುಸಾವಿರ

ಶ್ರೀವೈಷ್ಣವರುಗಳಿಂದ ಮಂಗಳಾಶಾಸನ ಮಾಡಲ್ಪಡುತ್ತಿರುವ, ಶ್ಲಾಘ್ಯವಾದ ಮುತ್ತು ರತ್ನಗಳಿಂದ ಕೂಡಿದ, ಸಿಂಹಾಸನದಲ್ಲಿ ತನ್ನ ಮೇಲ್ಮೆಯನ್ನು ತೋರಲು, ಬಿಜಯ ಮಾಡಿಸಿರುವ ಸರ್ವೇಶ್ವರನು ಎಂದು ತಿಳಿಯಿರಿ.

[ಈ ದಿವ್ಯಕ್ಷೇತ್ರವನ್ನು ಕುರಿತು ಮಂಗಳಾಶಾಸನ ಮಾಡಿದ ನಮ್ಮಾಳ್ವಾರರೂ, ಮತ್ತು ತಿರುಮಂಗೈ ಆಳ್ವಾರರೂ, ಇಲ್ಲಿ ಮೂರುಸಾವಿರ ಶ್ರೀವೈಷ್ಣವರು ಪ್ರತಿನಿತ್ಯವೂ ಕೈಂಕರ್ಯ ಮಾಡುತ್ತಾ ಮಂಗಳಾಶಾಸನ ಮಾಡುತ್ತಿದ್ದರೆಂದು ತಿಳಿಸಿದ್ದಾರೆ.]

**ಶೆವ್ವರಿನಲ್ ಕರುನೆಡುಂಕಣ್ ಶೀದೈಕ್ಕಾಗಿ**
**ಶಿನವಿಡೈಯೋಣ್ ಶಿಲೈಯಿರುತ್ತು ಮಳುವಾಳೇನ್ದಿ,**
**ವೆವ್ವರಿನಲ್ ಶಿಲೈವಾಂಗಿ ವೆನ್ರಿಕೊಂಡು**
**ವೇಲ್‌ವೇನ್ದರ್ ಪಗೈತಡಿನ್ದ ವೀರನ್ತನ್ನೈ,**
**ತೆವ್ವರಿಂಜುನೆಡುಂ ಪುರಿಶೈ ಉಯರ್‌ನ್ದ ಪಾಂಗರ್**
**ತಿಲ್ಲೈನಗರ್ ತಿರು ಚಿತ್ತಿರಕೂಟನ್ತನ್ನುಳ್,**
**ಎವ್ವರಿ ವೆಂಜಿಲೈ ತಡಕ್ಕೈಯಿ ರಾಮನ್‌ತನ್ನೈ**
**ಯಿರೈಂಜಿವಾರಿಣೈಯಡಿಯೇ ಯಿರೈಂಜಿನೇನೇ ॥೨॥**

**ಶೆವ್ವರಿ**=ಕೆಂಪಡರ್ದು, **ನಲ್**=ಸುಂದರವಾಗಿಯೂ, **ಕರು**=ಕಪ್ಪಗೂ, **ನೆಡು**=ವಿಸ್ತಾರವಾಗಿ ಕಿವಿಯವರೆವಿಗೂ ಚಾಚಿಕೊಂಡಿರುವ, **ಕಣ್**=ಕಣ್ಣುಗಳನ್ನು ಹೊಂದಿರುವ, **ಶೀದೈಕ್ಕಾಕಿ**=ಸೀತಾದೇವಿಯನ್ನು ವಿವಾಹವಾಗಲು, **ಶಿನ-ವಿಡೈಯೋಣ್**=ಕೋಪವನ್ನು ಹೊಂದಿರುವ ವೃಷಭ ವಾಹನನಾದ ರುದ್ರನ, **ಶಿಲೈ**=ಧನಸ್ಸನ್ನು(ಅನಾಯಾಸವಾಗಿ), **ಇರುತ್ತು**=ಮುರಿದು, **ಮಳುವಾಳೇನ್ದಿ**= 'ಕೊಡಲಿ'ಯನ್ನೇ ಆಯುಧವನ್ನಾಗಿ ಹೊಂದಿರುವ ಪರಶುರಾಮನ, **ವೆವ್**= ಕ್ರೌರ್ಯವನ್ನು ಹೊಂದಿದ್ದ, **ವರಿ**=ದರ್ಶನೀಯವಾದ, **ನಲ್**=ಶ್ಲಾಘ್ಯವಾದ, **ಶಿಲೈ**=ವೈಷ್ಣವ ಧನಸ್ಸನ್ನು, **ವಾಂಗಿ**=ಸ್ವೀಕರಿಸಿ (ಎದೆಯೇರಿಸಿ ಬಾಣ ಪ್ರಯೋಗ ಮಾಡಿ), **ವೆನ್ರಿಕೊಂಡು**=ಕ್ಷತ್ರಿಯ ಕುಲಕ್ಕೇ ಶತ್ರುವಾದ ಅವರನ್ನು ಜಯಿಸಿ, **ವೇಲ್**=ವೇಲಾಯುಧವನ್ನು ಧರಿಸಿರುವ, **ವೇನ್ದರ್**=ಅರಸರ ಕುಲಕ್ಕೆ, **ಪಕೈತಡಿನ್ದ**=ಶತ್ರುವಾದವರೆಲ್ಲರನ್ನೂ ನಿರಸನಮಾಡಿ, **ವೀರಂತನ್ನೈ**=ಪರಾ-ಕ್ರಮವನ್ನು ಹೊಂದಿದವನಾಗಿ, **ತೆವ್ವರು**=ಶತ್ರುಗಳು, **ಅಂಜು**=ಅಂಜುವಂತೆ, **ನೆಡು**=ಎತ್ತರವಾದ, **ಉರಿಶೈ**=ಪ್ರಾಕಾರಗಳಿಂದಲೂ, **ಉಯರ್‌ನ್ದ**=ಎತ್ತರ-ವಾದ, **ಪಾಂಗರ್**=ಕಟ್ಟಡವನ್ನೂ ಹೊಂದಿರುವ, **ತಿಲ್ಲೈನಗರ್ ತಿರುಚಿತ್ತಿರ-ಕೂಟನ್ತನ್ನುಳ್**=ತಿಲ್ಲೈನಗರ್ ಚಿತ್ತಿರಕೂಟದಲ್ಲಿ ಬಿಜಯಮಾಡಿಸಿರುವ, **ಎವ್ವರಿ**=ಬೇರಾರಿಂದಲೂ ಎದುರಿಸಲು ಸಾಧ್ಯವಲ್ಲದ, **ವೆವ್**=ಪ್ರತಿಪಕ್ಷವನ್ನು

ಅಳಿಸುವ, ಶಿಲ್ಲೈ=ಶಾಂರ್ಗವೆಂಬ ಧನುಸ್ಸನ್ನು, ತಡ=ವಿಶಾಲವಾದ, ಕ್ಕೈ=ತನ್ನ ಕೈಯಲ್ಲಿ ಧರಿಸಿರುವ, **ಇರಾಮನ್ತನ್ನೈ**=ಶ್ರೀರಾಮಚಂದ್ರನನ್ನು, **ಇರೈಂಜು-ವಾರ್** = ಸ್ತೋತ್ರ ಮಾಡುವವರ, **ಇಣ್ಯೈಯಡಿಯೇ** = ತಿರುಪಡಿಗಳನ್ನೇ, ಇರೈಂಜಿನೇನ್=ನಮಿಸುತ್ತೇನೆ. ||೩||

ಅತಿ ರಮಣೀಯವಾದ ಅರಳಿರುವ ಕನ್ನೈದಿಲೆಯ ದಳದಂತೆ ಕಪ್ಪಗೆ ಕಿವಿಯವರೆವಿಗೂ ವ್ಯಾಪಿಸಿರುವ ವಿಶಾಲಲೋಚನೆಯಾದ ಸೀತಾದೇವಿಯನ್ನು ವಿವಾಹವಾಗಬೇಕೆಂದು, ಶಿವಧನಸ್ಸನ್ನು ಮುರಿದು (ಸೀತೆಯನ್ನು ವಿವಾಹವಾಗಿ, ಹಿಂತಿರುಗುತ್ತಿದ್ದಾಗ ಎದುರಿಗೆ ಬಂದ) ಪರಶುರಾಮನ ವೈಷ್ಣವ ಧನುಸ್ಸನ್ನೂ ಪಡೆದು-ಕೊಂಡು, ಎದೆಯೇರಿಸಿ ಬಾಣ ಪ್ರಯೋಗಮಾಡಿ, (೨೧ ಸಲ ಭೂಮಿಯನ್ನು ಸುತ್ತುತ್ತ ದುಷ್ಟ ಕ್ಷತ್ರಿಯರ ಸೊಕ್ಕನ್ನು ಮುರಿದ) ಅವನ ಗರ್ವ ಭಂಗಮಾಡಿ, ಅರಸರ ಕುಲಕ್ಕೆ ಶತ್ರುವಾದವರೆಲ್ಲರನ್ನೂ ನಿರಸನ ಮಾಡಿದ ಶಾಂರ್ಗಪಾಣಿಯಾದ ಶ್ರೀರಾಮನೇ—ಇಂದು ಶತ್ರುಗಳಾರೂ ಬರಲಾರದಂತೆ ಎತ್ತರವಾದ ಪ್ರಾಕಾರ-ದಿಂದಲೂ ಕಟ್ಟಡದಿಂದಲೂ ಸುತ್ತುವರಿಯಲ್ಪಟ್ಟಿರುವ ತಿರುಚಿತ್ತಿರಕೂಟ ದಿವ್ಯ ಕ್ಷೇತ್ರದಲ್ಲಿ ಬಿಜಯ ಮಾಡಿಸಿರುವ ಪರಮಾತ್ಮನು, ಅವನನ್ನು ಯಾರು ಸ್ತೋತ್ರ-ಮಾಡುತ್ತಾರೆಯೋ, ಅವರ ಚರಣಗಳಲ್ಲಿ ನಾನು ನಮಿಸುತ್ತೇನೆ. [ಈ ಪಾಶುರದಲ್ಲಿ ಆಳ್ವಾರರ ಭಾಗವತ ಶೇಷತ್ವವು ಪ್ರಕಾಶಪಡುತ್ತದೆ. ಈ ಹಾಡಿನಲ್ಲಿ ರಾಮಾಯಣ ಬಾಲಕಾಂಡದ ಕಥೆಯು ಮುಖ್ಯಾಯವಾಗಿದೆ.]

**ತೊತ್ತಲರ್ ಪೂಂಜುರಿಕುಳಲ್ ಕ್ಕೈಕೇಶಿ ಶೊಲ್ಲಾಲ್**
**ತೊನ್ನಗರಮ್ ತುರನ್ದು ತುರೈಕ್ಕಂಗೈ ತನ್ನೈ,**
**ಪ್ಪತ್ತಿಯುಡೈ ಕ್ಕುಗನ್‌ಕಡತ್ತ ವನಂಪೋಯ್ ಪುಕ್ಕು**
**ಪರತನಕ್ಕು ಪಾದುಕಮುಂ ಅರಶುಮೀನ್ದು,**
**ಶಿತ್ತಿರಕೂಡತ್ತಿರುನ್ದಾನ್ತನ್ನೈ ಯಿನ್ರು**
**ತಿಲ್ಲೈನಗರ್ ತಿರುಚಿತ್ತಿರಕೂಟನ್ತನ್ನುಳ್,**
**ಎತ್ತನೈಯುಂ ಕಣ್‌ಕುಳಿರ ಕ್ಕಾಣಪ್ಪೆತ್ತ**
**ಇರುನಿಲತ್ತಾರ್ ಇಮೈಯವರ್ ನೇರೊವ್ವಾರ್ ತಾಮೇ** ||೪||

**ತೊತ್ತು**=ಗೊಂಚಲು ಗೊಂಚಲಾಗಿ, **ಅಲರ್**=ಅರಳಿರುವ, **ಪೂ**=ಹೂವುಗಳನ್ನು ಧರಿಸಿರುವ, **ಶುರಿ**=ಗುಂಗುರು ಗುಂಗುರಾದ, **ಕುಳಲ್**=ಕುಂತಲಗಳನ್ನು ಹೊಂದಿರುವ, **ಕೈಕೇಶಿ**=ಕೈಕೇಯಿಯು, **ಶೊಲ್ಲಾಲ್**=ಮಾತಿಗೆ ಓಗೊಟ್ಟು, **ತೊಲ್**=ಕುಲಕ್ರಮವಾಗಿ ಬಂದ, **ನಗರಂ**=ಅಯೋಧ್ಯಾ ನಗರಿಯನ್ನು, **ತುರನ್ದು**=ತೊರೆದು, **ಪತ್ತಿಯುಡೈ**=ತಮ್ಮಂದಿರಿಗಿಂತಲೂ ಅಧಿಕವಾದ ಭಕ್ತಿಯಿಂದ ಕೂಡಿದ, **ಕುಗನ್**=ಗುಹನು, **ಕಂಗೈ**=ಗಂಗಾ

ನದಿಯ (ಆಚೆಯು), **ತುರೈ**=ದಡವನ್ನು, **ಕಡತ್ತ**=ಸೇರಿಸಲು, **ವನಂ**=ದುಷ್ಟ ಮೃಗಗಳು ಸಂಚರಿಸುವ ಕಾಡಿನಲ್ಲಿ, **ಪ್ಪೋಯ್‌ಪ್ಪುಕ್ಕು** = ಹೋಗಿ ಸೇರಿ, **ಭರತನುಕ್ಕು** = ತಮ್ಮನಾದ ಭರತನಿಗೆ, **ಪಾದುಕಮುಂ** = ಪಾದುಕೆಯನ್ನೂ, **ಅರಶುಂ** = ರಾಜ್ಯಭಾರವನ್ನೂ, **ಈನ್ದು** = ಅನುಗ್ರಹಿಸಿಕೊಟ್ಟು, **ಶಿತ್ತಿರ-ಕೂಟತ್ತು** = (ಉತ್ತರ ಭಾರತ ದೇಶದಲ್ಲಿರುವ) ಚಿತ್ರಕೂಟ ಪರ್ವತದಲ್ಲಿ, **ಇರುನ್ದಾನ್ತನ್ನೈ**=ಬಿಜಯ ಮಾಡಿಸಿದ್ದವನೇ, **ಇನ್ರು**=ಈಗ, **ತಿಲ್ಲೈನಗರ್-ತಿರುಚಿತ್ತಿರಕೂಟನ್ತನ್ನುಳ್** = ತಿಲ್ಲೈ ತಿರುಚಿತ್ತಿರಕೂಟದಲ್ಲಿ ಬಿಜಯಮಾಡಿ-ಸಿದ್ದಾನೆ. **ಕಣ್**=(ರಾಮಾವತಾರ ಕಾಲದಲ್ಲಿ ಅವನನ್ನು ಕಾಣುವ ಭಾಗ್ಯವನ್ನು ಪಡೆಯದವರ) ಕಣ್ಗಳೂ (ಇಂದು) **ಎತ್ತನೈಯುಂ ಕುಳಿರ** = ಚೆನ್ನಾಗಿ ತೃಪ್ತಿ ಹೊಂದುವಂತೆ, **ಕಾಣಪ್ಪೆತ್ತ**=ಕಂಡು ಅನುಭವಿಸುವ ಭಾಗ್ಯವಿಶೇಷವನ್ನು ಪಡೆದ, **ಇರು**=ಶ್ಲಾಘ್ಯವಾದ, **ನಿಲತ್ತಾರ್‌ಕ್ಕು**=ಭೂಲೋಕದಲ್ಲಿರುವವರಿಗೆ, **ಇಮೈ-ಯವರ್**=ನಿತ್ಯಸೂರಿಗಳು, **ನೇರೊವ್ವಾರ್**=ಸದೃಶರಾಗುವರು. ||೪||

ಗೊಂಚಲು ಗೊಂಚಲಾಗಿ ಅರಳಿರುವ ಹೂವುಗಳನ್ನು ಮುಡಿದುಕೊಂಡಿದ್ದ ಕೈಕೇಯಿಯ ಮಾತಿಗೆ ಓಗೊಟ್ಟು, ಕುಲಕ್ರಮಾಗತವಾದ ಅಯೋಧ್ಯಾ ಪಟ್ಟಣವನ್ನು ತೊರೆದು, ತಮ್ಮಂದಿರಿಗಿಂತಲೂ ಅಧಿಕವಾದ ಭಕ್ತಿಯಿಂದ ಕೂಡಿದ ಗುಹನು ತನ್ನ ದೋಣಿಯಲ್ಲಿ ಕುಳ್ಳಿರಿಸಿಕೊಂಡು ಗಂಗಾನದಿಯನ್ನು ದಾಟಿಸಿ, ಮತ್ತೊಂದು ದಡವನ್ನು ಸೇರಿಸಲು, ಭಯಂಕರವಾದ ಕಾಡನ್ನು ಪ್ರವೇಶಿಸಿ, ತಮ್ಮನಾದ ಭರತನಿಗೆ ಪಾದುಕೆ-ಯನ್ನೂ ರಾಜ್ಯವನ್ನೂ ಅನುಗ್ರಹಿಸಿಕೊಟ್ಟು, ಚಿತ್ರಕೂಟ ಪರ್ವತದಲ್ಲಿ ಸಂತೋಷದಿಂದ ವಿಹರಿಸುತ್ತಿದ್ದ ಶ್ರೀರಾಮನೇ, ಇಂದು ತಿಲ್ಲೈತಿರುಚಿತ್ತಿರಕೂಟವೆಂಬ ದಿವ್ಯಕ್ಷೇತ್ರದಲ್ಲಿ ಬಿಜಯಮಾಡಿಸಿದ್ದಾನೆ. ಅಂದು ರಾಮಾವತಾರ ಕಾಲದಲ್ಲಿ ಅವನನ್ನು ದರ್ಶನಮಾಡುವ ಭಾಗ್ಯವನ್ನು ಪಡೆಯದ ಕಣ್ಗಳುಳ್ಳವರೂ ಇಂದು ತಮ್ಮ ಕಣ್ತುಂಬ ತೃಪ್ತಿಯಾಗುವಂತೆ ಕಂಡು ಅನುಭವಿಸುವಂತೆ ಅವನು ಅರ್ಚಾ ಮೂರ್ತಿ ಸ್ವರೂಪದಲ್ಲಿ ಬಿಜಯ ಮಾಡಿಸಿದ್ದಾನೆ. ಈಗ ಆತನನ್ನು ದರ್ಶನಮಾಡುವ ಭಾಗ್ಯವಿಶೇಷವನ್ನು ಪಡೆದಿರುವ ಭಗವದ್ಭಕ್ತರು ಈ ಭೂಮಂಡಲದಲ್ಲೇ ಇದ್ದರೂ, ನಿತ್ಯಸೂರಿಗಳಿಗೆ ಸಮಾನರಾಗಿರುತ್ತಾರೆ. ಸಕಲದುಃಖಗಳೂ ನೀಗಿ ನಿರಂತರವಾದ ಆನಂದವನ್ನು ಪಡೆಯುತ್ತಾರೆ. ||೪||

**ವಲಿವಣಕ್ಕು ವರೈನೆಡುನ್ದೋಳ್ ವಿರಾಧೈಕ್ಕೊನ್ರು**
**ವಣ್ತಮಿಳ್ ಮಾಮುನಿಕೊಡುತ್ತ ವರಿವಿಲ್ ವಾಂಗಿ,**
**ಕಲೈವಣಕ್ಕು ನೋಕ್ಕರಕ್ಕಿ ಮೂಕ್ಕೈ ನೀಕ್ಕಿ**
**ಕರನೋಡು ದೂಷಣನ್ತನ್ ಉಯಿರೈ ವಾಂಗಿ,**

ಶಿಲೈವಣಕ್ಕಿ ಮಾನ್‌ಮರಿಯ ವೆಯ್‌ದಾನ್ತನ್ನೈ
ತಿಲ್ಲೈನಗರ್ ತಿರುಚಿತ್ತಿರಕೂಟನ್ತನ್ನುಳ್,
ತಲೈವಣಕ್ಕಿ ಕೈಕೂಪ್ಪಿಯೇತ ವಲ್ಲಾರ್
ತಿರಿದಲಾಲ್ ತವಮುಡೈತ್ತು ತರಣಿದಾನೇ ||೫||

**ವಲಿವಣಕ್ಕು** = ಎದುರಾಳಿಗಳಿಗೆ ತನ್ನ ಬಲವನ್ನು ತೋರಿಸಬೇಕೆಂಬ ಆಶಯದಿಂದ, **ವರೈ** = ಬೆಟ್ಟದಂತಿದ್ದ, **ನೆಡು** = ದೀರ್ಘವಾಗಿ ಚಾಚಿದ್ದ, **ತೋಳ್** = ತೋಳುಗಳುಳ್ಳ, **ವಿರಾದೈ** = ವಿರಾಧನನ್ನು, **ಕೊನ್ರು** = ಕೊಂದು, **ವಣ್** = ಸರ್ವ ಸುಲಭವಾದ, **ತಮಿಳ್** = ತಮಿಳು ಭಾಷೆಗೆ ನಿರ್ವಾಹಕರಾದ, **ಮಾಮುನಿ** = ಋಷಿಶ್ರೇಷ್ಠರಾದ ಅಗಸ್ತ್ಯ ಮಹರ್ಷಿಗಳು, **ಕೊಡುತ್ತ** = ಕೊಟ್ಟ, **ವರಿ** = ದರ್ಶನೀಯವಾದ, **ವಿಲ್** = ಬಿಲ್ಲನ್ನು, **ವಾಂಗಿ** = ಸ್ವೀಕರಿಸಿ, **ಕಲೈ** = ಜಿಂಕೆಯ ಕಣ್ಣೋಟವನ್ನು, **ವಣಕ್ಕು** = ತೋರಿಸಿಕೊಳ್ಳಬೇಕೆಂಬ, **ನೋಕ್ಕು** = ಆಶಯವುಳ್ಳ, **ಅರಕ್ಕಿ** = 'ಶೂರ್ಪಣಖಿ'–ಎಂಬ ರಾಕ್ಷಸಿಯ, **ಮೂಕ್ಕೈ** = ಮೂಗನ್ನೂ, **ನೀಕ್ಕಿ** = ಛೇದಿಸಿ, (ಅದರಿಂದ ಕುಪಿತರಾಗಿ ಬಂದ) **ಕರನೋಡು-ದೂಷಣನ್ತನ್** = ಖರ ಮತ್ತು ದೂಷಣರ, **ಉಯಿರೈ** = ಪ್ರಾಣಗಳನ್ನು **ವಾಂಗಿ** = ಅಪಹರಿ,ಸಿ (ಅದನ್ನು ಕೇಳಿ ಸಹಿಸಲಾಗದ ರಾವಣನಿಂದ ಕಳುಹಿಸಲ್ಪಟ್ಟ) **ಮಾನ್** = ಮಾಯಾಮೃಗವಾದ ಜಿಂಕೆಯ ರೂಪವನ್ನು ತಾಳಿ ಬಂದ ಮಾರೀಚನು, **ಮರಿಯ** = ಮಡಿಯುವಂತೆ, **ಶಿಲೈವಣಕ್ಕಿ** = ಬಿಲ್ಲನ್ನು ಹೆದೆಯೇರಿಸಿ, **ಎಯ್-ದಾನ್ತನ್ನೈ** = ಬಾಣಪ್ರಯೋಗ ಮಾಡಿದ (ಆ ಶ್ರೀರಾಮಚಂದ್ರನನ್ನು) **ತಿಲ್ಲೈನಗರ್ ತಿರುಚಿತ್ತಿರಕೂಟನ್ತನ್ನುಳ್** = ತಿಲ್ಲೈ ತಿರುಚಿತ್ತಿರಕೂಟದಲ್ಲಿ ಅರ್ಚಾಮೂರ್ತಿ ಸ್ವರೂಪದಲ್ಲಿ ಬಿಜಯ ಮಾಡಿಸಿರುವ ಸ್ವರೂಪವನ್ನು, (ದರ್ಶನ ಮಾಡಿ) **ತಲೈವಣಕ್ಕಿ** = ತಲೆಬಾಗಿ ನಮಸ್ಕರಿಸಿ, **ಕೈಕೂಪ್ಪಿ** = ಅಂಜಲಿಮಾಡಿ (ಕೈಮುಗಿದು), **ಏತ್ತವಲ್ಲಾರ್** = ಸ್ತೋತ್ರ ಮಾಡುವವರು, **ತಿರಿದಲಾಲ್** = ಸಂಚರಿಸುವುದರಿಂದಲೇ, **ತರಣಿ** = ಈ ಭೂಮಂಡಲವು, **ತವಮುಡೈತ್ತು** = ಮಹತ್ತರವಾದ ತಪಸ್ಸಿನ ಭಾಗ್ಯವನ್ನು ಹೊಂದಿದಾಗುತ್ತದೆ. ||೫||

ಎದುರಾಳಿಗಳಿಗೆ ತನ್ನ ಬಲವನ್ನು ತೋರಬೇಕೆಂಬ ಮತ್ತು ಎದುರಾಳಿಗಳಿಗೆ ನೋವನ್ನುಂಟು ಮಾಡಬೇಕೆಂಬ ಆಶಯದಿಂದ ಬೆಟ್ಟದಂತೆ ದೀರ್ಘವಾಗಿ ಚಾಚಿದ್ದ ತೋಳುಗಳುಳ್ಳ ವಿರಾಧನನ್ನು ಕೊಂದು, ಸರ್ವಸುಲಭವಾದ ತಮಿಳು ಭಾಷೆಗೆ ನಿರ್ವಾಹಕರಾದ ಮಹಾತ್ಮರಾದ ಅಗಸ್ತ್ಯ ಮಹರ್ಷಿಗಳು ಕೊಟ್ಟ ಸುಂದರವಾದ ಬಿಲ್ಲನ್ನು ಸ್ವೀಕರಿಸಿ, ಜಿಂಕೆಯ ಕಣ್ಣೋಟವನ್ನು ತೋರಿಕೊಂಡು, ಅದರ ಸೌಂದರ್ಯದಿಂದಲೇ ರಾಮನನ್ನು ತನ್ನ ವಶಪಡಿಸಿಕೊಳ್ಳಬೇಕೆಂದು ಬಂದ ರಾಕ್ಷಸಿಯಾದ ಶೂರ್ಪಣಖಿಯ ಮೂಗನ್ನು ಕತ್ತರಿಸಿ, (ಅದರಿಂದ ಕುಪಿತರಾಗಿ ಯುದ್ಧೋನ್ಮುಖರಾಗಿ

ಬಂದ ಖರದೂಷಣರನ್ನೂ ಸಂಹರಿಸಿ, ಈ ಮೇಲೆ ಮೇಲೆ ತನ್ನ ಬಂಧುಗಳಿಗೆ ಬಂದ ವಿಪತ್ತನ್ನು ಸಹಿಸಲಾರದೆ (ಹಿಂದೆ ಏಟಿಂತಿಂದು ತಪ್ಪಿಸಿಕೊಂಡು ಬಂದ ಮಾರೀಚನಿಂದ ರಾಮನನ್ನು ತನ್ನ ಭುಜಬಲ ಪರಾಕ್ರಮದಿಂದ ಕೊಲ್ಲಲು ಸಾಧ್ಯವಿಲ್ಲವೆಂದೂ, ಅವನಿಗೆ ಪ್ರಾಣದಂತೆಯೇ ಇರುವ, ಅವನ ಪತ್ನಿಯಾದ ಸೀತಾದೇವಿಯನ್ನು ಅವನಿಂದ ಬೇರ್ಪಡಿಸುವುದರಿಂದ ಮಾತ್ರ ಆಕೆಯ ವಿರಹವ್ಯಥೆಯನ್ನು ತಾಳದೆ ರಾಮನು ಸಾಯುವುದು ಖಂಡಿತವೆಂದು ಅರಿತು, ಅವನನ್ನು ಮೋಸದಿಂದ ಈ ರೀತಿ ಕೊಲ್ಲಲು, ಸಂಕಲ್ಪಿಸಿದ ರಾವಣನಿಂದ ಸೀತೆಯ ಮನಸ್ಸನ್ನೂ ಅಪಹರಿಸುವಂತಹ ಮಾಯಾ ಮೃಗವಾದ ಜಿಂಕೆಯ ರೂಪವನ್ನು ತಾಳಿ, ರಾಮಸೀತೆಯರು ವಾಸಿಸುವ ಆಶ್ರಮದ ಪರಿಸರದಲ್ಲಿ ಓಡಾಡುವಂತೆ ಪ್ರೇರಿಸಲ್ಪಟ್ಟ ಮಾರೀಚನು ಸಾಯುವಂತೆ, ಧನುಸ್ಸನ್ನು ಹೆದೆಯೇರಿಸಿ ಬಾಣಪ್ರಯೋಗ ಮಾಡಿದ ಶ್ರೀರಾಮಚಂದ್ರನನ್ನು ಇಂದು ತಿಲ್ಲೈ ಚಿತ್ರಕೂಟದಲ್ಲಿ ಅರ್ಚಾಮೂರ್ತಿ ಸ್ವರೂಪದಲ್ಲಿ ದರ್ಶನಮಾಡಿ ದಂಡವತ್ ಪ್ರಣಾಮ ಮಾಡಿ ಅಂಜಲಿ ಸಮರ್ಪಿಸುವ ಭಕ್ತರು, ಈ ಭೂಮಂಡಲದಲ್ಲಿ ಸಂಚರಿಸುವುದೇ ಭೂಮಿತಾಯಿಯ ಅತಿದೊಡ್ಡ ತಪಸ್ಸಿನ ಭಾಗ್ಯವಿಶೇಷವಾಗಿರುತ್ತದೆ. ||೫||

**ತನಮರುವು ವೈದೇಹಿ ಪಿರಿಯಲುತ್ತು**
**ತಳರ್‌ವೆಯ್‌ದಿ ಜಟಾಯುವೈ ವೈಕುನ್ದತ್ತೇತ್ತಿ.**
**ವನಮರವು ಕವಿಯರಶನ್ ಕಾದಲ್‌ಕೊಂಡು-**
**ವಾಲಿಯೈಕ್ಕೊನ್ರಿಲಂಗೈ ನಗರರಕ್ಕರ್‌ಕೋಮಾನ್.**
**ಶಿನಮಡಂಗ ಮಾರುತಿಯಾಲ್ ಶುಡುವಿತ್ತಾನೈ**
**ತಿಲ್ಲೈನಗರ್ ತಿರುಚಿತ್ತಿರ ಕೂಟತ್ತನ್ನುಳ್.**
**ಇನಿದಮರ್ ನ್ದವಮ್ಮಾನೈಯಿ ರಾಮನ್ತನ್ನೈ**
**ಯೇತ್ತುವಾರಿಣೈಯಡಿಯೇ ಯೇತ್ತಿನೇನೇ** ||೬||

**ತನಮ್**=ಸ್ತನಕಲಶಗಳ ಸೌಂದರ್ಯದಿಂದ, **ಮರುವು**=ಕೂಡಿಕೊಂಡಿರುವಿಕೆಗೇ ಯೋಗ್ಯಳಾದ, **ವೈದೇಹಿ**=ವಿದೇಹರಾಜನ ಮಗಳಾದ ಸೀತೆಯನ್ನು, **ಪಿರಿಯಲುತ್ತು**=ಅಗಲಿದುದರಿಂದ, **ತಳರ್ವೆಯ್ದಿ**=ಮನಸ್ಸಿನಲ್ಲೇ ತಳಮಳಿಸಿ, **ಜಟಾಯುವೈ**=(ಸೀತೆಯನ್ನು ಅಪಹರಿಸುತ್ತಿದ್ದ ರಾವಣನಿಂದ ಬಿಡಿಸಬೇಕೆಂದು ಯುದ್ಧಮಾಡಿ, ರಾವಣನ ಹೊಡೆತಗಳಿಂದ ಮೃತಹೊಂದಿದ) ಜಟಾಯುವನ್ನು, **ವೈಕುನ್ದತ್ತೇತ್ತಿ**=ಶ್ರೀವೈಕುಂಠ ಲೋಕಕ್ಕೆ ಕಳುಹಿಸಿ, **ವನಮ್ ಮರವು**=ವಾಲಿಯ ಭಯದಿಂದ ಕಾಡಿನಲ್ಲಿ ಮರೆಯಾಗಿ ವಾಸಿಸುತ್ತಿದ್ದ, **ಕವಿಯರಶರ್**=ಕಪಿರಾಜನಾದ ಸುಗ್ರೀವನನ್ನು **ಕಾದಲ್‌ಕೊಂಡು**=ಪ್ರೀತಿಪೂರ್ವಕವಾಗಿ ಸ್ನೇಹಿತನಾಗಿ ಪರಿಗ್ರಹಿಸಿ, **ವಾಲಿಯೈ**=(ಸುಗ್ರೀವನಿಗೋಸ್ಕರ) ವಾಲಿಯನ್ನು, **ಕೊನ್ರು**=**ಅರಕ್ಕರ್**=ರಾಕ್ಷಸರಿಗೆ, **ಕೋಮಾನ್**=ಸ್ವಾಮಿಯಾದ ರಾವಣನ, **ಶಿನಂ**=

ಕೋಪವು, **ಅಡಂಗ**=ಅಡಗುವಂತೆ, **ಇಲಂಗೈನಗರ್**=ಲಂಕಾಪಟ್ಟಣವನ್ನು, **ಮಾರುತಿಯೊಲ್**=ವಾಯುಪುತ್ರನಾದ ಆಂಜನೇಯನಿಂದ, **ಶುಡುವಿತ್ತಾನೈ**= ಸುಟ್ಟುಹಾಕಿಸಿದ, **ತಿಲ್ಲೈನಗರ್ ತಿರು ಚಿತ್ತಿರಕೂಟತ್ತುಳ್**=ತಿಲ್ಲೈ ತಿರು ಚಿತ್ತಿರಕೂಟದಲ್ಲಿ, **ಇನಿತು**=ಸುಂದರವಾಗಿ, **ಅಮರ್‌ನ್ದ**=ಬಿಜಯ ಮಾಡಿಸಿರುವ, **ಅಮ್ಮಾನ್**=ಸರ್ವಸ್ವಾಮಿಯಾದ, **ಇರಾಮನ್ತನ್ನೈ**=ಶ್ರೀರಾಮಚಂದ್ರನನ್ನು, **ಏತ್ತುವಾರ್**=ಸ್ತೋತ್ರಮಾಡುವವರ, **ಇಣೈಯಡಿಯೇ**=ತಿರುವಡಿಗಳನ್ನೇ, **ಏತ್ತಿನೇನ್**=ಸ್ತೋತ್ರ ಮಾಡುವ ಭಾಗ್ಯವನ್ನು ನಾನು ಪಡೆದೆನು. ||೬||

ಸ್ತನಕಲಷಗಳ ಸೌಂದರ್ಯದಿಂದ ಸರ್ವದಾ ಆಲಿಂಗನ ಮಾಡಿಕೊಂಡು ಕೂಡಿ-ಕೊಂಡಿರುವಿಕೆಗೇ ಯೋಗ್ಯಳಾದ, ಸೀತೆಯನ್ನು ಅಗಲಿದುದರಿಂದ ಮನಸ್ಸಿನಲ್ಲೇ ತಳಮಳಿಸುತ್ತಿದ್ದು, ಆಕೆಯನ್ನು ಅಪಹರಿಸುತ್ತಿದ್ದ ರಾವಣನಿಂದ ಬಿಡಿಸಬೇಕೆಂದು ರಾವಣನೊಡನೆ ಹೋರಾಡಿ ಮೃತಹೊಂದಿದ ಜಟಾಯುವಿಗೆ "ಗಚ್ಛ ಲೋಕಾನ್ ಅನುತ್ತಮಾನ್"—ಎಂದು ಹೇಳಿ, ಶ್ರೀವೈಕುಂಠಲೋಕಕ್ಕೆ ಆತನನ್ನು ಕಳುಹಿಸಿ, ವಾಲಿಯ ಭಯದಿಂದ ಕಾಡಿನಲ್ಲಿ ಮರೆಸಿಕೊಂಡು ವಾಸಿಸುತ್ತಿದ್ದ ಸುಗ್ರೀವ-ನೊಡನೆ ಸಖ್ಯಮಾಡಿಕೊಂಡು, ಆತನಿಗೆ ರಾಜ್ಯವನ್ನೂ ಅವನ ಪತ್ನಿಯನ್ನೂ ಕೊಡಿಸುವ ಸಲುವಾಗಿ ವಾಲಿಯನ್ನು ಕೊಂದು, ರಾಕ್ಷಸರಾಜನಾದ ರಾವಣನ ಕೋಪವು ಅಡಗುವಂತೆ, ಲಂಕಾಪಟ್ಟಣವನ್ನು, ತನ್ನ ದೂತನಾದ ಮಾರುತಿಯಿಂದ ಸುಟ್ಟುಹಾಕಿಸಿದ ಸರ್ವಸ್ವಾಮಿಯಾದ ಶ್ರೀರಾಮಚಂದ್ರನು, ಇಂದು ತಿಲ್ಲೈತಿರು-ಚಿತ್ತಿರಕೂಟದಲ್ಲಿ ಅರ್ಚಾಸ್ವರೂಪದಲ್ಲಿ ಸುಂದರವಾಗಿ ಬಿಜಯಮಾಡಿಸಿರುವುದನ್ನು ಕಂಡು ಸ್ತೋತ್ರಮಾಡುವವರ ತಿರುವಡಿಗಳನ್ನೇ ಸ್ತುತಿಸುವ ಭಾಗ್ಯ ವಿಶೇಷವನ್ನು ನಾನು ಪಡೆದೆನು—ಎಂದು ಆಳ್ವಾರರು ತಮ್ಮ ಭಾಗವತಶೇಷತ್ವವನ್ನು ಈ ಹಾಡಿನಲ್ಲಿ ತಿಳಿಸಿದ್ದಾರೆ. ||೬||

ಕುರೈಕಡಲೈಯಡಲಂಬಾಲ್ ಮರುಗ ವೆಯ್‌ದು
ಕುಲೈಕಟ್ಟಿಮರುಕರೈಯೈ ಯದನಾಲೇರಿ
ಎರಿನೆಡುವೇಲರಕ್ಕರೊಡು ಮಿಲಂಗೈವೇನ್ದನ್
ಇನ್ನುಯಿರ್ ಕೊಂಡವನ್ ತಂಬಿಕ್ಕು ಅರಶುಮೀನ್ದು,
ತಿರುಮಗಳೋಡು ಇನಿದಮರ್‌ನ್ದ ಶೆಲ್ವನ್ತನ್ನೈ
ತಿಲ್ಲೈನಗರ್ ತಿರು ಚಿತ್ತಿರಕೂಟತ್ತುಳ್,
ಅರಶಮರ್‌ನ್ದಾನ್ ಅಡಿಶೂಡುಮರಶೈಯಲ್ಲಾಲ್
ಅರಶಾಗವೆಣ್ಣೇನ್ ಮತ್ತರಶು ತಾನೇ ||೭||

**ಕುರೈ**=(ಅಲೆಗಳಿಂದ) ಘೋಷಿಸುತ್ತಿದ್ದ, **ಕಡಲೈ**=ಸಮುದ್ರವನ್ನು, **ಅಡಲ್**=ಶತ್ರುಗಳಿಗೆ ದುಃಖವನ್ನುಂಟು ಮಾಡುವ, **ಅಂಬಾಲ್**=ಬಾಣದಿಂದ,

**ಮುರುಕ**=ದುಃಖಿತನಾಗುವಂತೆ, **ಎಯ್ತು**=ಬಾಣ ಪ್ರಯೋಗ ಮಾಡಿ, **ಕುಲ್ಕಕಟ್ಟಿ**=(ಅದರಿಂದ ಅಂಜಿದ ಸಮುದ್ರರಾಜನ ಮಾತಿನಂತೆಯೇ) ಸೇತುವೆ-ಯನ್ನು ಕಟ್ಟಿ, **ಅದನಾಲ್**=ಆ ಸೇತುವೆಯಿಂದ, **ಮುರುಕರೈಯ್ಯೈಏರಿ**= ಅಕ್ಕರೆಯನ್ನು ಸೇರಿ, ಎರಿ=ಶತ್ರುಗಳನ್ನು ಸುಟ್ಟುಹಾಕುವ ಬೆಂಕಿಯಂತಿದ್ದ **ನೆಡು**=ದೊಡ್ಡದಾದ, **ವೇಲ್**=ವೇಲಾಯುಧಗಳನ್ನು ಹೊಂದಿದ್ದ, **ಅರಕ್ಕ-ರೊಡುಂ**=ರಾಕ್ಷಸರೊಡನೆಯೂ, **ಇಲಂಗೈವೇನ್ದನ್**=ಲಂಕಾಧಿಪತಿಯಾದ ರಾವಣನೊಡನೆಯೂ (ಯುದ್ಧಮಾಡಿ), **ಇನ್**=ಅವರಿಗಿಷ್ಟವಾದ, **ಉಯಿರ್-ಕೊಂಡು**=ಅವರ ಪ್ರಾಣಗಳನ್ನು ಅಪಹರಿಸಿ, **ಅವನ್‌ತಂಬಿಕ್ಕು**=ಆ ರಾವಣನ ತಮ್ಮನಾದ ವಿಭೀಷಣನಿಗೆ, **ಅರಶು**=ಲಂಕಾಧಿಪತ್ಯವನ್ನು, **ಈನ್ದು**=ಕೊಟ್ಟು, **ತಿರುಮುಕಳೋಡು**=ಮಹಾಲಕ್ಷ್ಮಿಯಾದ ಸೀತಾದೇವಿಯೊಡನೆ, **ಇನಿತಮರ್ನ್ದ**= (ಇದರವರೆವಿಗೂ ಇದ್ದ ವಿಶ್ಲೇಷವೆಲ್ಲವೂ ಮರೆಯುವಂತೆ) ಗಾಢವಾಗಿ ಸಂಶ್ಲೇಷಿಸುವ, **ಶೆಲ್ವಮ್ತನ್ನೈ**=ಐಶ್ವರ್ಯವನ್ನು ಪಡೆದು, (ಇಂದು) **ತಿಲ್ಲೈನಗರ್ ತಿರುಚಿತ್ತಿರ-ಕೂಟಮ್ತನ್ನುಳ್**=ತಿಲ್ಲೈ ತಿರುಚಿತ್ತಿರ ಕೂಟದಲ್ಲಿ, **ಅರಶಮರ್ನ್ದಾನ್**= ಬಿಜಯ ಮಾಡಿಸಿ ರಾಜ್ಯಭಾರ ಮಾಡುತ್ತಿರುವವನಾದ ಆ ರಾಮನ, **ಅಡಿಶೂಡುಂ** =ತಿರುವಡಿಗಳನ್ನು ಮುಡಿಯಲ್ಲಿ ಧರಿಸುವಂತಹ, **ಅರಶೈಯೆಲ್ಲಾಲ್**= ಆಧಿಪತ್ಯವೊಂದನ್ನುಳಿದು, **ಮತ್ತರಶು**=ಇತರ (ತುಚ್ಛವಾದ) ಆಧಿಪತ್ಯವನ್ನು, **ಅರಶಾಕವೇಂಡೇನ್**=ರಾಜ್ಯಾಧಿಪತ್ಯವೆಂದು ನಾನು ಎಣಿಸುವುದಿಲ್ಲ. ||೭||

ಮೇಲೆ ಮೇಲೆ ಏಳುತ್ತಿದ್ದ ಅಲೆಗಳಿಂದ ಘೋಷಿಸುತ್ತಿದ್ದ ಸಮುದ್ರವನ್ನು, ಶತ್ರುಗಳಿಗೆ ದುಃಖವನ್ನುಂಟು ಮಾಡುವ ಬಾಣದಿಂದಲೇ ದುಃಖಿತನಾಗುವಂತೆ ಬಾಣ ಪ್ರಯೋಗ ಮಾಡಿ, ಅದರಿಂದ ಭಯಪಟ್ಟು ಓಡಿಬಂದ ಸಮುದ್ರರಾಜನಿಂದ ಹೇಳಲ್ಪಟ್ಟಂತೆಯೇ ಸಮುದ್ರಕ್ಕೆ ಸೇತುವೆಯನ್ನು ಕಟ್ಟಿ, ಅದರಿಂದ ಸಮುದ್ರ-ವನ್ನು ದಾಟಿ, ಅಕ್ಕರೆಯಲ್ಲಿದ್ದ ಲಂಕಾಪಟ್ಟಣವನ್ನು ಪ್ರವೇಶಿಸಿ, ಶತ್ರುಗಳನ್ನು ಸುಟ್ಟುಹಾಕುವ ಬೆಂಕಿಯೋ ಎಂಬಂತೆ ಪ್ರಕಾಶಮಯವಾದ ಅಲಗುಗಳಿಂದ ಕೂಡಿದ ವೇಲಾಯುಧಗಳನ್ನು ಧರಿಸಿದ್ದ ರಾಕ್ಷಸರನ್ನೂ, ರಾವಣನನ್ನೂ ಸಂಹರಿಸಿ, ಲಂಕಾ-ರಾಜ್ಯವನ್ನು ಅವನ ತಮ್ಮನಾದ ವಿಭೀಷಣನಿಗೆ ಅನುಗ್ರಹಿಸಿಕೊಟ್ಟು, ಬಹಳ ಕಾಲದಿಂದುಂಟಾಗಿದ್ದ ವಿಶ್ಲೇಷವೆಲ್ಲವೂ ನೀಗುವಂತೆ ಸೀತಾದೇವಿಯೊಡನೆ ಸಂಶ್ಲೇಷ-ವನ್ನು ಪಡೆದು, ಇಂದು ತಿಲ್ಲೈ ತಿರು ಚಿತ್ತಿರಕೂಟದಲ್ಲಿ ಬಿಜಯ ಮಾಡಿಸಿ ರಾಜ್ಯ-ಭಾರ ಮಾಡುತ್ತಿರುವ ಆ ಶ್ರೀರಾಮಚಂದ್ರನ ತಿರುವಡಿಗಳನ್ನು ನನ್ನ ಮುಡಿ-ಗಳಲ್ಲಿ ಧರಿಸುವಂತಹ ಆಧಿಪತ್ಯವೊಂದನ್ನುಳಿದು, ಇತರ ತುಚ್ಛವಾದ ರಾಜ್ಯಾಧಿ-ಪತ್ಯಗಳನ್ನು ನಾನು ಆಧಿಪತ್ಯವೆಂದೆಣಿಸುವುದಿಲ್ಲ. ||೭||

ಅಂಬೊನ್ನೆಡುಮಣಿಮಾಡ ವಯೋತ್ತಿಯೆಯ್ದಿ
ಅರಶೆಯ್ದಿ ಯೆಗತ್ತಿಯನ್ ವಾಯ್ತ್ತಾನ್ ಮುನ್-
ಕೊನ್ರಾನ್‌ತನ್, ಪೆರುನ್ತೊಲ್‌ಕದೈ ಕೇಟ್ಟು ಮಿದಿಲೈಚ್ಚೆಲ್ವಿ
ಉಲಗುಯ್ಯ ತಿರುವಯಿರು ವಾಯ್ತ್ತಮಕ್ಕಳ್
ಶೆಂಬವಳತ್ತಿರಳ್ವಾಯ್ತ್ತನ್ ಶರಿದೈಕೇಟ್ಟಾನ್
ತಿಲ್ಲೈನಗರ್ ತಿರುಚಿತ್ತಿರಕೂಟತ್ತನ್ನುಳ್,
ಎಂಬೆರುಮಾನ್ ತನ್‌ಚರಿತೈ ಶೆವಿಯಾಲ್, ಕಣ್ಣಾಲ್-
ಪರುಗುವೋಂ ಮಿನ್ನಮುದ ಮದಿಯೋಮನ್ರೇ ||೮||

**ಅಮ್** = ಪಟ್ಟಾಭಿಷೇಕಕ್ಕನುಗುಣವಾಗಿ ಅಲಂಕರಿಸಲ್ಪಟ್ಟ, **ಪೊನ್** = ದರ್ಶನೀಯವಾದ (ಸ್ವರ್ಣದಿಂದಲೂ), **ನೆಡುಂ** = ಬಹಳ ಬೆಲೆ ಬಾಳುವ, **ಮಣಿ** = ರತ್ನಗಳಿಂದಲೂ ಹುದುಗಿಸಲ್ಪಟ್ಟ, **ಮಾಡಂ** = ಮಾಳಿಗೆಗಳಿಂದ ಕೂಡಿದ, **ಅಯೋತ್ತಿ** = ಅಯೋಧ್ಯಾಪಟ್ಟಣದಲ್ಲಿ, **ಎಯ್ದಿ** = ಸಿಂಹಾಸನಸ್ಥನಾಗಿ ಬಿಜಯ ಮಾಡಿಸಿ, **ಅರಶೆಯ್ದಿ** = ಸಾಮ್ರಾಜ್ಯಾಧಿಪತ್ಯವನ್ನು ವಹಿಸಿಕೊಂಡು, **ಅಕತ್ತಿಯರ್-ವಾಯ್** = ಅಗಸ್ತ್ಯರ ಬಾಯಿಂದಲೇ, **ತಾನ್** = ತಾನು, **ಮುನ್** = ಮೊದಲು, **ಕೊನ್ರಾನ್‌ತನ್** = ಕೊಂದ ರಾವಣನ, **ಪೆರುಮ್** = ಹಿರಿಮೆಯನ್ನು ತಿಳಿಸುವ, **ತೊಲ್‌ಕತೈ** = ಪೂರ್ವ ವೃತ್ತಾಂತಗಳನ್ನೂ, **ಕೇಟ್ಟು** = ಕೇಳಿ, **ಮಿಥಿಲೈಚ್ಚೆಲ್ವಿ** = ಮಿಥಿಲಾಧಿಪತಿಯಾದ ಜನಕನ ಮಗಳಾದ ಸೀತಾದೇವಿಯು, **ಉಲಕು ಉಯ್ಯ** = ಪ್ರಪಂಚವೇ ಉಜ್ಜೀವಿಸುವಂತೆ, **ತಿರುವಯಿರು ವಾಯ್ತ್ತ** = ತನ್ನ ಗರ್ಭದಿಂದ ಹಡೆದ, **ಮಕ್ಕಳ್** = ಮಕ್ಕಳಾದ ಕುಶಲವರ, **ತಿರಳ್** = ಅರಳಿದ (ಕಾಂತಿಯುತವಾದ), **ಶೆಮ್** = ಕೆಂಪಡರ್ದಿರುವ, **ಪವಳಮ್** = ಹವಳದಂತಿರುವ ತುಟಿಗಳಿಂದ ಕೂಡಿದ, **ವಾಯ್** = ಬಾಯಿಂದಲೇ, **ತನ್** = ತನ್ನ, **ಚರಿತೈ** = ಚರಿತ್ರವಾದ ರಾಮಾಯಣವನ್ನು, **ಕೇಟ್ಟಾನ್** = ಕೇಳಿದ (ಶ್ರೀರಾಮಚಂದ್ರನು ನಿತ್ಯವಾಸ ಮಾಡುವ) **ತಿಲ್ಲೈನಕರ್ ತಿರುಚಿತ್ತಿರಕೂಟತ್ತುಳ್** = ತಿಲ್ಲೈ ತಿರುಚಿತ್ತಿರಕೂಟದಲ್ಲಿ, **ಎಂಬೆರುಮಾನ್‌ತನ್** = ನನ್ನ ಸ್ವಾಮಿಯು, **ಚರಿತೈ** = ಚರಿತ್ರವನ್ನು, **ಶೆವಿಯಾಲ್** = ಕಿವಿಗಳಿಂದಲೂ, **ಕಣ್ಣಾಲ್** = ಕಣ್ಣಿನಿಂದಲೂ, **ಪರುಕುವೋಂ** = ಕೇಳಿ ಕಂಡು ಅನುಭವಿಸುವ ನಾವು, **ಇನ್ನಮುತಮ್** = (ಲೋಕದಲ್ಲಿ ಪ್ರಸಿದ್ಧವಾದ) ಭೋಗ್ಯವಾದ ಅಮೃತವನ್ನೂ, **ಮತಿಯೋಮ್** = ಒಂದು ವಸ್ತುವಾಗಿ ಪರಿಗಣಿಸುವುದಿಲ್ಲ. ||೮||

ಶ್ರೀರಾಮಚಂದ್ರನ ಪಟ್ಟಾಭಿಷೇಕ ಮಹೋತ್ಸವಕ್ಕನುಗುಣವಾಗಿ ಅಲಂಕರಿಸಲ್ಪಟ್ಟ ದರ್ಶನೀಯವಾದ (ಸುವರ್ಣದಿಂದ ಮಾಡಲ್ಪಟ್ಟ) ಬಹಳ ಬೆಲೆ ಬಾಳುವ ರತ್ನಗಳಿಂದಲೂ ಹುದುಗಿಸಲ್ಪಟ್ಟ ಮಾಳಿಗೆಗಳಿಂದ ಕೂಡಿದ, ಅಯೋಧ್ಯಾ-

ಪಟ್ಟಣದಲ್ಲಿ ಸಿಂಹಾಸನಸ್ಥನಾಗಿ ಬಿಜಯಮಾಡಿಸಿ, ಪಟ್ಟಾಭಿಷಿಕ್ತನಾಗಿ, ಸಾಮ್ರಾಜ್ಯಾದಿಪತ್ಯವನ್ನು ವಹಿಸಿಕೊಂಡು, ಅಗಸ್ತ್ಯರ ಬಾಯಿಂದ, ತಾನು ಮೊದಲು ಕೊಂದ ರಾವಣನ ಹಿರಿಮೆಯನ್ನು ತಿಳಿಸುವ ಪೂರ್ವವೃತ್ತಾಂತಗಳನ್ನು ಕೇಳಿ, ಮೈಥಿಲಿಯು (ತಾವು ಪ್ರಚಾರಮಾಡಿದ ರಾಮಾಯಣದ ಪಠನ, ಪಾಠನ, ಶ್ರವಣಗಳಿಂದ) ಪ್ರಪಂಚವೇ ಉಜ್ಜೀವಿಸುವಂತೆ ಹಡೆದ ಮಕ್ಕಳಾದ ಕುಶ-ಲವರ, ಅರಳಿರುವ ಕೆಂಪಡರ್ದ, ಹವಳದಂತಿರುವ ತುಟಿಗಳಿಂದ ಕೂಡಿದ ಬಾಯಿಂದಲೇ, ತನ್ನ ಚರಿತ್ರವಾದ ರಾಮಾಯಣವನ್ನು ಕೇಳಿದ ಶ್ರೀರಾಮಚಂದ್ರನು ನಿತ್ಯವಾಸ ಮಾಡುವ, ತಿಲ್ಲೈ ತಿರುಚಿತ್ತಿರ ಕೂಟದಲ್ಲಿ, ನನ್ನ ಸ್ವಾಮಿಯ ಚರಿತ್ರವನ್ನು ಕಿವಿಗಳಿಂದ ಕೇಳಿಯೂ, ಕಣ್ಗಳಿಂದ ಕಂಡೂ ಅನುಭವಿಸುವ ನಾವು, ಲೋಕದಲ್ಲಿ ಪ್ರಸಿದ್ಧವಾದ ಅಮೃತವನ್ನೂ ಒಂದು ವಸ್ತುವಾಗಿ ಪರಿಗಣಿಸುವುದಿಲ್ಲ. ||೮||

ಶೆರಿತವಚ್ಚಂಬುಕನ್ತನ್ನೈ ಚ್ಚೆನ್ರುಕೊನ್ರು
ಶೆಳುಮರೈಯೋನುಯಿರ್ ಮಿೞಾಟ್ಟುತ್ತವತ್ತೋನೀನ್ದ
ನಿರೈಮಣಿಪ್ಪೂಣಣಿಯುಂ ಕೊಂಡಿಲವಣನ್ತನ್ನೈ
ತಂಬಿಯಾಲ್ ವಾನೇತ್ತಿ ಮುನಿವನ್ ವೇಂಡ
ತ್ತಿರಲ್ ವಿಳಂಗುಮಿಲಕ್ಕುಮನ್ಯೆ ಪಿರಿನ್ದಾನ್ತನ್ನೈ
ತಿಲ್ಲೈನಗರ್ ತಿರುಚಿತ್ತಿರಕೂಟನ್ತನ್ನುಳ್
ಉರೈವಾನೈ ಮರವಾದವುಳ್ಳನ್ದನ್ನೈ
ಉಡೈಯೋಂ ಮತ್ತುರುತುಯರ ಮಡೈಯೋಮನ್ರೇ ||೯||

**ಶೆರಿತವಂ**=ಮಹತ್ತರವಾದ ತಪಸ್ಸನ್ನಾಚರಿಸುತ್ತಿದ್ದ, **ಶಂಬುಕನ್ತನ್ನೈ**= ಶಂಬೂಕನೆಂಬ ಶೂದ್ರನನ್ನು, **ಶೆನ್ರು**=ಅವನಿರುವ ಜಾಗಕ್ಕೆ ಹುಡುಕಿಕೊಂಡು ಹೋಗಿ, **ಕೊನ್ರು** = ಅವನನ್ನು ಕೊಂದು, **ಶೆಳು** = ವಿಲಕ್ಷಣನಾದ, **ಮರೈಯೋನ್**=ವೇದಾಧ್ಯಯನ ಸಂಪನ್ನನಾದ ಬ್ರಾಹ್ಮಣಪುತ್ರನ, **ಉಯಿರೈ**= ಪ್ರಾಣವನ್ನು, **ಮಿೞಾಟ್ಟು**=ಅನುಗ್ರಹಿಸಿಕೊಟ್ಟು (ಉಳಿಸಿ), **ತವತ್ತೋನ್**= ತಪಸ್ವಿಯಾದ ಅಗಸ್ತ್ಯ ಮಹರ್ಷಿಯು, **ಈನ್ದ**=ಅನುಗ್ರಹಿಸಿಕೊಟ್ಟ, **ನಿರೈ**= ಅಮೂಲ್ಯವಾದ, **ಮಣಿಪ್ಪೂಣಣಿ** = ರತ್ನಹಾರವನ್ನು, **ಕೊಂಡು** = ಧರಿಸಿಕೊಂಡು, **ಇಲವಣನ್ತನ್ನೈ**=ಲವಣಾಸುರನನ್ನು, **ತಂಬಿಯಾಲ್**=ತಮ್ಮನಾದ ಶತ್ರುಘ್ನನಿಂದ, **ವಾನೇತ್ತಿ**=ಯುದ್ಧದಲ್ಲಿ ಮಡಿದು ವೀರಸ್ವರ್ಗವನ್ನು ಪಡೆಯುವಂತೆ ಮಾಡಿ, **ಮುನಿವನ್**=ದೂರ್ವಾಸ ಮುನಿಗಳು, **ವೇಂಡ**=ತಾವು ಬಂದಿರುವಿಕೆಯನ್ನು ಶ್ರೀರಾಮನಿಗೆ ತಿಳಿಸಬೇಕೆಂದು ನಿರ್ಬಂಧಿಸಿದುದರಿಂದ, (ಲಕ್ಷ್ಮಣನು ಶ್ರೀರಾಮನ ಆಜ್ಞಾಭಂಗವನ್ನು ಮಾಡಿ ಶ್ರೀರಾಮನ ಮಾತನ್ನು ಮೀರಿ, ಅವನು ಬೇಡವೆಂದು ಹೇಳಿದ್ದ ಸಮಯದಲ್ಲಿ ಬಂದು ತಿಳಿಸಿದುದರಿಂದ) **ತಿರಲ್ ವಿಳಂಗುಂ**=

ಶತ್ರುಗಳನ್ನು ಜಯಿಸುವ ತೋಳ್ಬಲ ಪರಾಕ್ರಮವುಳ್ಳ, **ಇಲಕ್ಕುವನೈ**= ಲಕ್ಷ್ಮಣನನ್ನು, **ಪಿರಿನ್ದಾನ್ಱನ್ನೈ** = ಬಿಟ್ಟಗಲಿದವನಾಗಿ, **ತಿಲ್ಲೈನಗರ್ ತಿರುಚಿತ್ತಿರಕೂಟಂ ತನ್ನುಳ್** = ತಿಲ್ಲೈ ತಿರುಚಿತ್ತಿರಕೂಟ ದಿವ್ಯಕ್ಷೇತ್ರದಲ್ಲಿ, **ಉಱೈವಾನೈ**=ನಿತ್ಯವಾಸ ಮಾಡುತ್ತಿರುವ ನನ್ನ ಸ್ವಾಮಿಯನ್ನು, **ಮಱವಾತ**= ಮರೆಯದಿರುವ, **ಉಳ್ಳನ್ದನ್ನೈಯುಡೈಯೋಂ** = ಮನಸ್ಸನ್ನು ಹೊಂದಿರುವ ನಾವು, **ಮತ್ತು**=ಮತ್ತೆ ಇನ್ನು ಮುಂದೆ, **ಉಱು**=ಅವನನ್ನು ಅನುಭವಿಸದೇ ಇರುವುದರಿಂದ ಉಂಟಾಗುವ, **ತುಯರಂ**=ದುಃಖವನ್ನು, **ಅಡೈಯೋಂ**= ಹೊಂದುವುದಿಲ್ಲ. ||೯||

ತನ್ನ ವರ್ಣಾಶ್ರಮ ಧರ್ಮವನ್ನು ಮೀರಿ, ಮಹತ್ತರವಾದ ತಪಸ್ಸನ್ನಾಚರಿಸುತ್ತಿದ್ದ ಶಂಬೂಕನೆಂಬ ಶೂದ್ರನನ್ನು, ಅವನಿರುವ ಸ್ಥಳಕ್ಕೆ ಹುಡುಕಿಕೊಂಡು ಹೋಗಿ ಕೊಂದು, ವಿಲಕ್ಷಣನಾದ, ವೇದಾಧ್ಯಯನ ಸಂಪನ್ನನಾದ ಬ್ರಾಹ್ಮಣಪುತ್ರನ ಪ್ರಾಣವನ್ನುಳಿಸಿ; ತಪಸ್ವಿಯಾದ ಅಗಸ್ತ್ಯ ಮಹರ್ಷಿಗಳು ಅನುಗ್ರಹಿಸಿಕೊಟ್ಟ, ಅಮೂಲ್ಯವಾದ ರತ್ನಹಾರವನ್ನು ತಾನು ಧರಿಸಿಕೊಂಡು; ಲವಣಾಸುರನನ್ನು, ತನ್ನ ತಮ್ಮನಾದ ಶತ್ರುಘ್ನನಿಂದ ರಣರಂಗದಲ್ಲಿ ಮಡಿಯುವಂತೆ ಮಾಡಿಸಿ ವೀರಸ್ವರ್ಗವನ್ನು ಸೇರುವಂತೆ ಮಾಡಿ; ದೂರ್ವಾಸ ಮಹರ್ಷಿಗಳು, ತಾನು ಬಂದಿರುವ ವಿಷಯವನ್ನು ಶ್ರೀರಾಮನಿಗೆ ಆಗಲೇ ತಿಳಿಸಬೇಕೆಂದು ನಿರ್ಬಂಧಿಸಿದುದರಿಂದ, ತಾನು ಬರಬಾರದೆಂದು ಕಟ್ಟಲೆಯಿಟ್ಟ ಸಮಯದಲ್ಲಿ ತನ್ನ ಆಜ್ಞೆಯನ್ನು ಮೀರಿ ಲಕ್ಷ್ಮಣನು ಬಂದುದರಿಂದ, ಅವನಿಂದಲೂ ದೂರನಾಗಿ, ಇಂದು ತಿಲ್ಲೈ ತಿರುಚಿತ್ತಿರಕೂಟದಲ್ಲಿ ನಿತ್ಯವಾಸ ಮಾಡುತ್ತಿರುವ ನಮ್ಮ ಸ್ವಾಮಿಯನ್ನು ಮರೆಯದಿರುವ ಮನಸ್ಸನ್ನು ಹೊಂದಿರುವ ನಾವು, ಇನ್ನು ಮುಂದೆ ಅವನನ್ನು ಅನುಭವಿಸದಿರುವುದರಿಂದುಂಟಾಗುವ ನರಕಾದಿ ಲೋಕಗಳಲ್ಲಿದ್ದು ಅನುಭವಿಸಬೇಕಾದ ದುಃಖವನ್ನು —ಎಂದೂ ಹೊಂದುವುದಿಲ್ಲ. ||೯||

ಅನ್ಱು ಶರಾಶರಂಗಳೈ ವೈಕುಂದತ್ತೇತ್ತಿ
ಅಡಲರವಪ್ಪಗೈಯೇಱಿಯಶುರರ್ ತಮ್ಮೈವೆನ್ಱ
ಇಲಂಗುಮಣಿನೆಡುಮ್ತೋಳ್ ನಾನ್ಗುಡೈಯೆನ್ಱ
ವಿಣ್ಮುಳುದುಮೆದಿರ್ ವರತ್ತನ್ದಾಮಮೇವಿ
ಚೆನ್ಱಿನಿದು ವೀಱ್ತಿರುನ್ದವಮ್ಮಾನ್ಱನ್ನೈ
ತಿಲ್ಲೈನಗರ್ ತಿರುಚಿತ್ತಿರಕೂಟನ್ದನ್ನುಳ್
ಎನ್ಱುಂ ನಿನ್ಱಾನವನಿವನೆನ್ಱೇತ್ತಿ ನಾಳುಂ—
ಇಱೈಂಜಮಿನೋ ವೆಪ್ಪೊಳುದುಂ ತೊಂಡೀರ್ ನೀರೇ ||೧೦||

**ಅನ್ರು** — ತನ್ನ ಅವತಾರ ಪರಿಸಮಾಪ್ತಿ ಕಾಲದಲ್ಲಿ, **ಶರಾಶರಂಗಳೈ**— ಅಯೋಧ್ಯಾಪಟ್ಟಣದಲ್ಲಿದ್ದ ಜಂಗಮಸ್ಥಾವರಗಳಾದ ಎಲ್ಲ ಚೇತನರನ್ನೂ, **ವೈಕುನ್ದತ್ತು**—ಶ್ರೀವೈಕುಂಠಲೋಕಕ್ಕೆ, **ಏತ್ತಿ**—ಹೋಗುವಂತೆ ಮಾಡಿ, **ಅಡರ್** —ಅತ್ಯಧಿಕವಾದ ಬಲವುಳ್ಳ, **ಅರವಪ್ಪೈಕ್ಕೈಯೇರಿ**—ಸರ್ಪಜಾತಿಗೆ ಜನ್ಮಶತ್ರುವಾದ ಗರುಡನನ್ನು ತಾನು ಹತ್ತಿ, **ಅಶುರರ್‌ತಮ್ಮೈ**—ಆಸುರರನ್ನು, **ವೆನ್ರು**— ಜಯಿಸಿ, **ಇಲಂಗು** — ವೀರಶ್ರೀಯು ಪ್ರಕಾಶಿಸುವ, **ಮಣಿ**—ಸುಂದರವಾದ, **ನೆಡುಂ**—ದೀರ್ಘವಾದ, **ತೋಳ್‌ನಾನ್ಗು**—ನಾಲ್ಕು ತೋಳುಗಳೂ, **ತೋನ್ರ**— ಪ್ರಕಾಶಿಸುವಂತೆ, **ವಿಣ್‌ಮುಳುದುಂ**—ಪರಮಪದದಲ್ಲಿದ್ದವರೆಲ್ಲರೂ, **ಎತಿರ್‌ವರ**— ಎದಿರುಗೊಂಡು ಬರುವಂತೆ, **ತನ್**—ತನ್ನ, **ತಾಮಂ**—ಧಾಮ (ಸ್ಥಾನ)ದಲ್ಲಿ, **ಮೇವಿಕ್ಕೈನ್ರಿ** — ಹೋಗಿ ಸೇರಿ, **ಇನಿತು** — ಸುಂದರವಾಗಿ, **ವೀತ್ತಿರುನ್ದ**— ತನ್ನ ಹಿರಿಮೆಯು ಪ್ರಕಾಶಿಸುವಂತೆ ಬಿಜಯಮಾಡಿಸಿದ್ದ, **ಅಮ್ಮಾನ್‌ತನ್ನೈ**— ಸರ್ವೇಶ್ವರನಾಗಿ, **ತಿಲ್ಲೈನಗರ್ ತಿರುಚಿತ್ತಿರಕೂಟತ್ತನ್ನುಳ್** — ತಿಲ್ಲೈ ತಿರುಚಿತ್ತಿರಕೂಟದಲ್ಲಿ, **ಎನ್ರು ನಿನ್ರಾನ್**—ನಮಗೋಸ್ಕರ ನಿತ್ಯವಾದ ಮಾಡು- ತ್ತಿರುವವನನ್ನೇ, **ತೊಂಡೀರ್‌ನೀರ್** — ಅನನ್ಯ ಪ್ರಯೋಜನರಾದ ನೀವು, '**ಅವನ್**—ಆ ರೀತಿ ಇರುವವನು, **ಇವನ್**—ಈ ರೀತಿ ಇರುವವನು' **ಎನ್ರು- ಏತ್ತಿ**—ಎಂದು ಸ್ತುತಿಸಿ, **ನಾಳುಂ** — ಪ್ರತಿನಿತ್ಯವೂ, **ಇರೈಂಜುಮಿನ್**— ಆಶ್ರಯಿಸಿ ಕೃತಾರ್ಥರಾಗಿರಿ. ||೧೦||

ತನ್ನ ಅವತಾರ ಪರಿಸಮಾಪ್ತಿ ಕಾಲದಲ್ಲಿ ಅಯೋಧ್ಯಾಪಟ್ಟಣದಲ್ಲಿದ್ದ ಜಂಗಮ ಸ್ಥಾವರಗಳಾದ ಎಲ್ಲ ಚೇತನರನ್ನೂ ಶ್ರೀವೈಕುಂಠಲೋಕವನ್ನು ಸೇರುವಂತೆ ಮಾಡಿ, ಅತ್ಯಧಿಕವಾದ ಬಲವುಳ್ಳ, ಸರ್ಪಜಾತಿಗೆ ಆಜನ್ಮಶತ್ರುವಾದ ಗರುಡನನ್ನು ತಾನು ಹತ್ತಿ, ಅಸುರರನ್ನು ಜಯಿಸಿ, ವೀರಶ್ರೀಯು ಕಂಗೊಳಿಸುವ ನಾಲ್ಕು ತೋಳುಗಳೂ ಪ್ರಕಾಶಿಸುವಂತೆ. ಪರಮಪದದಲ್ಲಿದ್ದವರೆಲ್ಲರೂ ಇವನನ್ನೇ ಎದಿರುಗೊಂಡು ಬರುವಂತೆ ತನ್ನ ಧಾಮವಾದ ಶ್ರೀವೈಕುಂಠಲೋಕವನ್ನು ಸೇರಿ, ಅಲ್ಲಿ ತನ್ನ ಹಿರಿಮೆಯು ಪ್ರಕಾಶಿಸುವಂತೆ ನಾಗಪರ್ಯಂಕದಲ್ಲಿ ಬಿಜಯ ಮಾಡಿಸಿದ ಸರ್ವೇಶ್ವರನು, ಇಂದು ತಿಲ್ಲೈ ತಿರುಚಿತ್ತಿರಕೂಟ ದಿವ್ಯಕ್ಷೇತ್ರದಲ್ಲಿ ನಮಗೋಸ್ಕರ—ನಾವೆಲ್ಲರೂ ಅವನನ್ನು ದರ್ಶನಮಾಡಿ ಅವನನ್ನು ಆಶ್ರಯಿಸುವ ಸಲುವಾಗಿ ಅರ್ಚಾಮೂರ್ತಿ ಸ್ವರೂಪದಲ್ಲಿ ಬಿಜಯಮಾಡಿಸಿದ್ದಾನೆ. ಆದುದರಿಂದ ನೀವೆಲ್ಲರೂ ಬೇರಾವ ವಿಷಯಗಳನ್ನೂ ಆಸೆಪಡದೆ, (ಅನನ್ಯ ಪ್ರಯೋಜನರಾಗಿ) ಅವನ ಕಲ್ಯಾಣಗುಣಗಳನ್ನು ಹಾಡುವುದೇ ನಿಮ್ಮ ಸ್ವರೂಪವೆಂದರಿತು, 'ಅವನು ಆ ತರಹದ ಕಲ್ಯಾಣ ಗುಣಗಳುಳ್ಳವನು, ಈ ತರಹ ಲೀಲಾಚೇಷ್ಟಿತನು'—ಎಂದು ಅವನನ್ನೇ ಪ್ರತಿನಿತ್ಯವೂ ಸ್ತುತಿಸಿ, ಆಶ್ರಯಿಸಿ ಕೃತಾರ್ಥರಾಗಿರಿ—ಎಂದು ಆಳ್ವಾರ್‌ರವರು ನಮಗೆ ತಮ್ಮ ಸಂದೇಶವನ್ನು ಈ ಹಾಡಿನಲ್ಲಿ ತಿಳಿಸಿದ್ದಾರೆ. ||೧೦||

ತಿಲ್ಲೈನಗರ್ ತಿರುಚಿತ್ತಿರಕೂಟತ್ತನ್ನುಳ್
ತಿರಲ್‌ವಿಳಂಗು ಮಾರುತಿಯೋಡಮರ್‌ನ್ದಾನ್ತನ್ನೈ
ಎಲ್ಲೈಯಿಲ್ ಶೀರ್‌ತಯರದತ್ತನ್ ಮಗನಾಯ್—
ಶೋನ್ರಿತ್ತದು ಮುದಲ್, ತನ್ನುಲಗಂ ಪುಕ್ಕತೀರಾ,
ಕೊಲ್ಲಿಯಲುಂ ಪಡೈತ್ತಾನೈ ಕೊತ್ತವೊಳ್ ವಾಳ್
ಕೋಳಿಯರ್ ಕೋನ್ ಕುಡೈಕ್ಕುಲಶೇಖರನ್ ಶೊಲ್
ಶೆಯ್ದ, ನಲ್ಲಿಯಲಿನ್ ತಮಿಳ್‌ಮಾಲೈ ವತ್ತುಂ ವಲ್ಲಾರ್
ನಲನ್ತಿಕಳ್ ನಾರಣನಡಿಕ್ಕೀಳ್ ನಣ್ಣುವಾರೇ ||೧೧||

**ತಿಲ್ಲೈನಗರ್ ತಿರುಚಿತ್ತಿರಕೂಟತ್ತನ್ನುಳ್** = ತಿಲ್ಲೈ ತಿರುಚಿತ್ರಕೂಟವೆನ್ನುವ ದಿವ್ಯದೇಶದಲ್ಲಿ, **ತಿರಲ್‌ವಿಳಂಗು**=ಅತಿಯಾದ ಬಲಿಷ್ಠನಾದ, **ಮಾರುತಿಯೋಡು**=ಆಂಜನೇಯನೊಡನೆ, **ಅಮರ್‌ನ್ದಾನ್ತನ್ನೈ**=ನಿತ್ಯವಾಸ ಮಾಡುತ್ತಿರುವವನನ್ನು, **ಎಲ್ಲೈಯಿಲ್** = ಅಳವಿಲ್ಲದ, **ಶೀರ್** = ಗುಣಗಳುಳ್ಳ, **ತಯರದನ್‌ತನ್** = ದಶರಥ ಚಕ್ರವರ್ತಿಯು, **ಮಕನಾಯ್ ಶೋನ್ರಿತ್ತದು ಮುದಲಾ**=ಮಗನಾಗಿ ಅವತರಿಸಿದ ದಿನದಿಂದ, **ತನ್**=ತನ್ನ, **ಉಲಕುಂ**= ಪರಮಪದವನ್ನು, **ಪುಕ್ಕತೀರಾ** = ಹೋಗಿ ಸೇರುವತನಕವಾದ ಚರಿತ್ರವನ್ನು, **ಕೊಲ್ಲಿಯಲುಂ** = ಸಮುದ್ರದವರೆವಿಗೂ ವ್ಯಾಪಿಸಿರುವ, **ಪಡೈತ್ತಾನೈ**=ಭೂಮಿಯನ್ನೂ ಸೈನ್ಯವನ್ನೂ ಹೊಂದಿರುವ, **ಕೊತ್ತುಂ**=ತೀಕ್ಷ್ಣತೆಯನ್ನೂ, **ಒಳ್**= ಕಾಂತಿಯನ್ನೂ ಹೊಂದಿರುವ, **ವಾಳ್** = ಕತ್ತಿಯನ್ನೂ ಹೊಂದಿರುವ, **ಕೋಳಿಯರ್**=ಉರೈಯೂರಿನ ಪ್ರಜೆಗಳೆಲ್ಲರಿಗೂ, **ಕೋನ್**=ಸ್ವಾಮಿಯಾದ, **ಕೊಡೈ**=ಶ್ವೇತಚ್ಛತ್ರಧಾರಿಯಾದ, **ಕುಲಶೇಖರನ್** = ಶ್ರೀಕುಲಶೇಖರಾಳ್ವಾರ್ರವರು, **ಶೊಲ್‌ಶೆಯ್ದ** = ಅನುಗ್ರಹಿಸಿ ರಚಿಸಿಕೊಟ್ಟಿರುವ, **ನಲ್ಲಿಯಲ್**= ಸುಂದರವಾದ ಛಂದಸ್ಸಿನಿಂದ ಕೂಡಿದ, **ಇನ್**=ಇಂಪಾದ, **ತಮಿಳ್‌ಮಾಲೈ**= ತಮಿಳಿನ ಪದ್ಯಮಾಲಾರೂಪವಾದ, **ಪತ್ತುಂ** = ಈ ಹತ್ತು ಹಾಡುಗಳನ್ನೂ, **ವಲ್ಲಾರ್** = ಅರ್ಥಾನುಸಂಧಾನ ಸಹಿತವಾಗಿ ಹಾಡುವವರು, **ನಲಂತಿಕಳ್**= ಅತ್ಯಧಿಕವಾದ ಶ್ರೇಯಸ್ಸು ಮತ್ತು ಆನಂದವುಂಟಾಗುವ, **ನಾರಣ ನಡಿಕ್ಕೀಳ್**= ನಾರಾಯಣನ ತಿರುವಡಿಗಳನ್ನು, **ನಣ್ಣುವಾರ್**=(ಈ ದೇಹಾವಸಾನದಲ್ಲಿಯೇ) ಹೊಂದುತ್ತಾರೆ. ||೧೧||

ತಿಲ್ಲೈ ತಿರುಚಿತ್ರಕೂಟವೆನ್ನುವ ದಿವ್ಯದೇಶದಲ್ಲಿ, ಬಲಿಷ್ಠನಾದ ಆಂಜನೇಯನೊಡನೆ ನಿತ್ಯವಾಸ ಮಾಡುತ್ತಿರುವ ಶ್ರೀರಾಮಚಂದ್ರನು, ಅಳವಿಲ್ಲದ ಗುಣಗಳುಳ್ಳ ದಶರಥ ಚಕ್ರವರ್ತಿಯ ಮಗನಾಗಿ ಅವತರಿಸಿದ ಕ್ಷಣದಿಂದ, ಮತ್ತೆ ಪರಮಪದವನ್ನು ಸೇರುವವರೆವಿಗೂ ನಡೆಯಿಸಿದ ಲೀಲಾಕೃತ್ಯವನ್ನು, ಸಮುದ್ರದವರೆವಿಗೂ ವ್ಯಾಪಿಸಿರುವ

ಭೂಮಿಯನ್ನೂ ಅದರಲ್ಲಿರುವ ಸೈನ್ಯವನ್ನೂ ಹೊಂದಿರುವ, ತೀಕ್ಷ್ಣತೆಯಿಂದ ಹೊಳೆಯುತ್ತಿರುವ ಕತ್ತಿಯನ್ನು ಹೊಂದಿರುವ, ಉರೈಯೂರಿನ ಪ್ರಜೆಗಳೆಲ್ಲರಿಗೂ ಸ್ವಾಮಿಯಾದ, ಚಕ್ರವರ್ತಿಯು ಹೆಗ್ಗುರುತಾಗಿ ಶ್ವೇತಚ್ಛತ್ರಧಾರಿಯಾದ, ಶ್ರೀಕುಲಶೇಖರಾಳ್ವಾರ್ರವರು ಅನುಗ್ರಹಿಸಿಕೊಟ್ಟಿರುವ ಸುಂದರವಾದ ಕಾವ್ಯಗುಣಗಳಿಂದ ಕೂಡಿದ, ಇಂಪಾದ ತಮಿಳಿನ ಪದ್ಯಮಾಲಾರೂಪವಾದ ಈ ಹತ್ತು ಹಾಡುಗಳನ್ನೂ ಅರ್ಥಾನುಸಂಧಾನಪೂರ್ವಕವಾಗಿ ಅಭ್ಯಾಸ ಮಾಡುವವರು ನಿರಂತರ ಶ್ರೀಯಸ್ಸು ಮತ್ತು ಆನಂದವನ್ನುಂಟುಮಾಡುವ ಶ್ರೀಮನ್ನಾರಾಯಣನ ಅಡಿದಾವರೆಗಳನ್ನು ಈ ದೇಹಾವಸಾನದಲ್ಲಿಯೇ ಹೊಂದುತ್ತಾರೆ. ||೧೧||

—ಇಲ್ಲಿಗೆ ಕುಲಶೇಖರಾಳ್ವಾರ್ರವರ ಪೆರುಮಾಳ್ ತಿರುಮೊಳಿಯು ಕನ್ನಡ ಪ್ರತಿಪದಾರ್ಥ ಮತ್ತು ತಾತ್ಪರ್ಯವು ಮುಕ್ತಾಯವಾಗಿದೆ.

"ಕುಲಶೇಖರಾಳ್ವಾರ್ ತಿರುವಡಿಕಳೇ ಶರಣಮ್"

"ಸರ್ವಂ ಶ್ರೀ ಕೃಷ್ಣಾರ್ಪಣಮಸ್ತು" ||

---

## ಕುಲಶೇಖರಾಳ್ವಾರ್ರವರ ಸನ್ನಿಧಾನದಲ್ಲಿ ಪ್ರಾರ್ಥನೆ

—o—

ಪೊನ್ಪುರೈಯುಂ ವೇಲ್ ಕುಲಶೇಖರನೇ! ಮಾಶಿ-
ಪುನರ್ ಪೂಶತ್ತೆಳಿಲ್ ವಂಜಿಕ್ಕಳತ್ತಿಲ್ ತೋನ್ರಿ
ಅನ್ಪುಡನೇ ನಂಬೆರುಮಾಳ್ ಶೆಂಬೊಕೋರ್ಯಿಲ್
ಅನ್ಪೆತ್ತುಲಗಿಲ್ ಪೆರುಮಾಳ್‌ಪುಮಡಿಯೊರ್ ತಂಗಳ್,
ಇನ್ಪಮಿಗು ಪೆರುಂ ಕುಳುವುಂ ಕಾಣ, ಮಣ್ಮೇಲ್-
"ಇರುಳಿರಿಯ"–ಎನ್ರೆಡುತ್ತ ಇಶೈಯಾಲ್ ಶೊನ್ನ
ನನ್ಪೊರುಳ್ ಶೇರ್ ತಿರುಮೊಳಿನೂತ್ತೈನ್ದು ಪಾಟ್ಟುಂ
ನನ್ರಾಹ ಎನಕ್ಕರುಳ್ ಶೆಯ್ ನಲ್ಮ ನೀಯೇ ||

ಪೊನ್ ಪುರೈಯುಂ ವೇಲ್=ಹೊನ್ನಿನಂತೆ ಹೊಳೆಯುವ ವೇಲಾಯುಧವನ್ನುಳ್ಳ, ಕುಲಶೇಖರನೇ = ಕುಲಶೇಖರಾಳ್ವಾರ್ರವರೇ!, ಮಾಶಿ ಪುನಪೂಶತ್ತು=ಮಾಶಿ (ಕುಂಭ) ಮಾಸದ ಪುನರ್ವಸು ನಕ್ಷತ್ರದಿಂದ ಕೂಡಿದ ಶುಭದಿನದಲ್ಲಿ,

**ಎಳಿಲ್ ವಂಜಿಕ್ಕಳತ್ತಿಲ್ ತೋನ್ರಿ**=ಸುಂದರವಾದ "ವಂಜಿಕ್ಕಳಂ"—ಎಂಬ ದಿವ್ಯ ಸ್ಥಳದಲ್ಲಿ ಅವತರಿಸಿ, **ಅನ್ಬುಡನೇ**=ಭಕ್ತಿಯಿಂದ, **ನಂಪೆರುಮಾಳ್**=ನಮ್ಮ ಸ್ವಾಮಿಯಾದ ಶ್ರೀರಂಗನಾಥನ, **ಶೆಂ ಪೊನ್ ಕೋಯಿಲ್**=ಕೆಂಪು ಹೊನ್ನಿನ ಶ್ರೀರಂಗದಲ್ಲಿರುವ, **ಅನೈತ್ತು ಉಲಹಿನ್ ಪೆರುವಾಳ್ವುಂ**=ಪ್ರಪಂಚದಲ್ಲಿನ ಎಲ್ಲ ಜನರ ಅತಿ ಮಹತ್ತರವಾದ ಐಶ್ವರ್ಯವನ್ನೂ, **ಅಡಿಯಾರ್ ತಂಗಳ್**= ಭಗವದ್ದಾಸಭೂತರಾದ ಭಾಗವತೋತ್ತಮರ, **ಇನ್ಬಂ ಮಿಹು** = ಅತ್ಯಾನಂದ-ಕರವಾದ, **ಪೆರುಂ ಕುಳುವುಂ** = ಮಹಾಗೋಷ್ಠಿಯನ್ನೂ, **ಕಾಣ** = ಕಂಡು (ಅನುಭವಿಸಬೇಕೆಂದು ಆಸೆಪಟ್ಟು); **ಮಣ್ಮೇಲ್** = ಭೂಮಿಯ ಮೇಲೆ (ಅಜ್ಞಾನವನ್ನು ನಿವಾರಿಸಲು), **'ಇರುಳಿರಿಯ'-ಎನ್ರು** = 'ಇರುಳಿರಿಯ'— ಎಂದು ಪ್ರಾರಂಭವಾಗುವ, **ನಲ್ ಪೊರುಳ್ ಶೇರ್** = ಅತ್ಯುತ್ತಮವಾದ ಸಾರಾರ್ಥಗಳಡಗಿರುವ, **ತಿರುಮೊಳಿ ನೂತ್ತು ಐಂದು ಪಾಟ್ಟುಂ**='ಪೆರುಮಾಳ್ ತಿರುಮೊಳಿ' ಎಂಬ ತಮ್ಮ ಕೃತಿರತ್ನದ ೧೦೫ ಪದ್ಯಗಳನ್ನೂ, **ನೀ ನಲ್ ಹಿ**= ನೀವು ಪ್ರಸನ್ನರಾಗಿ, **ನೆನ್ರಾಹ ಎನಕ್ಕು ಅರುಳ್ ಶೆಯ್** = ಚೆನ್ನಾಗಿ ನನ್ನ ಮನಸ್ಸಿನಲ್ಲಿ ನೆಲೆಯಾಗಿ ನಿಲ್ಲುವಂತೆ ನನಗೆ ಕೃಪೆ ಮಾಡಿರಿ.

ಹೊನ್ನಿನಂತೆ ಹೊಳೆಯುವ ವೇಲಾಯುಧವನ್ನು ಕೈಯಲ್ಲಿ ಧರಿಸಿರುವ ಎಲೈ! ಕುಲಶೇಖರಾಳ್ವಾರ್ರವರೇ!, ಕುಂಭಮಾಸದ ಪುನರ್ವಸು ನಕ್ಷತ್ರದ ದಿನದಂದು, ಸುಂದರವಾದ 'ತಿರುವಂಜಿಕ್ಕಳಂ'-ಎಂಬ ದಿವ್ಯಸ್ಥಲದಲ್ಲಿ ಅವತರಿಸಿ, ಭಕ್ತಿಯಿಂದ ಪ್ರಪಂಚದಲ್ಲಿನ ಎಲ್ಲ ಜನರ ಬಾಳ್ವಿಕೆಗೆ ಕಾರಣಭೂತವಾದ ಅತಿ ಮಹತ್ತರವಾದ ಐಶ್ವರ್ಯರೂಪವಾದ ಸ್ವರ್ಣವಿಮಾನದಿಂದ ಅಲಂಕೃತವಾದ ಶ್ರೀರಂಗಕ್ಷೇತ್ರದಲ್ಲಿ ಬಿಜಯಮಾಡಿಸಿರುವ, ನಮ್ಮ ಸ್ವಾಮಿಯಾದ ಶ್ರೀರಂಗನಾಥನ ದಿವ್ಯಮಂಗಳ-ಮೂರ್ತಿಯನ್ನೂ ಮತ್ತು ಭಾಗವತೋತ್ತಮರ ಅತ್ಯಾನಂದಕರವಾದ ಮಹಾ-ಗೋಷ್ಠಿಯನ್ನೂ, ದರ್ಶನಮಾಡಿ, ಕಣ್ಮನಗಳನ್ನು ತಣಿಸಿಕೊಳ್ಳಬೇಕೆಂದು ಆಸೆಪಟ್ಟು ಈ ಭೂಮಂಡಲದಲ್ಲಿರುವವರ ಅಜ್ಞಾನವನ್ನು ತೊಲಗಿಸಲು ಸಾಧನಭೂತವಾದ "ಇರುಳಿರಿಯ"-ಎಂದು ಪ್ರಾರಂಭವಾಗುವ, ಅತ್ಯುತ್ತಮವಾದ ಸಾರಾರ್ಥಗಳನ್ನೊಳ ಗೊಂಡು, ತಮ್ಮಿಂದ ಉಚ್ಚಸ್ವರದಲ್ಲಿ ಹಾಡಲ್ಪಟ್ಟಿರುವ, 'ಪೆರುಮಾಳ್ ತಿರುಮೊಳಿ'— ಎಂಬ ತಮ್ಮ ಕೃತಿರತ್ನದ ೧೦೫ ಪದ್ಯಗಳೂ, ಅದರಲ್ಲಿ ತಾವು ತೋಡಿಕೊಂಡಿರುವ ಭಾವಗಳೂ, ನನ್ನಲ್ಲಿ ಮನದಟ್ಟಾಗುವಂತೆ ತಾವು ನನಗೆ ಕೃಪೆಮಾಡಬೇಕಾಗಿ ಪ್ರಾರ್ಥಿಸುತ್ತೇನೆ. [—ಎಂದು ವೇದಾಂತ ದೇಶಿಕರು ತಮ್ಮ 'ಪ್ರಬಂಧ ಸಾರ' ಎಂಬ ಗ್ರಂಥದಲ್ಲಿ ಈ ಮೇಲಿನ (೭ನೆಯ) ಪದ್ಯರೂಪದಲ್ಲಿ, ನಾವು ಕುಲಶೇಖರರಲ್ಲಿ ಯಾವ ರೀತಿ—ಏನನ್ನು—ಪ್ರಾರ್ಥಿಸಬೇಕೆಂದು, ತಾವು ಪ್ರಾರ್ಥನೆ ಮಾಡುವುದರ ಮುಖಾಂತರ ನಮಗೆ ತೋರಿಕೊಟ್ಟಿದ್ದಾರೆ.]

—

## ಕುಲಶೇಖರಾಳ್ವಾರ್‌ರವರ ವಾಳ್‌ತಿರುನಾಮಮ್
(ಮಂಗಳಾಶಾಸನಮ್)

ಅಂಜನಮಾಮಲೈಪ್ಪಿರವಿಯಾದರಿತ್ತೋನ್ ವಾಳಿಯೇ
ಅಣಿಯರಂಗರ್ ಮಣತ್ತೂಣೇ ಅಡೈನ್ದುಯ್‌ನ್ದೋನ್ ವಾಳಿಯೇ
ವಂಜಿನಗರಂ ತನ್ನಿಲ್ ವಾಳವನ್ದೋನ್ ವಾಳಿಯೇ
ಮಾಶಿತನಿರ್ ಪುನರ್ಪೂಶಂ ವನ್ದುದಿತ್ತಾನ್ ವಾಳಿಯೇ
ಅಂಜಲಿನಕ್ಕುಡಪ್ಪಾಂಬಿಲಂಗೈಯಿಟ್ಟಾನ್ ವಾಳಿಯೇ
ಅನವರತ ಮಿರಾಮಕತ್ತೈಯರುಳುಮವನ್ ವಾಳಿಯೇ
ಶೆಞ್ಜೊಮೊಳಿ ನೂಟ್ರಂಜು ಶೆಪ್ಪಿನಾನ್ ವಾಳಿಯೇ
ಶೇರಲರ್ಕೋನ್ ಶೆಂಗಮಲ ತಿರುವಡಿಗಳ್ ವಾಳಿಯೇ

## ಮೂನ್ರಾವದು ಬ್ರಹ್ಮತಂತ್ರ ಸ್ವತಂತ್ರ ಜೀಯರ್ ಅರುಳಿಚ್ಚೆಯ್ದ
(ಅನುಗ್ರಹಿಸಿಕೊಟ್ಟಿರುವ) ವಾಳ್‌ತಿರುನಾಮಮ್

ಅಂಜಿನಮಾ ಮಲೈಪ್ಪಿರವಿ ಶಿನ್ದಿಪ್ಪೋನ್ ವಾಳಿಯೇ
ಅರುಣ್‌ಮಾಶಿಪ್ಪುನರ್ ಪೂಶತ್ತವತರಿತ್ತಾನ್ ವಾಳಿಯೇ
ಅಞ್ಜುಡರ್ ಶೂಳ್ ತಿರುಮಣತ್ತೂಣಡೈನ್ದಪಿರಾನ್ ವಾಳಿಯೇ
ಅಣಿಯರಂಗರಡಿಯಾರ್ಕ್ಕೇ ಆಳ್ ಪಟ್ಟಾನ್ ವಾಳಿಯೇ
ಶೆಞ್ಜಾಲಿಮಿಕುವಂಜಿನಗರ್ ವನ್ದಾನ್ ವಾಳಿಯೇ
ತಿರುಮೊಳಿನೂತ್ತ್ರೈನ್ದು ಶೆಯ್ಯುಳ್ ಶೆಪ್ಪಿನಾನ್ ವಾಳಿಯೇ
ವಂಜಮರವಡಿಯಾರ್ಕ್ಕಾಯ್ ಶೆಪದಮಿಟ್ಟಾನ್ ವಾಳಿಯೇ
ವಂಜಿಯರ್ ಕೋನ್ ಮಲರ್ ಪದಂಗಳ್ ಮಾನಿಲತ್ತಿಲ್ ವಾಳಿಯೇ

## ಕುಲಶೇಖರಾಳ್ವಾರ್‌ರವರ ವಾಳ್‌ತಿರುನಾಮಮ್
## (ಮಂಗಳಾಶಾಸನಮ್)

ಅಂಜನಮಾಮಲೈಪ್ಪಿರವಿಯಾದರಿತ್ತೋನ್ ವಾಳಿಯೇ
ಅಣಿಯರಂಗರ್ ಮಣತ್ತೂಣೇ ಅಡೈನ್ದುಯ್‌ನ್ದೋನ್ ವಾಳಿಯೇ
ವಂಜಿನಗರಂ ತನ್ನಿಲ್ ವಾಳವನ್ದೋನ್ ವಾಳಿಯೇ
ಮಾಶಿತನಿರ್ ಪುನರ್ಪೂಶಂ ವನ್ದುದಿತ್ತಾನ್ ವಾಳಿಯೇ
ಅಂಜಲೆನಕ್ಕುಡಪ್ಪಾಂಬಿಲಂಗೈಯಿಟ್ಟಾನ್ ವಾಳಿಯೇ
ಅನವರತ ಮಿರಾಮಕತೈಯರುಳುಮವನ್ ವಾಳಿಯೇ
ಶೆಞ್ಜೊಲ್ಮೊಳಿ ನೂಟ್ರೈಂಜು ಶೆಪ್ಪಿನಾನ್ ವಾಳಿಯೇ
ಶೇರಲರ್ಕೋನ್ ಶೆಂಗಮಲ ತಿರುವಡಿಗಳ್ ವಾಳಿಯೇ

## ಮೂನ್ರಾವದು ಬ್ರಹ್ಮತಂತ್ರ ಸ್ವತಂತ್ರ ಜೀಯರ್ ಅರುಳಿಚ್ಚೆಯ್ದ
## (ಅನುಗ್ರಹಿಸಿಕೊಟ್ಟಿರುವ) ವಾಳ್‌ತಿರುನಾಮಮ್

ಅಂಜನಮಾ ಮಲೈಪ್ಪಿರವಿ ಶಿನ್ದಿಪ್ಪೋನ್ ವಾಳಿಯೇ
ಅರುಣ್‌ಮಾಶಿಪ್ಪುನರ್ ಪೂಶತ್ತುವತರಿತ್ತಾನ್ ವಾಳಿಯೇ
ಅಞ್ಜುಡರ್ ಶೂಳ್ ತಿರುಮಣತ್ತೂಣಡೈನ್ದಪಿರಾನ್ ವಾಳಿಯೇ
ಅಣಿಯರಂಗರಡಿಯಾರ್‌ಕ್ಕೇ ಆಳ್ ಪಟ್ಟಾನ್ ವಾಳಿಯೇ
ಶೆಞ್ಜಾಲಿಮಿಕುವಂಜಿನಗರ್ ವನ್ದಾನ್ ವಾಳಿಯೇ
ತಿರುಮೊಳಿನೂತ್ತೈನ್ದು ಶೆಯ್ಯುಳ್ ಶೆಪ್ಪಿನಾನ್ ವಾಳಿಯೇ
ವಂಜಮರವಡಿಯಾರ್‌ಕ್ಕಾಯ್ ಶೆಪದಮಿಟ್ಟಾನ್ ವಾಳಿಯೇ
ವಂಜಿಯರ್ ಕೋನ್ ಮಲರ್ ಪದಂಗಳ್ ಮಾನಿಲತ್ತಿಲ್ ವಾಳಿಯೇ